ಶ್ರೀ ವಾದೀಂದ್ರತೀರ್ಥ ಕೃತ

# ಗುರುಗುಣಸ್ತವನಮ್



ಸಂಪಾದಕ:

ಆ. ರಾ. ಪಂಚಮುಖಿ

|| ಶ್ರೀಃ ||

ಶ್ರೀಮದ್ವ್ಯಾದೀಂದ್ರತೀರ್ಥ ವಿರಚಿತ

# ಗುರುಗುಣಸ್ತವನ

(೨ ಸಂಸ್ಕೃತ ವ್ಯಾಖ್ಯಾನಗಳು ಮತ್ತು ಕನ್ನಡದಲ್ಲಿ ಅನ್ವಯಾರ್ಥ, ತಾತ್ಪರ್ಯಾರ್ಥ, ಗುಣಪ್ರಕಾಶ ಹಾಗೂ ವಿಶೇಷ ವಿವರಣೆಗಳೊಂದಿಗೆ)



ಸಂಪಾದಕ ಮತ್ತು ಲೇಖಕ

ಆ.ರಾ. ಪಂಚಮುಖಿ



ವಿದ್ಯಾರತ್ನ ರಾ.ಸ್ವಾ.ಪಂಚಮುಖಿ ಜನ್ಮಶತಮಾನೋತ್ಸವ ಪ್ರಕಟಣೆ – ೧೧.

ಗುರುಸಾರ್ವಭೌಮ

ಶ್ರೀರಾಘವೇಂದ್ರತೀರ್ಥ ಪ್ರತಿಷ್ಠಾನಂ

ಧಾರವಾಡ

ಪ್ರಕಾಶಕರು :

ಗುರುಸಾರ್ವಭೌಮ
ಶ್ರೀ ರಾಘವೇಂದ್ರತೀರ್ಥ ಪ್ರತಿಷ್ಠಾನಂ,
"ಪವಮಾನ ಸದನ",
ಧಾರವಾಡ – 7.



ಪ್ರಥಮ ಆವೃತ್ತಿ : ಜನೇವರಿ, ೨೦೦೦
ಪ್ರತಿಗಳು : ೧೦೦೦

ಬೆಲೆ : ರೂ. **80 /-**

*ಅಕ್ಷರವಿನ್ಯಾಸ :*

ಶ್ರೀಗ್ರಾಫಿಕ್ಸ್
ಮಾಳಮಡ್ಡಿ, ಧಾರವಾಡ - 7
ಫೋ.: 447969

*ಮುದ್ರಕರು :*

ಪವಮಾನ ಮುದ್ರಣಾಲಯ
ಧಾರವಾಡ.

ಶ್ರೀಮದ್ವಾದೀಂದ್ರತೀರ್ಥ ವಿರಚಿತಂ

# ಗುರುಗುಣಸ್ತವನಂ

## ಪರಿವಿಡಿ

ಶ್ರೀ ೧೦೦೮ ಶ್ರೀಮತ್ಸುಶಮೀಂದ್ರತೀರ್ಥಶ್ರೀಪಾದಂಗಳವರ ಅನುಗ್ರಹವಚನ

## *ಭಾಗ - ೨*





|| ಶ್ರೀಮನ್ಮೂಲರಾಮೋ ವಿಜಯತೇ ||  || ಶ್ರೀಗುರುರಾಜೋ ವಿಜಯತೇ ||



ಶ್ರೀಮದ್ಧಂಸನಾಮಕಪರಮಾತ್ಮಸಮಾರಬ್ಧಪರಂಪರಾಗತಶ್ರೀಮದಾನಂದತೀರ್ಥ-
ಭಗವತ್ಪಾದಾಚಾರ್ಯಮೂಲಮಹಾಸಂಸ್ಥಾನಾಧೀಶ್ವರ, ಶ್ರೀಮದ್ರಾಘವೇಂದ್ರ-
ಗುರುಸಾರ್ವಭೌಮವೇದಾಂತಸಾಮ್ರಾಜ್ಯದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರ,
ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯೇತ್ಯಾದ್ಯಮಂದಬಿರುದಬೃಂದವಿಭೂಷಿತ,
ಶ್ರೀಮತ್ಸುಯಮೀಂದ್ರತೀರ್ಥಶ್ರೀಪಾದಕರಕಮಲಸಂಜಾತ
ಶ್ರೀಮತ್ಸುಜಯೀಂದ್ರತೀರ್ಥಶ್ರೀಪಾದವರಕುಮಾರಕ
ಶ್ರೀ ೧೦೦೮ ಶ್ರೀಶ್ರೀಮತ್ಸುಶಮೀಂದ್ರತೀರ್ಥಶ್ರೀಪಾದರ

# ಅನುಗ್ರಹ ವಚನ

ಶ್ರೀಶ್ರೀಮದ್ವಾದೀಂದ್ರತೀರ್ಥಶ್ರೀಪಾದಂಗಳವರ "ಗುರುಗುಣಸ್ತವನಂ" ಎಂಬ ಕೃತಿಯನ್ನು ಸಂಸ್ಕೃತಮೂಲ ಹಾಗೂ ಶ್ರೀವಸುಧೇಂದ್ರತೀರ್ಥರ ವ್ಯಾಖ್ಯಾನ ಮತ್ತು ಶ್ರೀಜಯರಾಮಾಚಾರ್ಯರ (ಶ್ರೀಧೀರೇಂದ್ರತೀರ್ಥರು) ವ್ಯಾಖ್ಯಾನ ಹೀಗೆ ಎರಡು ವ್ಯಾಖ್ಯಾನಗಳೊಂದಿಗೆ ನಮ್ಮ ಪ್ರಿಯಶಿಷ್ಯರಾದ ಧಾರವಾಡದ ಶ್ರೀಆನಂದತೀರ್ಥಾಚಾರ್ಯ ಪಂಚಮುಖಿಯವರು ಪ್ರಕಟಿಸುತ್ತಿರುವುದನ್ನು ಕಂಡು ನಮಗೆ ತುಂಬಾ ಸಂತೋಷವಾಗಿದೆ. ಏಕತ್ರ ಎರಡೂ ವ್ಯಾಖ್ಯಾನಗಳೊಂದಿಗೆ ಗುರುಗುಣಸ್ತವನವು ಇದುವರೆಗೆ ಪ್ರಕಾಶಿತವಾಗಿರಲಿಲ್ಲ.

ಈ ಪ್ರಕಾಶನದಿಂದ ಶ್ರೀಗುರುಸಾರ್ವಭೌಮರ ಅನೇಕ ಕೃತಿಗಳ ಮೇಲೆ ಹಾಗೂ ಅವರ ಮಹಿಮೆಗಳ ಮೇಲೆ ಬೆಳಕು ಚೆಲ್ಲುವ ಗುರುಗುಣಸ್ತವನ ಕಾವ್ಯರಸವನ್ನು ವ್ಯಾಖ್ಯಾನಗಳ ಸಹಾಯದಿಂದ ಸವಿಯಲು ಜಿಜ್ಞಾಸುಗಳಾದ ಶ್ರೀಗುರುಸಾರ್ವಭೌಮರ ಭಕ್ತರಿಗೆ ಬಹಳ ಅನುಕೂಲವಾಗುವುದು.

ಸಂಸ್ಕೃತ ಬಾರದವರೂ ಗುರುಗುಣಸ್ತವನವನ್ನು ಓದಿ ಗುರುಮಹಿಮೆಯನ್ನರಿತು ಆನಂದಿಸಲೆಂದು ಇದನ್ನು ಕನ್ನಡದಲ್ಲಿ ಕೂಡ ಅನ್ವಯಾರ್ಥ, ತಾತ್ಪರ್ಯಾರ್ಥ ಹಾಗೂ ವಿಶೇಷವಿಚಾರಗಳೊಂದಿಗೆ ಪ್ರಕಟಿಸಿದ್ದು ಸ್ತುತ್ಯವಾದ ಕಾರ್ಯವಾಗಿದೆ. 'ವಿಶೇಷವಿಚಾರ' ಹಾಗೂ 'ಪರಿಶಿಷ್ಟ'ದಲ್ಲಿ ಪಂಚಮುಖಿಯವರು ತಮ್ಮ ಕೆಲವು ವಿಚಾರಗಳನ್ನು ಸಪ್ರಮಾಣ ಮಂಡಿಸಿದ್ದಾರೆ. ಶ್ರೀಗುರುಸಾರ್ವಭೌಮರ ಭಕ್ತರು ಈ ಸ್ತವನವನ್ನು ಓದಿ ಪಾರಾಯಣ, ಅಧ್ಯಾಪನಾದಿಗಳನ್ನು ಮಾಡಿ ಶ್ರೀಗುರುಸಾರ್ವಭೌಮರಲ್ಲಿ ಇನ್ನೂ ಅಧಿಕವಾದ ಭಕ್ತಿಯನ್ನು ಮಾಡಿ ಅವರ ಅನುಗ್ರಹಕ್ಕೆ ಪಾತ್ರರಾಗಲಿ ಎಂದು ಆಶಿಸುತ್ತೇವೆ. ಶ್ರೀಪಂಚಮುಖಿ ಆನಂದತೀರ್ಥಾಚಾರ್ಯರು ಇಂಥ ಇನ್ನೂ ಅನೇಕ ಕೃತಿಗಳನ್ನು ರಚಿಸಿ ಶ್ರೀಗುರುಸಾರ್ವಭೌಮರ ಸೇವೆಯನ್ನು ಮಾಡಿ ಜ್ಞಾನಭಕ್ತಿವೈರಾಗ್ಯಸಂಪತ್ತನ್ನು ಹೊಂದಿ ಶ್ರೀಗುರುಸಾರ್ವಭೌಮರ ಅನುಗ್ರಹಕ್ಕೆ ಪಾತ್ರರಾಗಲಿ ಎಂದು ನಮ್ಮ ಉಪಾಸ್ಯಮೂರ್ತಿ ಶ್ರೀಮದ್ರಾಘವೇಂದ್ರತೀರ್ಥಗುರುಸಾರ್ವಭೌಮಾಂತರ್ಗತ ಶ್ರೀಭಾರತೀರಮಣಮುಖ್ಯ-ಪ್ರಾಣಾಂತರ್ಗತ ಶ್ರೀಮನ್ಮೂಲರಘುಪತಿವೇದವ್ಯಾಸರಲ್ಲಿ ಪ್ರಾರ್ಥಿಸುತ್ತ ಆಶೀರ್ವದಿಸುತ್ತೇವೆ.

ಇತ್ಯನೇಕ ನಾರಾಯಣ ಸ್ಮರಣೆಗಳು.

ಧಾರವಾಡ-ಹುಬ್ಬಳ್ಳಿ ಮುಕ್ಕಾಂ

೧೫.೧೨.೧೯೯೯

ಶ್ರೀಮೂಲರಾಮೋ ವಿಜಯತೇ

# ಯತಿವರೇಣ್ಯರ ಪರಂಪರೆ

(ರಾಯರ ಮಠ)



|| ಶ್ರೀಮತ್ಸುಶಮೀಂದ್ರತೀರ್ಥರು ||



|| ಜೀಯಾತ್ ಶ್ರೀಸುಶಮೀಂದ್ರಸಂಯಮಿಮಣಿಃ ವೇದಾಂತರಾಜ್ಯೇ ಚಿರಮ್ ||

## ಶ್ರೀಸುಯಮೀಂದ್ರತೀರ್ಥರು



ಶ್ರೀಸುಯಮೀಂದ್ರರ
ಬೃಂದಾವನ
(ಮಂತ್ರಾಲಯ)



## ಶ್ರೀಸುಜಯೀಂದ್ರತೀರ್ಥರು



ಶ್ರೀಸುಜಯೀಂದ್ರರ
ಬೃಂದಾವನ
(ಮಂತ್ರಾಲಯ)



## ಗುರುಗುಣಸ್ತವನದ ಕರ್ತೃಗಳು



ಶ್ರೀವಾದೀಂದ್ರತೀರ್ಥರ ಬೃಂದಾವನ (ಮಂತ್ರಾಲಯ)

### ವ್ಯಾಖ್ಯಾಕಾರರು



ಶ್ರೀವಸುಧೇಂದ್ರತೀರ್ಥರ ಬೃಂದಾವನ
(ಕಾಂಚನಗಡ)

### ವ್ಯಾಖ್ಯಾಕಾರರು



ಶ್ರೀಧೀರೇಂದ್ರತೀರ್ಥರ ಬೃಂದಾವನ
(ಹೊಸರಿತ್ತಿ)

ಶ್ರೀದಿಗ್ವಿಜಯರಾಮದೇವರು ಶ್ರೀಮನ್ಮೂಲರಾಮದೇವರು ಶ್ರೀಜಯರಾಮದೇವರು

(ಶ್ಲೋಕ ೧,೨)



ಶ್ರೀವೇದವ್ಯಾಸದೇವರು

(ಶ್ಲೋಕ ೪)



ಶ್ರೀಗರುಡವಾಹನ ಲಕ್ಷ್ಮೀನಾರಾಯಣ

(ಶ್ಲೋಕ ೬)



ಅವತಾರತ್ರಯ ಮುಖ್ಯಪ್ರಾಣ, ಸೋದೆ

(ಶ್ಲೋಕ ೩)



ಶ್ರೀಮತ್ಪಂಚಮುಖಪ್ರಾಣದೇವರು

(ಶ್ಲೋಕ ೩)



ಅವತಾರತ್ರಯ ಮುಖ್ಯಪ್ರಾಣ, ಹಂಪೆ

(ಶ್ಲೋಕ ೩)



ಶ್ರೀಮನ್ಮಧ್ವಾಚಾರ್ಯರು, ಉಡುಪಿ
(ಶ್ಲೋಕ ೪)



ಶ್ರೀಮನ್ಮಧ್ವಾಚಾರ್ಯರು, ಪಾಜಕಕ್ಷೇತ್ರ
(ಶ್ಲೋಕ ೪)



ಶ್ರೀಟೀಕಾಕೃತ್ಪಾದರು, ಮಳಖೇಡ
(ಶ್ಲೋಕ ೫)



## ಶ್ರೀವಿಬುಧೇಂದ್ರತೀರ್ಥಕರಾರ್ಚಿತ ಷೋಡಶಬಾಹು ನರಸಿಂಹದೇವರು

(ಶ್ಲೋಕ ೬)



**ಶ್ರೀವಿಬುಧೇಂದ್ರತೀರ್ಥರು**

**ತಿರ್ನವೇಲಿ (ಶ್ಲೋಕ ೬)**



**ಶ್ರೀವ್ಯಾಸರಾಜತೀರ್ಥರು**

**ಆನೆಗೊಂದಿ (ಶ್ಲೋಕ ೭)**



ಶ್ರೀವಿಜಯೀಂದ್ರತೀರ್ಥರು

ಕುಂಭಕೋಣ (ಶ್ಲೋಕ ೮)



ಶ್ರೀಸುಧೀಂದ್ರತೀರ್ಥರು

ಆನೆಗೊಂದಿ (ಶ್ಲೋಕ ೯)



ಶ್ರೀಮದ್ರಾಘವೇಂದ್ರತೀರ್ಥರು ಮಂತ್ರಾಲಯಂ (ಶ್ಲೋಕ ೧೦)



## ಪ್ರತ್ನಾಃ (ಪ್ರಾಚೀನ ಗುರುಗಳು)

### ಶ್ರೀಪದ್ಮನಾಭತೀರ್ಥರು
**ಆನೆಗೊಂದಿ (ಶ್ಲೋಕ ೩೭)**



### ಶ್ರೀನರಹರಿತೀರ್ಥರು
**ಹಂಪೆ (ಶ್ಲೋಕ ೩೭)**



### ಶ್ರೀಮಾಧವತೀರ್ಥರು
**ಮಣೂರು (ಶ್ಲೋಕ ೩೭)**



### ಶ್ರೀಅಕ್ಷೋಭ್ಯತೀರ್ಥರು
**ಮಳಖೇಡ (ಶ್ಲೋಕ ೩೭)**



**ಶ್ರೀಸುಮತೀಂದ್ರತೀರ್ಥರು**

**ಶ್ರೀರಂಗ (ಶ್ಲೋಕ ೧೧)**



**ಶ್ರೀಉಪೇಂದ್ರತೀರ್ಥರು**

**ಶ್ರೀರಂಗ (ಶ್ಲೋಕ ೧೧)**



**ವಿದ್ಯಾರತ್ನ ರಾ.ಸ್ವಾ.ಪಂಚಮುಖಿ ಮತ್ತು ಕುಂ.ಸೌ. ಕಮಲಾಬಾಯಿ ರಾ. ಪಂಚಮುಖಿ**

**(ಸಂಪಾದಕರ ತಂದೆ ಹಾಗೂ ತಾಯಿ)**



## ।। ಶ್ರೀಮತ್ಸುಜಯೀಂದ್ರತೀರ್ಥರು ।।



ಸುಯಮೀಂದ್ರಕರಾಬ್ಜೋತ್ಥಂ ಸುವಿದ್ಯಾಬೋಧಕಂ ಸದಾ ।
ಸುಮೂಲರಾಮಪೂಜಾಢ್ಯಂ ಸುಜಯೀಂದ್ರಗುರುಂ ಭಜೇ ।।

# ಪ್ರಸ್ತಾವನೆ

ಮುಮುಕ್ಷುಗಳಾದವರಿಗೆ ಅತ್ಯವಶ್ಯವಾದ ಹರಿಪ್ರಸಾದವು ಗುರುಪ್ರಸಾದದಿಂದಲೇ ಸಾಧ್ಯವಾಗುವುದರಿಂದ ಈ ಗುರುಪ್ರಸಾದ ಪ್ರಾಪ್ತಿಗೆ ವಿವಿಧ ಉಪಾಯಗಳಿಂದ ಪ್ರಯತ್ನಿಸಬೇಕಾಗುತ್ತದೆ. ಇವೆಲ್ಲವುಗಳಲ್ಲಿ ಗುರುಸ್ತವನವು ಅತ್ಯಂತ ಶ್ರೇಷ್ಠವಾದ ಉಪಾಯವಾಗಿದೆ. ಪ್ರಾಚೀನ ಭಾರತೀಯ ಸಾಹಿತ್ಯದ ವಿವಿಧ ಭಾಷೆಗಳಲ್ಲಿಯೂ ಕಂಡುಬರುವ ಗುರುವರ್ಣನಪರವಾದ ಗುರುಸ್ತೋತ್ರ, ಸ್ತುತಿ, ಗುರುಗದ್ಯ ಕವಚಗಳು, ಗುರುಮಂತ್ರ, ಗುರುವಿಜಯಕಾವ್ಯಗಳು, ಗುರುನಾಟಕ, ಗುರುಚಂಪೂಕಾವ್ಯ, ಕೀರ್ತನೆ-ಗಳು ಇವೇ ಮೊದಲಾದವು ಗುರುಪ್ರಸಾದ ಪ್ರಾಪ್ತಿಯ ಉದ್ದೇಶದಿಂದಲೇ ರಚಿತವಾದ ಕೃತಿಗಳಾಗಿರುತ್ತವೆ. ಪ್ರಕೃತ ಇಂಥದೇ ಒಂದು ಕೃತಿಯಾದ **ಗುರುಗುಣಸ್ತವನವು** ದ್ವಾದಶ ಗುರುಗಳ ಸಂಕ್ಷಿಪ್ತ ವರ್ಣನೆ ಹಾಗೂ ಶ್ರೀಮದ್ರಾಘವೇಂದ್ರತೀರ್ಥರ ಕೃತಿಗಳ ಹಾಗೂ ಗುಣಗಳ ವಿಸ್ತಾರವಾದ ವರ್ಣನೆಗೆ ಮೀಸಲಾದ ಒಂದು ಶ್ರೇಷ್ಠ ಕೃತಿಯಾಗಿದೆ. ಕಲಿಯುಗ ಕಲ್ಪತರು ಹಾಗೂ ಕಾಮಧೇನು ಎಂದು ಖ್ಯಾತರಾದ ಶ್ರೀ ಶ್ರೀಮದ್ರಾಘವೇಂದ್ರತೀರ್ಥ ಗುರುಸಾರ್ವಭೌಮರ ಜೀವನ ಮತ್ತು ಕೃತಿಗಳ ಬಗ್ಗೆ ತಿಳಿದುಕೊಳ್ಳಲು 'ಶ್ರೀರಾಘವೇಂದ್ರವಿಜಯ' ಮತ್ತು 'ಗುರುಗುಣಸ್ತವನ' ಈ ಎರಡು ಗ್ರಂಥಗಳು ಮತ್ತು ಅಪ್ಪಣಾಚಾರ್ಯಕೃತ ಶ್ರೀರಾಘವೇಂದ್ರಸ್ತೋತ್ರ ಮಂಗಳಾಷ್ಟಕ ಮತ್ತು ಕವಚಗಳು ಅತ್ಯಂತ ಪ್ರಾಮಾಣಿಕವಾದ ಆಕರಗಳಾಗಿವೆ. ಶ್ರೀರಾಘವೇಂದ್ರ-ವಿಜಯವು ಶ್ರೀರಾಯರ ಪೂರ್ವಾಶ್ರಮ ಸೋದರಳಿಯ ಶ್ರೀನಾರಾಯಣಾಚಾರ್ಯರಿಂದ ಶ್ರೀರಾಯರ ಜೀವಿತಕಾಲದಲ್ಲೇ ರಚಿಸಲ್ಪಟ್ಟಿದ್ದರೆ, ಗುರುಗುಣಸ್ತವನವು ಅವರ ಪೂರ್ವಾಶ್ರಮ ಮರಿ ಮಗ ಶ್ರೀ ಶ್ರೀನಿವಾಸಾಚಾರ್ಯರು ಶ್ರೀರಾಯರ ನಂತರ ೫ನೆಯ ಪೀಠಾಧಿಪತಿ ಶ್ರೀವಾದೀಂದ್ರತೀರ್ಥರೆಂದಾದ ಮೇಲೆ ಅವರಿಂದ ರಚಿಸಲ್ಪಟ್ಟಿದ್ದು ಇರುತ್ತದೆ. ಗುರುಗುಣಸ್ತವನವು ಶ್ರೀರಾಯರ ವಿಶಿಷ್ಟ ಕೃತಿಗಳ ಮೇಲೆ, ಅವರ ಗ್ರಂಥರಚನಾಕೌಶಲ ಮತ್ತು ಕೆಲವು ಅನಿತರ ಸಾಧಾರಣ ಗುಣಗಳ ಮೇಲೆ ಬೆಳಕನ್ನು ಚೆಲ್ಲುವ ಒಂದು ಶ್ರೇಷ್ಠ ಸ್ತೋತ್ರಗ್ರಂಥವಾಗಿದೆ. ವಿವಿಧ ಅಲಂಕಾರಗಳಿಂದಲೂ, ಪ್ರಧಾನವಾಗಿ ಭಕ್ತಿರಸದಿಂದಲೂ, ನೀತಿಬೋಧೆಗಳಿಂದಲೂ ಹಾಗೂ ನ್ಯಾಯಮಾಲೆ-ಗಳಿಂದಲೂ ಪರಿಪ್ಲುತವಾದ ಈ ಸ್ತೋತ್ರವು ಒಂದು ಖಂಡಕಾವ್ಯಕ್ಕೆ ಸಮಾನವಾಗಿ ನಿಂತಿದೆ. ಇದರಲ್ಲಿ ಶ್ರೀರಾಯರಿಗಿಂತ ಪೂರ್ವದಲ್ಲಿದ್ದ ಗುರುಗಳನ್ನು ಕೆಲವೇ ಶ್ಲೋಕಗಳಿಂದ ವರ್ಣಿಸಲಾಗಿದ್ದರೂ ಬಹು ಭಾಗವು ಶ್ರೀರಾಯರ ಗುಣಸ್ತವನಕ್ಕೇ ಮೀಸಲಾಗಿರುವುದರಿಂದ ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರೇ ಈ ಖಂಡ-ಕಾವ್ಯದ ನಾಯಕರಾಗಿದ್ದಾರೆಂದು ತಿಳಿಯಬಹುದು.

ಶ್ರೀರಾಯರು ಸುಮಾರು ೪೮ ಗ್ರಂಥಗಳನ್ನು ರಚಿಸಿದ್ದಾರೆಂದು ಇದುವರೆಗಿನ ಪ್ರಸಿದ್ಧಿ. ಇವುಗಳಲ್ಲಿಯ ೧-೩) ವೇದತ್ರಯ ವಿವೃತ್ತಿ ೪) ಗೀತಾಭಾಷ್ಯ ಟೀಕಾ ಪ್ರಮೇಯದೀಪಿಕಾ ಭಾವದೀಪ, ೫-೭) ಪುರುಷಸೂಕ್ತಾದಿ ಪಂಚಸೂಕ್ತಗಳಲ್ಲಿ ಪುರುಷಸೂಕ್ತ ಮತ್ತು ಹಿರಣ್ಯಗರ್ಭ ಸೂಕ್ತವ್ಯಾಖ್ಯಾನ ಬಿಟ್ಟು ಉಳಿದ ೩ ಸೂಕ್ತಗಳ ವ್ಯಾಖ್ಯಾನಗಳು, ೮) ಐತರೇಯ ಉಪನಿಷತ್ ಖಂಡಾರ್ಥ ಇವು ಇದುವರೆಗೆ ಅನುಪಲಬ್ಧ ಅಥವಾ ಅಪ್ರಕಟಿತ. ಗುರುಗುಣಸ್ತವನದಲ್ಲಿ ಈ ಎಲ್ಲ ಗ್ರಂಥಗಳ ಸ್ಪಷ್ಟ ಉಲ್ಲೇಖವಿದೆ. ಇವಲ್ಲದೇ ಇತ್ತೀಚೆಗೆ ಉಪಲಬ್ಧವಾದ ೧) ಪ್ರಮೇಯಸಂಗ್ರಹ ೨) ತಿಥಿನಿರ್ಣಯ ೩) ನದೀ ಸ್ತೋತ್ರ ೪) ದಶಾವತಾರಸ್ತುತಿ ಇವೂ ಶ್ರೀರಾಘವೇಂದ್ರತೀರ್ಥರ ಕೃತಿಗಳೆಂದು ಸಂಶೋಧಕ ವಿದ್ವಾಂಸರಿಂದ ಪರಿಗಣಿಸಲ್ಪಟ್ಟಿದ್ದರೂ ಗುರುಗುಣಸ್ತವನದಲ್ಲಿ ಇವುಗಳ ಉಲ್ಲೇಖವಿಲ್ಲ. ಈ ಗ್ರಂಥಗಳ ಬಗ್ಗೆ ಸಂಶೋಧನೆ ಅಗತ್ಯ. ಆಶ್ಚರ್ಯವೆಂದರೆ ಅತ್ಯಂತ ಪ್ರಸಿದ್ಧವಾದ ಪ್ರಾತಃಸಂಕಲ್ಪಗದ್ಯದ ಬಗ್ಗೆಯೇ ಈ ಸ್ತವನದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿಲ್ಲ. ಆದರೂ ಈ ಮೇಲಿನ ಗ್ರಂಥಗಳಲ್ಲಿ ಕೆಲವನ್ನಾದರೂ "ವಾಚಾ ಸಂಕ್ಷಿಪ್ತಯಾ...." ಎಂಬ ಶ್ಲೋಕವೊಂದರಿಂದಲೇ (೩೫ ನೆಯ ಶ್ಲೋಕ) ಸಂಗ್ರಹಿಸಬಹುದೆಂದು ತೋರುತ್ತದೆ ಏಕೆಂದರೆ ಶ್ರೀವಸುಧೇಂದ್ರತೀರ್ಥರು ಈ ಶ್ಲೋಕದ ಅವತಾರಿಕೆಯಲ್ಲಿ "ಕೃಷ್ಣಚಾರಿತ್ರರಾಮಚಾರಿತ್ರಾದಿಗ್ರಂಥಕರ್ತೃತ್ವೇನ ಸ್ತೌತಿ" ಎಂದಿದ್ದಾರೆ.

ಶ್ರೀವಾದೀಂದ್ರತೀರ್ಥಕೃತ 'ಗುರುಗುಣಸ್ತವನ'ಕ್ಕೆ ಶ್ರೀವಸುಧೇಂದ್ರತೀರ್ಥರು ಮತ್ತು ಶ್ರೀಜಯರಾಮಾರ್ಯರೆನ್ನುವವರು (ಶ್ರೀಧೀರೇಂದ್ರತೀರ್ಥರು) ಸಂಸ್ಕೃತದಲ್ಲಿ ಬರೆದ ವ್ಯಾಖ್ಯಾನಗಳು ಈಗ ಉಪಲಬ್ಧವಾಗಿರುತ್ತವೆ. ಗುರುಗುಣಸ್ತವನಕ್ಕೆ ರೊಟ್ಟಿ ಮನೆತನದ ಪಂಡಿತರೊಬ್ಬರು ವ್ಯಾಖ್ಯಾನ ಬರೆದಿರುವ ವದಂತಿ ಇದೆ. ಮೊದಲು ಗುರುಗುಣಸ್ತವನದ ಕರ್ತೃಗಳಾದ ಶ್ರೀವಾದೀಂದ್ರತೀರ್ಥರ ಪರಿಚಯವನ್ನು ನಂತರ ವ್ಯಾಖ್ಯಾಕಾರರಾದ ಶ್ರೀವಸುಧೇಂದ್ರತೀರ್ಥರು ಹಾಗೂ ಶ್ರೀಜಯರಾಮಾರ್ಯರು ಇವರ ಪರಿಚಯವನ್ನು ಯಥಾಮತಿ ಮಾಡಿಕೊಟ್ಟು ನಂತರ ಗುರುಗುಣಸ್ತವನದ ಬಗ್ಗೆ ಕೆಲವು ವಿಚಾರಗಳನ್ನು ಮಂಡಿಸಲಾಗುವದು.

## ಗುರುಗುಣಸ್ತವನದ ಕರ್ತೃ ಪರಿಚಯ :

**ಶ್ರೀವಾದೀಂದ್ರತೀರ್ಥರು** (ಕ್ರಿ.ಶ. ೧೭೨೮-೧೭೫೦) : ಗುರುಗುಣಸ್ತವನವೆಂಬ ಖಂಡಕಾವ್ಯವನ್ನು ರಚಿಸಿದವರು ಶ್ರೀವಾದೀಂದ್ರತೀರ್ಥರು. ಇವರ ಪೂರ್ವಾಶ್ರಮ ವಂಶವು ಉಪಲಬ್ಧವಿರುವ ದಾಖಲೆಗಳ ಆಧಾರದಂತೆ ಕೆಳಗಿನಂತಿರುತ್ತದೆ –

ಗೌತಮವಂಶದ ವೀಣಾ ಕೃಷ್ಣಭಟ್ಟರ ಮಕ್ಕಳು ವೀಣಾ ಕನಕಾಚಲಭಟ್ಟರು. ಇವರ ಮಕ್ಕಳು ವೀಣಾ ತಿಮ್ಮಣ್ಣಭಟ್ಟರು. ವೀಣಾ ತಿಮ್ಮಣ್ಣಭಟ್ಟರಿಗೆ ಗೋಪಿಕಾಂಬಾ

ದೇವಿಯಲ್ಲಿ ವೆಂಕಟಾಂಬಾ ಎಂಬ ಮಗಳು ಮತ್ತು ಗುರುರಾಜಾಚಾರ್ಯ ಮತ್ತು ವೆಂಕಟನಾಥಾರ್ಯ ಎಂಬ ಇಬ್ಬರು ಗಂಡುಮಕ್ಕಳಿದ್ದರು. ಗಂಡುಮಕ್ಕಳಲ್ಲಿ ಚಿಕ್ಕವರಾದ ವೆಂಕಟನಾಥಾರ್ಯರೇ ಮುಂದೆ ಗುರುಗಳಾದ ಶ್ರೀಸುಧೀಂದ್ರತೀರ್ಥರಿಂದ ತುರೀಯಾಶ್ರಮ-ವನ್ನು ಸ್ವೀಕರಿಸಿದ ನಂತರ ಶ್ರೀರಾಘವೇಂದ್ರತೀರ್ಥರೆಂಬ ನಾಮಧೇಯವುಳ್ಳವರಾದರು. ವೆಂಕಟನಾಥಾರ್ಯರಿಗೆ ಲಕ್ಷ್ಮೀನಾರಾಯಣಾರ್ಯ ಎಂಬ ಒಬ್ಬ ಪುತ್ರರಿದ್ದರು. ಈ ಲಕ್ಷ್ಮೀನಾರಾಯಣಾರ್ಯರ ಮಕ್ಕಳಾದ ಪುರುಷೋತ್ತಮಾಚಾರ್ಯರಿಗೆ ಶ್ರೀನಿವಾಸಾಚಾರ್ಯ ಮತ್ತು ವೇಣುಗೋಪಾಲಾಚಾರ್ಯ ಎಂದು ಇಬ್ಬರು ಗಂಡುಮಕ್ಕಳು. ಇವರಿಬ್ಬರಲ್ಲಿ ಹಿರಿಯರಾದ ಶ್ರೀನಿವಾಸಾಚಾರ್ಯರು ಚಿಕ್ಕವರಿದ್ದಾಗ ಶ್ರೀರಾಯರನ್ನು ನೋಡಿದ್ದರೆಂಬ ಪ್ರತೀತಿ ಇದೆ.

ಶ್ರೀನಿವಾಸಾಚಾರ್ಯರು ತಮ್ಮ ಬಾಲ್ಯದಲ್ಲಿ ಕುಲಗುರುಗಳಾಗಿದ್ದ ಶ್ರೀಸುಮತೀಂದ್ರ-ತೀರ್ಥರಲ್ಲಿ ಕಾವ್ಯನಾಟಕಾಲಂಕಾರಾದಿ ಸಾಹಿತ್ಯ ಶಾಸ್ತ್ರಗ್ರಂಥಗಳನ್ನು ಅಧ್ಯಯನ ಮಾಡಿದರು. ಅತ್ಯಂತ ಮೇಧಾವಿಗಳಾದ ಶ್ರೀನಿವಾಸಾಚಾರ್ಯರು ಶ್ರೀಸುಮತೀಂದ್ರತೀರ್ಥರ ಅವಸಾನವಾದ ಮೇಲೆ ಅವರ ಶಿಷ್ಯರಾದ ಶ್ರೀಉಪೇಂದ್ರತೀರ್ಥರಲ್ಲಿ ನ್ಯಾಯ ವೇದಾಂತ ಮೀಮಾಂಸಾ ವ್ಯಾಕರಣಾದಿ ಸಕಲ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಅದ್ವಿತೀಯ ಪಂಡಿತರೆಂದು ವಿದ್ವನ್ಮಂಡಲಿಯಲ್ಲಿ ಖ್ಯಾತರಾದರು. ಶ್ರೀನಿವಾಸಾಚಾರ್ಯರು ಅರ್ವಾಚೀನ ಪಂಡಿತನೊಬ್ಬನಿಂದ ಶ್ರೀಮದಾಚಾರ್ಯರ ಭಾಷ್ಯಕ್ಕೆ ಬರೆಯಲ್ಪಟ್ಟ ದೂಷಣ ಗ್ರಂಥವೊಂದನ್ನು ಖಂಡಿಸಿ **'ನವ್ಯದುರುಕ್ತಿಶಿಕ್ಷಾ'** ಎಂಬ ಶ್ರೇಷ್ಠ ಗ್ರಂಥವನ್ನು ಬರೆದು ಗುರುಪ್ರೀತಿಗೆ ಪಾತ್ರರಾಗಿದ್ದರು. ಶ್ರೀನಿವಾಸಾಚಾರ್ಯರಿಗೆ ಜಯರಾಮಾರ್ಯ-ರೆಂಬ ಒಬ್ಬ ಮಕ್ಕಳಿದ್ದರು. (ಜಯರಾಮಾರ್ಯರು ಶ್ರೀವಾದೀಂದ್ರತೀರ್ಥರಿಂದ ರಚಿಸಿದ ಗುರುಗುಣಸ್ತವನಕ್ಕೆ ವಿಸ್ತೃತವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಇವರೇ ಮುಂದೆ ಕುಂಭಕೋಣದಲ್ಲಿ ಶ್ರೀವಿಜಯೀಂದ್ರತೀರ್ಥರ ಬೃಂದಾವನದೆದುರಿನಲ್ಲಿ ತುರೀಯಾ-ಶ್ರಮವನ್ನು ಸ್ವೀಕರಿಸಿ ಶ್ರೀಧೀರೇಂದ್ರತೀರ್ಥರೆಂದು ಖ್ಯಾತರಾದರು.)

ಶ್ರೀನಿವಾಸಾಚಾರ್ಯರು ಶ್ರೀಉಪೇಂದ್ರತೀರ್ಥರಿಂದ ಕ್ರಿ.ಶ. ೧೭೨೮ ರಲ್ಲಿ ಪ್ಲವಂಗ ಸಂವತ್ಸರದ ಮಾರ್ಗಶಿರ ಕೃಷ್ಣ ಅಷ್ಟಮಿಯ ದಿನ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಶ್ರೀವಾದೀಂದ್ರತೀರ್ಥರೆಂದಾದರು. ಶ್ರೀವಾದೀಂದ್ರತೀರ್ಥರು ವ್ಯಾಸಪಂಥ ಹಾಗೂ ದಾಸಪಂಥಗಳನ್ನು ಪೋಷಿಸುತ್ತ ಸುಮಾರು ಇಪ್ಪತ್ತೆರಡು ವರ್ಷಗಳವರೆಗೆ ಮಹಾ ಸಂಸ್ಥಾನಾಧಿಪತಿಗಳಾಗಿದ್ದು ಸಜ್ಜನರನ್ನು ಅನುಗ್ರಹಿಸಿದರು. ರಾಜಮಹಾರಾಜರುಗಳಿಂದ ಸನ್ಮಾನಿತರಾಗಿ ಅವರಿಂದ ಗ್ರಾಮ ಭೂಮಿಗಳನ್ನು ಸಂಪಾದಿಸಿ ಮಹಾಸಂಸ್ಥಾನದ ಕಾರ್ಯಕಲಾಪಗಳು ಸುಗಮವಾಗಿ ಹಾಗೂ ವ್ಯವಸ್ಥಿತವಾಗಿ ನಡೆಯುವಂತೆ ಮಾಡಿ ಶ್ರೀಮಠದ ಅಭಿವೃದ್ಧಿ ಮಾಡಿದರು.

ವಿಜಯದಾಸರೇ ಮೊದಲಾದವರು ಶ್ರೀವಾದೀಂದ್ರತೀರ್ಥರಲ್ಲಿ ಶಾಸ್ತ್ರಾಧ್ಯಯನ ಮಾಡಿ ಶ್ರೇಷ್ಠ ಪಂಡಿತರೆಂದು ಖ್ಯಾತರಾದರು. ಶ್ರೀವಾದೀಂದ್ರತೀರ್ಥರು ೧. ನವ್ಯದುರುಕ್ತಿಶಿಕ್ಷಾ (ಪೂರ್ವಾಶ್ರಮದಲ್ಲಿ ರಚಿಸಿದ್ದು) ೨. ತತ್ತ್ವಪ್ರಕಾಶಿಕಾ ಟಿಪ್ಪಣಿ - ಮೀಮಾಂಸಾ ನಯದರ್ಪಣ ೩. ತತ್ತ್ವೋದ್ಯೋತ ಟಿಪ್ಪಣಿ ೪. ಭೂಗೋಳ - ಖಗೋಳ ವಿಚಾರ ೫. ಶ್ರೀರಾಘವೇಂದ್ರ ಮಠಗತಾರ್ಚಾಗತಿಕ್ರಮ ಮತ್ತು ೬. ಗುರುಗುಣಸ್ತವನ ಎಂಬ ಕೃತಿಗಳನ್ನು ರಚಿಸಿದ್ದಾರೆ. ಈ ರೀತಿ ಶ್ರೀವಾದೀಂದ್ರತೀರ್ಥರು ಪರಮತಖಂಡನ ಪೂರ್ವಕ ಸಿದ್ಧಾಂತ ಪ್ರತಿಷ್ಠಾಪನೆ ಮಾಡುತ್ತ ಪಾಠ ಪ್ರವಚನ ಮಾಡುತ್ತ, ಗ್ರಂಥಗಳನ್ನು ರಚಿಸುತ್ತ ವ್ಯಾಸಪಂಥವನ್ನು ಅಭಿವರ್ಧಿಸಿ ಪೋಷಿಸಿದರು. ಇದಲ್ಲದೇ ಶ್ರೀವಿಜಯದಾಸರೇ ಮೊದಲಾದ ದಾಸಪಂಥದವರಿಗೆ ಆಶ್ರಯವಿತ್ತು ತಾವೂ ಶ್ರೀಮೂಲರಾಮಚಂದ್ರದೇವರ ಮೇಲೆ ಕೆಲವು ಕೃತಿಗಳನ್ನು ರಚಿಸಿ ದಾಸಪಂಥವನ್ನೂ ಪೋಷಿಸಿ ಬೆಳೆಸಿದರು.

ಶ್ರೀವಾದೀಂದ್ರತೀರ್ಥರು ತಾವು ರಚಿಸಿದ ಗುರುಗುಣಸ್ತವನವನ್ನು ಶ್ರೀರಾಯರ ಬೃಂದಾವನದ ಮುಂದೆ ನಿಂತು ಭಕ್ತಿಯಿಂದ ಪಠಿಸಿ ಸಮರ್ಪಿಸಿದಾಗ ಶ್ರೀರಾಯರ ಬೃಂದಾವನವು ಡೋಲಾಯಮಾನವಾಗಿದ್ದನ್ನು ಅಲ್ಲಿದ್ದ ಅನೇಕ ಭಕ್ತವೃಂದವು ನೋಡಿ ಆನಂದಿಸಿದರೆಂದು ಪ್ರತೀತಿ ಇದೆ. ಬೃಂದಾವನಾಂತರ್ಗತರಾದ ಶ್ರೀರಾಯರು ಈ ರೀತಿ ಶ್ರೀವಾದೀಂದ್ರತೀರ್ಥರಲ್ಲಿ ತಮ್ಮ ಪ್ರಸನ್ನತೆಯನ್ನು ಹಾಗೂ ಗುರುಗುಣಸ್ತವನದಲ್ಲಿ ತಮ್ಮ ಮೆಚ್ಚುಗೆಯನ್ನು ಪ್ರಕಟಪಡಿಸಿದರು. ಇಂಥ ಕೃತಿಯ ಪಾರಾಯಣ, ಪಾಠ, ಪ್ರವಚನ ಲೇಖನಗಳಿಂದ ಶೀಘ್ರದಲ್ಲಿ ಶ್ರೀಗುರುಸಾರ್ವಭೌಮರ ಅನುಗ್ರಹವಾಗುವುದರಲ್ಲಿ ಸಂದೇಹವಿಲ್ಲ.

ಶ್ರೀರಾಯರು ತಮಗಾಗಿ ನಿರ್ಮಿಸಲ್ಪಟ್ಟಿದ್ದ ಶಿಲಾಬೃಂದಾವನವನ್ನು ಮುಂದೆ ತಮ್ಮ ಪರಂಪರೆಯಲ್ಲಿ ಬರುವ ಶ್ರೀವಾದೀಂದ್ರತೀರ್ಥರಿಗಾಗಿ ತೆಗೆಸಿಟ್ಟು ತಾವು ಬೇರೊಂದು ವಿಶಿಷ್ಟಶಿಲೆಯಿಂದ ಬೃಂದಾವನವನ್ನು ನಿರ್ಮಾಣ ಮಾಡಿಸಿಕೊಂಡಿದ್ದರೆಂಬು-ದನ್ನು ಇತಿಹಾಸದಿಂದ ಕೇಳುತ್ತೇವೆ.

ಶ್ರೀವಾದೀಂದ್ರತೀರ್ಥರು ಶ್ರೀಶಕೆ ೧೬೬೫ ರುಧಿರೋದ್ಗಾರಿ ಸಂವತ್ಸರದಲ್ಲಿ (ಕ್ರಿ.ಶ. ೧೭೪೩-೪೪) ಶ್ರೀಗುರುಸಾರ್ವಭೌಮರ ಪ್ರೇರಣೆಯಂತೆ ತಮ್ಮ ಪೂರ್ವಾಶ್ರಮ ಅನುಜರಾಗಿದ್ದ ಶ್ರೀವೇಣುಗೋಪಾಲಾಚಾರ್ಯರ ಜ್ಯೇಷ್ಠಪುತ್ರರಾದ ಶ್ರೀಪುರುಷೋತ್ತಮಾ-ಚಾರ್ಯರಿಗೆ ಪರಮಹಂಸಾಶ್ರಮವನ್ನಿತ್ತು ಶ್ರೀವಸುಧೇಂದ್ರರೆಂದು ನಾಮಕರಣ ಮಾಡಿದರು. ಸುಮಾರು ೪-೬ ವರ್ಷಗಳ ವರೆಗೆ ಗುರುಶಿಷ್ಯರಿಬ್ಬರೂ ಜೊತೆಜೊತೆ-ಯಾಗಿದ್ದು ಮಹಾಸಂಸ್ಥಾನಾಧಿಪತಿಗಳಾಗಿ ಪೀಠಾಧಿಪತಿಗಳಾಗಿ ಪಾಠಪ್ರವಚನಾದಿಗಳನ್ನು ವೈಭವದಿಂದ ನಡೆಸಿದರು. ಶ್ರೀಶಕೆ ೧೬೭೨ ನೇ ಪ್ರಮೋದೂತ ಸಂವತ್ಸರದ ಜ್ಯೇಷ್ಠ ಶುದ್ಧ ನವಮೀ ದಿನದಲ್ಲಿ (ಕ್ರಿ.ಶ. ೧೭೫೦-೫೧) ಶ್ರೀವಸುಧೇಂದ್ರತೀರ್ಥರಿಗೆ

ಮಹಾಸಂಸ್ಥಾನವನ್ನು ವಹಿಸಿಕೊಟ್ಟು ಮಂತ್ರಾಲಯ ಕ್ಷೇತ್ರದಲ್ಲಿ ಶ್ರೀವಾದೀಂದ್ರತೀರ್ಥರು ತಮ್ಮ ಅವತಾರಕಾರ್ಯವನ್ನು ಸಮಾಪ್ತಗೊಳಿಸುತ್ತ ಆ ಮೊದಲೇ ಶ್ರೀರಾಯರಿಂದ ಅನುಗ್ರಹೀತವಾಗಿದ್ದ ಶಿಲಾಬೃಂದಾವನದಡಿಯಲ್ಲಿ ಪ್ರವೇಶಮಾಡಿ ನಾರಾಯಣಧ್ಯಾನ-ಪರರಾದರು. ಶ್ರೀವಸುಧೇಂದ್ರತೀರ್ಥರು ಗುರುಗಳ ಬೃಂದಾವನ ಪ್ರವೇಶಾನಂತರ –

**ವಂದಾರುಜನಸಂದೋಹಮಂದಾರತರುಸನ್ನಿಭಮ್ ।**
**ವೃಂದಾರಕಗುರುಪ್ರಖ್ಯಂ ವಂದೇ ವಾದೀಂದ್ರದೇಶಿಕಮ್ ॥**

ಎಂಬ ಚರಮ ಶ್ಲೋಕವನ್ನು ರಚಿಸಿ ಭಕ್ತಿಯಿಂದ ಬೃಂದಾವನದ ಎದುರಿನಲ್ಲಿ ಪಠಿಸಿ ಗುರುಗಳಿಗೆ ಸಮರ್ಪಿಸಿದರು. ಶ್ರೀವಾದೀಂದ್ರತೀರ್ಥರು ಈಗಲೂ ಶ್ರೀರಾಯರೊಡನೆ ಭಕ್ತಜನರಿಗೆ ದರ್ಶನ ಕೊಡುತ್ತ ಸೇವಕರ ಇಷ್ಟಾರ್ಥಗಳನ್ನು ಪೂರೈಸುತ್ತಲಿರುವದು ಅನೇಕ ಸೇವಕಜನರ ನಿದರ್ಶನಕ್ಕೆ ಬಂದಿದೆ.

**ಗುರುಗುಣಸ್ತವನದ ವ್ಯಾಖ್ಯಾಕಾರರು :** ಶ್ರೀವಾದೀಂದ್ರತೀರ್ಥರ ಗುರುಗುಣ-ಸ್ತವನಕ್ಕೆ ಈಗ ಉಪಲಬ್ಧವಿರುವ ಸಂಸ್ಕೃತವ್ಯಾಖ್ಯಾನಗಳು ಎರಡು. ಶ್ರೀವಾದೀಂದ್ರ-ತೀರ್ಥರ ಕರಕಮಲಸಂಜಾತರಾದ ಅಂದರೆ ವರಪುತ್ರರಾದ ಶ್ರೀವಸುಧೇಂದ್ರತೀರ್ಥರು ರಚಿಸಿದ ವ್ಯಾಖ್ಯಾನವು ಒಂದಾದರೆ ಶ್ರೀವಾದೀಂದ್ರತೀರ್ಥರ ಪೂರ್ವಾಶ್ರಮ ಅಂದರೆ ಶ್ರೀನಿವಾಸಾಚಾರ್ಯರ ಪುತ್ರರಾದ ಶ್ರೀಜಯರಾಮಾಚಾರ್ಯರು ರಚಿಸಿದ್ದು ಎರಡನೆಯ ವ್ಯಾಖ್ಯಾನವಾಗಿದೆ.

ಗುರುಗುಣಸ್ತವನದ ಈ ಈರ್ವರು ವ್ಯಾಖ್ಯಾಕಾರರಲ್ಲಿ ಒಬ್ಬರು ವರಪುತ್ರರೂ ಸಂನ್ಯಾಸಿಗಳೂ ಆಗಿದ್ದರೆ ಇನ್ನೊಬ್ಬರು ಶ್ರೀಪಾದಪುತ್ರರೂ ಗೃಹಸ್ಥಾಶ್ರಮಿಗಳೂ ಆಗಿದ್ದಾರೆ. ಇವರಿಬ್ಬರೂ ಶ್ರೀವಾದೀಂದ್ರತೀರ್ಥರ ಮುಖದಿಂದಲೇ ಗುರುಗುಣಸ್ತವನದ ರಸಾಸ್ವಾದನೆ ಮಾಡಿದವರು. ಹಾಗಿದ್ದರೂ ಈ ವ್ಯಾಖ್ಯಾಕಾರರು ಹಿಡಿದ ಮೂಲ ಶ್ಲೋಕ-ಗಳಲ್ಲಿ ಕೆಲವೇ ಪದಗಳಲ್ಲಿ ಪಾಠಾಂತರ ಕಂಡುಬರುವುದಕ್ಕೆ ಬಹುಶಃ ಆಶುಕವಿಗಳಾದ ಶ್ರೀವಾದೀಂದ್ರತೀರ್ಥರೇ ಆ ರೀತಿ ರಚನೆ ಮಾಡಿ ಬೇರೆ ಬೇರೆ ಸಮಯದಲ್ಲಿ ಹೇಳಿರಬಹುದೆಂದು ತೋರುತ್ತದೆ. ವ್ಯಾಖ್ಯಾಕಾರರ ಸಂಕ್ಷಿಪ್ತ ಪರಿಚಯವು ಕೆಳಗಿನಂತಿದೆ.

**೧. ಶ್ರೀವಸುಧೇಂದ್ರತೀರ್ಥರು :** (ಕ್ರಿ.ಶ. ೧೭೫೦-೧೭೭೧) ಶ್ರೀರಾಘವೇಂದ್ರತೀರ್ಥ ಶ್ರೀಪಾದರ ಪೂರ್ವಾಶ್ರಮಪುತ್ರ ಲಕ್ಷ್ಮೀನಾರಾಯಣಾಚಾರ್ಯರ ಮಕ್ಕಳಾದ ಪುರುಷೋತ್ತಮಾ-ಚಾರ್ಯರ ಕಿರಿಯಮಗ ವೇಣುಗೋಪಾಲಾಚಾರ್ಯರಿಗೆ ೧. ಪುರುಷೋತ್ತಮಾಚಾರ್ಯ, ೨. ಬಲರಾಮಾಚಾರ್ಯ ಮತ್ತು ೩. ಲಕ್ಷ್ಮೀನಾರಾಯಣಾಚಾರ್ಯರೆಂದು ಮೂರು ಜನ ಮಕ್ಕಳು. ಈ ಮೂವರೂ ಶ್ರೀಗುರುಸಾರ್ವಭೌಮರ ಯತಿಪರಂಪರೆಯಲ್ಲಿ ಬಂದು

ಕ್ರಮವಾಗಿ ಶ್ರೀವಸುಧೇಂದ್ರತೀರ್ಥರು, ಶ್ರೀವರದೇಂದ್ರತೀರ್ಥರು ಮತ್ತು ಶ್ರೀಭುವನೇಂದ್ರ-ತೀರ್ಥರೆಂಬ ಹೆಸರಿನಿಂದ ಪೀಠಾಧಿಪತಿಗಳಾದರು.

ಶ್ರೀಪುರುಷೋತ್ತಮಾಚಾರ್ಯರು ಶ್ರೀವಾದೀಂದ್ರತೀರ್ಥರಲ್ಲೇ ಸಕಲಶಾಸ್ತ್ರಗಳನ್ನು ಅಧ್ಯಯನ ಮಾಡಿ ಅವರ ಪ್ರೀತಿಗೆ ಪಾತ್ರರಾಗಿದ್ದವರು. ಪುರುಷೋತ್ತಮಾಚಾರ್ಯರ ಜ್ಞಾನ, ಗುರುಭಕ್ತಿ, ವೈರಾಗ್ಯಾದಿಗಳನ್ನು ಕಂಡು ಪ್ರಸನ್ನರಾದ ಶ್ರೀವಾದೀಂದ್ರತೀರ್ಥರು, ತಮ್ಮ ನಂತರ ಮಹಾಸಂಸ್ಥಾನದ ಆಧಿಪತ್ಯಕ್ಕೆ ಇವರೇ ಯೋಗ್ಯರಾಗಿರುವುದನ್ನು ನಿರ್ಧರಿಸಿ ಅವರಿಗೆ ಶ್ರೀಶಕೆ ೧೬೬೫ ನೇ ರುಧಿರೋದ್ಗಾರಿ ಸಂವತ್ಸರದಲ್ಲಿ (ಕ್ರಿ.ಶ. ೧೭೪೩-೪೪) ಪರಮಹಂಸಾಶ್ರಮವನಿತ್ತು **"ವಸುಧೇಂದ್ರತೀರ್ಥ"** ಎಂದು ನಾಮಕರಣ ಮಾಡಿದರು.

ಶ್ರೀವಸುಧೇಂದ್ರತೀರ್ಥರು ಗುರುಗಳ ಬೃಂದಾವನ ಪ್ರವೇಶಾನಂತರ ಎಲ್ಲೆಡೆ ಸಂಚರಿಸುತ್ತ ಅಲ್ಲಲ್ಲಿ ದುರ್ವಾದಿಗಳನ್ನು ನಿಗ್ರಹಿಸುತ್ತ ಮಧ್ವಸಿದ್ಧಾಂತದ ಪ್ರತಿಷ್ಠಾಪನೆ ಪ್ರಚಾರಗಳನ್ನು ಮಾಡುತ್ತ ಶಿಷ್ಯರನ್ನು ಅನುಗ್ರಹಿಸಿದರು.

ಶ್ರೀವಸುಧೇಂದ್ರತೀರ್ಥರು ಸಂಚಾರಕ್ರಮದಿಂದ ಕೆಂಚನಗುಡ್ ಎಂಬ ಗ್ರಾಮಕ್ಕೆ ಬರಲು ಅಲ್ಲಿ ದೇಹಾಲಸ್ಯವಾಯಿತು. ತಮ್ಮ ಗುರುಪುತ್ರರಾದ ಜಯರಾಮಾಚಾರ್ಯರಿಗೆ ಆಶ್ರಮ ಕೊಡಬಯಸಿದ್ದರೂ ಅವರು ಆ ಕಾಲಕ್ಕೆ ದೇಶಾಂತರ ಸಂಚಾರದಲ್ಲಿದ್ದುದರಿಂದ ಬರಲಾಗಲಿಲ್ಲ. ಹೀಗಾಗಿ ಶ್ರೀವಸುಧೇಂದ್ರತೀರ್ಥರು ತಮ್ಮ ಪೂರ್ವಾಶ್ರಮ ಸಹೋದರರೂ ಚತುಶ್ಶಾಸ್ತ್ರ ಪಂಡಿತರೂ ಆದ ಬಲರಾಮಾಚಾರ್ಯರಿಗೆ ಶ್ರೀಶಕೆ ೧೬೮೧ ನೇ ಪ್ರಮಾಥಿ ಸಂವತ್ಸರದ ಆಷಾಢ ಕೃಷ್ಣ ಷಷ್ಠೀ ದಿನದಂದು (ಕ್ರಿ.ಶ. ೧೭೫೯) ಪರಮ ಹಂಸಾಶ್ರಮವನಿತ್ತು **"ಶ್ರೀವರದೇಂದ್ರತೀರ್ಥ"** ಎಂದು ನಾಮಕರಣ ಮಾಡಿ ಮುಂದೆ ಶ್ರೀಜಯರಾಮಾಚಾರ್ಯರಿಗೆ ಮಹಾಸಂಸ್ಥಾನಾಧಿಪತ್ಯವನ್ನು ವಹಿಸಿಕೊಡುವಂತೆ ಸೂಚಿಸಿ ನಾರಾಯಣಧ್ಯಾನಾಸಕ್ತರಾದರು. ನಂತರ ಶ್ರೀವರದೇಂದ್ರತೀರ್ಥರು ತಮ್ಮ ಗುರುಗಳಾದ ಶ್ರೀವಸುಧೇಂದ್ರತೀರ್ಥರನ್ನು ಕುರಿತು –

**ವಸುಧಾತಲವಿಖ್ಯಾತಂ ವೈರಾಗ್ಯಾದಿಗುಣಾರ್ಣವಮ್ ।**
**ವೇದವೇದಾಂಗಚತುರಂ ವಸುಧೇಂದ್ರಗುರುಂ ಭಜೇ ॥**

ಎಂಬ ಚರಮಶ್ಲೋಕವೊಂದನ್ನು ರಚಿಸಿ ಗುರುಗಳ ಪಾದಪದ್ಮಗಳಲ್ಲಿ ಸಮರ್ಪಿಸಿದರು. ಕೆಂಚನಗುಡ್ಡ ಎಂಬ ಗ್ರಾಮದಲ್ಲಿ ತುಂಗಭದ್ರಾತೀರದಲ್ಲಿರುವ ಶ್ರೀವಸುಧೇಂದ್ರತೀರ್ಥರ ಬೃಂದಾವನ ಸನ್ನಿಧಾನವು ಬಹು ಜಾಗ್ರತಸ್ಥಳವಾಗಿದೆ.

ಶ್ರೀವಸುಧೇಂದ್ರತೀರ್ಥರು ರಚಿಸಿದ ಗ್ರಂಥಗಳಲ್ಲಿ ತಂತ್ರಸಾರ ವ್ಯಾಖ್ಯಾನ ಮತ್ತು ಗುರುಗುಣಸ್ತವನ ವ್ಯಾಖ್ಯಾನ ಎಂಬ ಎರಡು ಕೃತಿಗಳು ಮಾತ್ರ ಈಗ ಉಪಲಬ್ಧವಾಗಿವೆ.

ಶ್ರೀವಸುಧೇಂದ್ರತೀರ್ಥರು ಗುರುಗುಣಸ್ತವನಕ್ಕೆ ನ್ಯೂನಾಧಿಕ್ಯರಹಿತವಾದ ವ್ಯಾಖ್ಯಾನವನ್ನು ರಚಿಸಿದ್ದಾರೆ. ಮೂಲಶ್ಲೋಕಗಳ ಪದಗಳಿಗೆ ಸರಿಯಾದ ಅರ್ಥವನ್ನು ತಿಳಿಸುತ್ತ ಪ್ರಾರಂಭದಲ್ಲಿ ಅವತಾರಿಕೆಯನ್ನೂ ಪ್ರತಿಯೊಂದು ಶ್ಲೋಕದ ವ್ಯಾಖ್ಯಾನದ ಕೊನೆಗೆ ಭಾವಾರ್ಥವನ್ನೂ ಕೊಡುತ್ತಾರೆ. ಇದೊಂದು ಅತ್ಯುಪಯುಕ್ತವಾದ ವ್ಯಾಖ್ಯಾನವಾಗಿದೆ.

೨. ಶ್ರೀಜಯರಾಮಾರ್ಯರು (ಶ್ರೀಧೀರೇಂದ್ರತೀರ್ಥರು) : ಗುರುಗುಣಸ್ತವನದ ಇನ್ನೊಬ್ಬ ವ್ಯಾಖ್ಯಾಕಾರರಾದ ಇವರು ಗುರುಗುಣಸ್ತವನದ ಕರ್ತೃಗಳಾದ ಶ್ರೀವಾದೀಂದ್ರತೀರ್ಥ ಶ್ರೀಪಾದರ ಪುತ್ರರೆಂಬುದನ್ನು ಮೇಲೆ ತಿಳಿಸಿದ್ದೇವೆ.

**ವರಜೋ ವೀರ್ಯಜಶ್ಚೈವ ಕ್ಷೇತ್ರಜಃ ಪಾಲಕಸ್ತಥಾ ।**
**ವಿದ್ಯಾಮಂತ್ರಸುತೌ ಚೈವ ಗೃಹೀತಃ ಸಪ್ತಮಃ ಸುತಃ ॥ ೭೦ ॥**

(ಬ್ರಹ್ಮವೈವರ್ತಪುರಾಣ ಪ್ರಕೃತಿಖಂಡ ಅ. ೫೯) ಎಂಬ ಪ್ರಮಾಣದಂತೆ ಪುತ್ರರು ಸಪ್ತವಿಧರಾಗಿರುತ್ತಾರೆ. ಪ್ರಕೃತದಲ್ಲಿ ಜಯರಾಮಾಚಾರ್ಯರು ಕುಲಗುರುಗಳಾದ ಶ್ರೀವಾದೀಂದ್ರತೀರ್ಥರಲ್ಲಿ ಸಕಲಶಾಸ್ತ್ರಗಳ ಅಧ್ಯಯನಮಾಡಿ, ಅವರಿಂದ ಕೆಲವು ಮಂತ್ರಗಳನ್ನು ಉಪದೇಶಪೂರ್ವಕ ಪಡೆದದ್ದರಿಂದ ಅವರು ಶ್ರೀವಾದೀಂದ್ರತೀರ್ಥರ ವಿದ್ಯಾಪುತ್ರರೂ, ಮಂತ್ರಪುತ್ರರೂ ಎಂತಾದರು. ಹೀಗಾಗಿ ಅವರು ಶ್ರೀಪಾದಪುತ್ರರೆಂದು ಕರೆಸಿಕೊಳ್ಳಲ್ಪಡಲು ಅರ್ಹರಾಗಿರುತ್ತಾರೆ. (ಯತಿಗಳಾದವರ ಪೂರ್ವಾಶ್ರಮ ಪುತ್ರರೆಲ್ಲರೂ 'ಶ್ರೀಪಾದಪುತ್ರ'ರಾಗುವದಿಲ್ಲವೆಂಬುದನ್ನು ಮುಂದೆ ಪರಿಶಿಷ್ಟ (i) "ತವ ತನಯಮಣಿಃ" [ಗು.ಗು.೨೮] ಎಂಬಲ್ಲಿ ವಿವರಿಸಲಾಗಿದೆ.)

ಶ್ರೀಪಾದಪುತ್ರ ಜಯರಾಮಾಚಾರ್ಯರು ಮೊದಲು ಶ್ರೀವಾದೀಂದ್ರತೀರ್ಥರಲ್ಲಿ ನಂತರ ಶ್ರೀವಸುಧೇಂದ್ರರಲ್ಲಿ ಕಾವ್ಯ, ನಾಟಕಾಲಂಕಾರಾದಿ ಸಾಹಿತ್ಯ, ವ್ಯಾಕರಣ, ನ್ಯಾಯ, ವೇದಾಂತ ಮೀಮಾಂಸಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಮಹಾಪಂಡಿತರಾಗಿ ಸಕಲರ ಗೌರವಾದರಗಳಿಗೆ ಪಾತ್ರರಾಗಿದ್ದರು. ಜಯರಾಮಾಚಾರ್ಯರಿಗೆ ರಾಘವೇಂದ್ರಾಚಾರ್ಯ, ಶ್ರೀನಿವಾಸಾಚಾರ್ಯ, ವೇಣುಗೋಪಾಲಾಚಾರ್ಯ ಎಂದು ಮೂವರು ಪುತ್ರರೂ, ಕೃಷ್ಣಮ್ಮ ಎಂಬ ಒಬ್ಬ ಪುತ್ರಿಯೂ ಜನಿಸಿದರು. ಸದಾ ಪಾಠ ಪ್ರವಚನಗಳಲ್ಲೇ ಆಸಕ್ತರಾಗಿರುತ್ತಿದ್ದ ಜಯರಾಮಾಚಾರ್ಯರು ದೇಶಸಂಚಾರ ಮಾಡುತ್ತ ಕುಂಭಕೋಣೆಯಲ್ಲಿದ್ದಾಗ ಶ್ರೀವಸುಧೇಂದ್ರತೀರ್ಥರು ಬೃಂದಾವನಸ್ಥರಾದ ವಿಷಯ ಬಹುಕಾಲಾನಂತರ ತಿಳಿಯಿತು. ಮೊದಲೇ ವಿರಕ್ತರಾಗಿದ್ದ ಆಚಾರ್ಯರಿಗೆ ಈ ವಿಷಯದಿಂದ ಸಂಸಾರದಲ್ಲಿ ಮತ್ತಷ್ಟು ವಿರಕ್ತಿಯುಂಟಾಯಿತು. ಕೂಡಲೇ ಹರಿವಾಯುಗುರುಗಳ ಪ್ರೇರಣೆಯಾಗಿ ಜಯರಾಮಾಚಾರ್ಯರು ಶ್ರೀವಿಜಯೀಂದ್ರತೀರ್ಥರ ಬೃಂದಾವನದೆದುರು ಕಾಯಿಯನ್ನಿಟ್ಟು ಸಂನ್ಯಾಸಾಶ್ರಮವನ್ನು ಸ್ವೀಕರಿಸಿ "ಶ್ರೀಧೀರೇಂದ್ರತೀರ್ಥ" ಎಂಬ ನಾಮಧೇಯವುಳ್ಳವ-

ರಾದರು. ಇದು ಸ್ವಪ್ನಸೂಚಿತ ನಾಮಧೇಯವಾಗಿತ್ತೆಂದು ಪ್ರತೀತಿ ಇದೆ. **"ಯದಾ ವಿರಕ್ತಃ ಪುರುಷಃ ಪ್ರಜಾಯತೇ ತದೈವ ಸನ್ಯಾಸವಿಧಿಃ ಶ್ರುತೌ ಶ್ರುತಃ"** ಎಂಬಂತೆ ಪುರುಷನಿಗೆ ನಿಜವಾದ ವಿರಕ್ತಿ ಉಂಟಾದ ತಕ್ಷಣವೇ ಸಂನ್ಯಾಸಸ್ವೀಕಾರವು ಶ್ರುತಿವಿಹಿತವಾದುದಾಗಿದೆ-ಯಲ್ಲವೇ ! ಮುಂದೆ ಶ್ರೀಧೀರೇಂದ್ರತೀರ್ಥರು ಸಂಚಾರಕ್ರಮದಿಂದ ಶ್ರೀವರದೇಂದ್ರತೀರ್ಥರಲ್ಲಿ ಬಂದಾಗ ಅವರಿಂದ ಮಂತ್ರಮುದ್ರಾಧಾರಣ, ಗುರೂಪದೇಶಗಳನ್ನು ಪಡೆದರು. ಕೆಲದಿನ ಶ್ರೀವರದೇಂದ್ರತೀರ್ಥರೊಂದಿಗೆ ಶ್ರೀಮೂಲರಾಮನ ಪೂಜೆಯನ್ನು ಮಾಡಿ, ಮಹಾ ಸಂಸ್ಥಾನದ ಕಾರ್ಯಭಾರವನ್ನು ನಿರ್ವಹಿಸುತ್ತ ಗುರುಸೇವೆ ಮಾಡಿ ನಂತರ ಶ್ರೀಧೀರೇಂದ್ರ-ತೀರ್ಥರು ಗುರ್ವಾಜ್ಞೆಯನ್ನು ಪಡೆದು ಮತ್ತೆ ಸಂಚಾರಕ್ಕೆ ಹೊರಟುಬಿಟ್ಟರು. ಇತ್ತ ಕೆಲಕಾಲದ ನಂತರ ಪೂನಾ ನಗರದಲ್ಲಿದ್ದ ಶ್ರೀವರದೇಂದ್ರತೀರ್ಥರಿಗೆ ದೇಹಾಸಲ್ಯ-ವಾಗಲು ಶ್ರೀಮೂಲರಾಮಚಂದ್ರದೇವರ ಪೂಜೆ ನಿಲ್ಲಬಾರದೆಂದು ತಮ್ಮ ಪೂರ್ವಾಶ್ರಮ ಅನುಜರಾದ ಶ್ರೀಲಕ್ಷ್ಮೀನಾರಾಯಣಾಚಾರ್ಯರಿಗೆ ಆಶ್ರಮವನ್ನಿತ್ತು 'ಭುವನೇಂದ್ರತೀರ್ಥ' ಎಂದು ನಾಮಕರಣ ಮಾಡಿ,' ಮಹಾಸಂಸ್ಥಾನವನ್ನು ಶ್ರೀಧೀರೇಂದ್ರತೀರ್ಥರಿಗೆ ಒಪ್ಪಿಸಿ ಅವರಲ್ಲೇ ಶಾಸ್ತ್ರಾಧ್ಯಯನ ಮುಂದುವರಿಸುವಂತೆ ತಿಳಿಸಿ ಹರಿಧ್ಯಾನ ಪರರಾಗಿ ಬೃಂದಾವನಸ್ಥರಾದರು. ಗುರುಗಳು ನಿರ್ಯಾಣ ಮಾಡಿದ ವಿಷಯವು ಶ್ರೀಧೀರೇಂದ್ರತೀರ್ಥ-ರಿಗೆ ಬಹಳ ತಡವಾಗಿ ತಿಳಿದ ಕೂಡಲೇ ಅವರು ಪೂನಾಕ್ಕೆ ಬಂದು ಬೃಂದಾವನದರ್ಶನ ಮಾಡಿಕೊಂಡಾಗ ಶ್ರೀಭುವನೇಂದ್ರತೀರ್ಥರು ಶ್ರೀವರದೇಂದ್ರತೀರ್ಥರ ಆಶಯವನ್ನೆಲ್ಲ ಅವರೆದುರು ವಿಜ್ಞಾಪಿಸಿ ಮಹಾಸಂಸ್ಥಾನವನ್ನೆಲ್ಲ ಶ್ರೀಧೀರೇಂದ್ರತೀರ್ಥರಿಗೆ ಒಪ್ಪಿಸಿದರು. ಮುಂದೆ ಗುರುಶಿಷ್ಯರಿಬ್ಬರೂ ಸಂಚಾರಮಾಡುತ್ತ ವರದಾ ನದೀತೀರದ ರಿತ್ತಿ ಕ್ಷೇತ್ರಕ್ಕೆ ದಯಮಾಡಿಸಿ ಅಲ್ಲಿಯೇ ಪಾಠಪ್ರವಚನ ಮಾಡುತ್ತ ಕಾಲಕಳೆದರು.

ಆಗ ಸವಣೂರಿನಲ್ಲಿದ್ದ ಶ್ರೀಸತ್ಯಬೋಧಶ್ರೀಪಾದಂಗಳವರು ಶ್ರೀಧೀರೇಂದ್ರತೀರ್ಥರ ಖ್ಯಾತಿಕೇಳಿ ರಿತ್ತಿಗೆ ಬಂದು ಕೆಲಕಾಲ ರಿತ್ತಿಯಲ್ಲಿ ಶ್ರೀಧೀರೇಂದ್ರತೀರ್ಥರೊಡನೆ ಸೌಹಾರ್ದ-ದಿಂದ ಇದ್ದರು. ಅದೇ ಸಮಯಕ್ಕೆ ಪ್ರಖ್ಯಾತ ವಿದ್ವಾಂಸರೂ, ಶ್ರೀವರದೇಂದ್ರತೀರ್ಥರ ವಿದ್ಯಾಶಿಷ್ಯರೂ, ಹರಿದಾಸಾಗ್ರಣಿಗಳೂ ಆದ ಶ್ರೀಜಗನ್ನಾಥದಾಸರು "ಹರಿಕಥಾಮೃತಸಾರ"ವೆಂಬ ಗ್ರಂಥವನ್ನು ರಚಿಸಿಕೊಂಡು ರಿತ್ತಿಗೆ ಬಂದು ಶ್ರೀಧೀರೇಂದ್ರತೀರ್ಥರಿಗೆ ಸಮರ್ಪಿಸಿದರು. ಆಗ ಶ್ರೀಧೀರೇಂದ್ರತೀರ್ಥರು, ಶ್ರೀಸತ್ಯಬೋಧಸ್ವಾಮಿಗಳು, ಶ್ರೀಭುವನೇಂದ್ರತೀರ್ಥರು, ಶ್ರೀಜಗನ್ನಾಥದಾಸರು ಮೊದಲಾದ ಜ್ಞಾನಿವರೇಣ್ಯರು ಒಂದೆಡೆ ಸೇರಿ ನಿತ್ಯವೂ ಹರಿಕಥಾಮೃತಸಾರದಲ್ಲಿಯ ವಿಷಯುಗಳ ಬಗ್ಗೆ ಚರ್ಚಿಸುತ್ತ ಶಿಷ್ಯ-ಭಕ್ತವೃಂದದವರಿಗೆ ಮಹದಾನಂದವನ್ನುಂಟು ಮಾಡಿದರು. ಈ ಯತಿಶ್ರೇಷ್ಠರ ಸೌಹಾರ್ದಯುತವಾದ ಸಮಾಗಮ, ವಾಕ್ಯಾರ್ಥವಿಚಾರ ಭಗದ್ವಿಷಯಕ ತತ್ತ್ವವಿಚಾರ, ಬಹುಕಾಲ ಏಕತ್ರ ವಾಸ ಇವೆಲ್ಲ ಅವಿಸ್ಮರಣೀಯವಾದ ಐತಿಹಾಸಿಕ ಘಟನೆಗಳಾಗಿವೆ.

ಶ್ರೀಧೀರೇಂದ್ರತೀರ್ಥಯತಿವರ್ಯರು ಶ್ರೀಶಕೆ ೧೭೦೬ನೇ ಕ್ರೋಧಿ ಸಂವತ್ಸರದ ಫಾಲ್ಗುಣ ಶುದ್ಧ ತ್ರಯೋದಶೀ (ಕ್ರಿ.ಶ. ೧೭೮೪-೮೫) ದಿನ ಮಹಾಸಂಸ್ಥಾನಾಧಿಪತ್ಯ-ವನ್ನು ತಮ್ಮ ಪ್ರಿಯಶಿಷ್ಯರಾದ ಶ್ರೀಭುವನೇಂದ್ರತೀರ್ಥರಿಗೆ ವಹಿಸಿಕೊಟ್ಟು ರಿತ್ತಿ ಕ್ಷೇತ್ರದಲ್ಲಿ ತಮ್ಮ ಅವತಾರಕಾರ್ಯವನ್ನು ಸಮಾಪ್ತಗೊಳಿಸಿದರು. ಶ್ರೀಭುವನೇಂದ್ರ-ತೀರ್ಥರು ಊರೊಳಗಿರುವ ಕೋಟೆಯಲ್ಲಿ ಗುರುಗಳ ಬೃಂದಾವನ ಪ್ರತಿಷ್ಠೆ, ಮಹಾಸಮಾರಾಧನೆಗಳನ್ನು ಭಕ್ತಿಯಿಂದ ನೆರವೇರಿಸಿ —

**ಧರಣೀಮಂಡಲೇ ಖ್ಯಾತಂ ಧೈರ್ಯಾದಿಗುಣಬೃಂಹಿತಮ್ ।**
**ಧಿಕೃತಾಶೇಷವಾದೀಭಂ ಧೀರಸಿಂಹಗುರುಂ ಭಜೇ ॥** ಎಂಬ ಚರಮ-ಶ್ಲೋಕವನ್ನು ರಚಿಸಿ ಗುರುಗಳಿಗೆ ಸಮರ್ಪಿಸಿದರು. ಮುಂದೆ ಶ್ರೀಭುವನೇಂದ್ರರು ಕೆಲದಿನಗಳವರೆಗೆ ರಿತ್ತಿಯಲ್ಲಿದ್ದು ಶ್ರೀಧೀರೇಂದ್ರತೀರ್ಥರ ಬೃಂದಾವನದ ಪೂಜಾದಿಗಳಿಗೆ ವ್ಯವಸ್ಥೆ ಮಾಡಿ ನಂತರ ಸಂಚಾರಕ್ಕೆ ಹೊರಟು ಹೋದರು.

ಬೃಂದಾವನ ಪ್ರತಿಷ್ಠೆಯಾಗಿ ನಾಲ್ಕಾರು ವರ್ಷಗಳು ಗತಿಸಿದ ಮೇಲೆ ದೇಹಸಹಿತ ತಮ್ಮ ಬೃಂದಾವನವನ್ನು ವರದಾ ನದೀತೀರದಲ್ಲಿ ಸ್ಥಾಪಿಸುವಂತೆ ರಿತ್ತಿಯ ಶಾನುಭೋಗರಿಗೂ, ಅರ್ಚಕರಿಗೂ ಶ್ರೀಧೀರೇಂದ್ರತೀರ್ಥರಿಂದ ಸ್ವಪ್ನಸೂಚನೆ-ಯಾಯಿತು. ಅದೇ ದಿನ ನದಿಯ ದಂಡೆಯ ಮೇಲಿರುವ ಒಂದು ಹೊಲದ ಒಡೆಯನಿಗೆ ಆ ಹೊಲವನ್ನು ತಮ್ಮ ಬೃಂದಾವನ ಪ್ರತಿಷ್ಠೆಗಾಗಿ ಶ್ರೀಮಠಕ್ಕೆ ದಾನಕೊಡುವಂತೆಯೂ ಸೂಚನೆಯಾಯಿತು. ಶ್ರೀಧೀರೇಂದ್ರತೀರ್ಥರ ಸೂಚನೆಯಂತೆ ಒಂದು ಶುಭಮುಹೂರ್ತ-ದಲ್ಲಿ ಕೋಟೆಯಲ್ಲಿರುವ ಬೃಂದಾವನವನ್ನು ತೆಗೆದು ನಿಕ್ಷೇಪ ಸ್ಥಳವನ್ನು ತೆರೆದಾಗ ಗುರುವರ್ಯರ ದೇಹವು ನಿರ್ವಿಕಾರವಾಗಿದ್ದು ನಾಲ್ಕಾರು ವರ್ಷಗಳ ಹಿಂದೆ ಕೊರಳಲ್ಲಿ ಹಾಕಿದ ತುಳಸೀ ಮಾಲೆ, ಹಚ್ಚಿದ ಗಂಧಾಕ್ಷತೆಗಳು ಹಚ್ಚುಹಸುರಾಗಿ ಹಾಗೇ ಇದ್ದವಂತೆ. ಇದನ್ನು ಕಂಡು ನೆರೆದಿದ್ದ ಶಿಷ್ಯವೃಂದಕ್ಕೆ ಹರ್ಷಾಶ್ಚರ್ಯಗಳಾಗಿ ಗುರುಗಳ ಮಹಾಮಹಿಮೆ-ಯನ್ನು ಪ್ರತ್ಯಕ್ಷ ಕಾಣುವ ಭಾಗ್ಯ ದೊರೆಯಿತು. ಮುಂದೆ ವಿಧಿಪೂರ್ವಕವಾಗಿ ನದೀತೀರದಲ್ಲಿ ಬೃಂದಾವನ ಪ್ರತಿಷ್ಠಾಪನೆಯು ವೈಭವದಿಂದ ನೆರವೇರಿತು.

ಶ್ರೀಧೀರೇಂದ್ರತೀರ್ಥರ ಬೃಂದಾವನವೂ ಶ್ರೀರಾಯರ ಬೃಂದಾವನದಂತೆ ವೈಶಿಷ್ಟ್ಯಪೂರ್ಣವಾಗಿದೆ. ಮಂತ್ರಾಲಯದಲ್ಲಿ ಶ್ರೀರಾಯರ ಬೃಂದಾವನದಲ್ಲಿ ರಾಮ ನರಹರಿ ಕೃಷ್ಣಕೃಷ್ಣ ನಾರಾಯಣರು ನೆಲೆ ನಿಂತು ಅಲವಬೋಧ ಮಿಕ್ಕಾದ ಮುನಿಗಳೆಲ್ಲ ಇರುತ್ತಿದ್ದು ರಾಘವ ಅವರಿಗೆ ಕೀರುತಿಯ ತಂದೀಯುತ್ತಿದ್ದರೆ ಶ್ರೀಧೀರೇಂದ್ರತೀರ್ಥರ ಬೃಂದಾವನದಲ್ಲಿ ಶ್ರೀಟೀಕಾಕೃತ್ಪಾದರು, ಶ್ರೀವಿಜಯೀಂದ್ರತೀರ್ಥರು ಮತ್ತು ಪಂಚರೂಪ ಪರಮಾತ್ಮನಿಗೆ ಸಂಪುಟದಂತಿದ್ದ ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರು ತಮ್ಮ

ವಿಶೇಷ ಸಂನಿಧಾನದಿಂದಲೇ ನಿಲೆನಿಂತು ಭಕ್ತರ ಮನೋಭೀಷ್ಟಗಳನ್ನು ಪೂರೈಸುತ್ತ ಶ್ರೀಧೀರೇಂದ್ರತೀರ್ಥರಿಗೆ ಅತುಲವಾದ ಕೀರುತಿಯನ್ನು ತಂದುಕೊಡುತ್ತಿದ್ದಾರೆ. ಶ್ರೀಧೀರೇಂದ್ರ-ತೀರ್ಥರ ಬೃಂದಾವನದಲ್ಲಿ ಶ್ರೀಟೀಕಾಕೃತ್ಪಾದರು, ಶ್ರೀವಿಜಯೀಂದ್ರತೀರ್ಥರು ಮತ್ತು ಶ್ರೀರಾಘವೇಂದ್ರತೀರ್ಥರು ಸನ್ನಿಹಿತರಾಗಿರುವ ವಿಶಿಷ್ಟಸ್ಥಳಗಳನ್ನು ಗಂಧಾಕ್ಷತಾದಿಗಳಿಂದ ಅಲಂಕರಿಸಿ ಪೂಜಾರಾಧನ ಹಸ್ತೋದಕಗಳನ್ನು ಸಮರ್ಪಿಸುವ ಪರಿಯನ್ನು ಇಂದಿಗೂ ಕಾಣಬಹುದು. ಇನ್ನೆಲ್ಲಿಯೂ ಕಾಣಸಿಗದ ಈ ರೀತಿಯ ಗುರುಸನ್ನಿಧಾನವು ಇಲ್ಲಿರುವುದು. ಶ್ರೀಧೀರೇಂದ್ರತೀರ್ಥರ ಬೃಂದಾವನದ ಅಸಾಧಾರಣ ವೈಶಿಷ್ಟ್ಯವಾಗಿದೆ.

ಶ್ರೀಧೀರೇಂದ್ರತೀರ್ಥರು ರಚಿಸಿದ ಗ್ರಂಥಗಳಲ್ಲಿ ಈ ಕೆಳಗಿನ ಗ್ರಂಥಗಳು ಈಗ ಉಪಲಬ್ಧವಾಗಿರುತ್ತವೆ –

೧. ಗುರುಗುಣಸ್ತವನ ವ್ಯಾಖ್ಯಾನ (ಪೂರ್ವಾಶ್ರಮದಲ್ಲಿ ರಚಿಸಿದ್ದು) (ಪ್ರ.) ೨. ಕಾರಕವಾದ ೩. ನಾರಾಯಣೋಪನಿಷದ್ ವ್ಯಾಖ್ಯಾನ (ಪ್ರ.) ೪. ಮನ್ಯುಸೂಕ್ತ ವ್ಯಾಖ್ಯಾನ (ಪ್ರ.) ೫. ವಿಷಯವಾಕ್ಯಸಂಗ್ರಹ (ಪ್ರ.) ೬. ಬಳಿತ್ಥಾಸೂಕ್ತವ್ಯಾಖ್ಯಾನ ೭. ವಾಜಸನೇಯೋಪನಿಷದ್ ವ್ಯಾಖ್ಯಾನ. ೮. ಐತರೇಯೋಪನಿಷದ್ ವ್ಯಾಖ್ಯಾನ. ೯. ಶ್ರೀರಾಘವೇಂದ್ರಸ್ತೋತ್ರ ವ್ಯಾಖ್ಯಾನ (ಪ್ರ.).

ಮೇಲಿನವುಗಳಲ್ಲಿ ೨ ರಿಂದ ೯ ರ ವರೆಗೆ ಶ್ರೀಜಯರಾಮಾಚಾರ್ಯರು ತುರೀಯಾಶ್ರಮ ಸ್ವೀಕರಿಸಿದ ನಂತರ ರಚಿಸಿದ ಕೃತಿಗಳಾಗಿವೆ. ಶ್ರೀಧೀರೇಂದ್ರತೀರ್ಥರ ಅಂತರಂಗ ಶಿಷ್ಯರಾದ ಸಾತಾರಿ ಆಚಾರ್ಯರೆನ್ನುವವರು ಧೀರೇಂದ್ರಾಷ್ಟಕವನ್ನು ರಚಿಸಿದ್ದು ಇದು ಶ್ರೀಧೀರೇಂದ್ರತೀರ್ಥರ ಅಸದೃಶ ಗುಣಗಳು, ಸಕಲಶಾಸ್ತ್ರ ಪಾಂಡಿತ್ಯ, ಪಾಠಪ್ರವಚನ ಗ್ರಂಥರಚನಾ ಚಾತುರ್ಯ, ಸತ್ಸಂಪ್ರದಾಯನಿಷ್ಠೆ, ರಾಜಮಹಾರಾಜರಿಂದಾದ ಸತ್ಕಾರ, ಇವೇ ಮೊದಲಾದವುಗಳ ಮೇಲೆ ಬೆಳಕು ಚೆಲ್ಲುತ್ತದೆ.

ಗುರುಗುಣಸ್ತವನದ ಮೇಲೆ ಶ್ರೀಜಯರಾಮಾರ್ಯರು ಬರೆದ ವ್ಯಾಖ್ಯಾನವು ಶ್ರೀವಸುಧೇಂದ್ರತೀರ್ಥರ ವ್ಯಾಖ್ಯಾನಕ್ಕಿಂತಲೂ ವಿಸ್ತಾರವಾದುದು. ಇವೆರಡೂ ವ್ಯಾಖ್ಯಾನ-ಗಳಲ್ಲಿ ಒಂದು ಸಂಕ್ಷೇಪವೂ ಇನ್ನೊಂದು ವಿಸ್ತಾರವಾಗಿಯೂ ಇರುವುದನ್ನು ನೋಡಿದರೆ **'ಸಂಕ್ಷೇಪವಿಸ್ತರಾಭ್ಯಾಂ ಹಿ ಕಥಯಂತಿ ಮನೀಷಿಣಃ'** ಎಂಬ ಸೂಕ್ತಿಯು ಸ್ಮರಣೆಗೆ ಬರುವದು.

ಈ ವ್ಯಾಖ್ಯಾನದ ಪ್ರಾರಂಭದಲ್ಲಿ **"ಶ್ರೀಮಧ್ವಾರ್ಯಗುರೂಂಸ್ತಥಾ ನಿಜಗುರೂನ್ ವಾದೀಂದ್ರವರ್ಯಾನ್ನಮನ್"** ಎಂದು ಶ್ರೀಮಧ್ವಾಚಾರ್ಯರಿಂದ ಹಿಡಿದು (ಶ್ರೀಮಧ್ವಾರ್ಯ) ಶ್ರೀರಾಘವೇಂದ್ರತೀರ್ಥರು ಹಾಗೂ ಶ್ರೀಉಪೇಂದ್ರತೀರ್ಥರ ವರೆಗಿನ ಎಲ್ಲ ಗುರುಗಳನ್ನು (**ಗುರೂನ್** ಎಂಬ ಪದದಿಂದ) ನಮಿಸಿ ನಂತರ ತಮ್ಮ ಗುರುಗಳಾದ ಶ್ರೀವಾದೀಂದ್ರ-

ವರ್ಯರನ್ನು ನಮಿಸಿದ್ದು ಕಂಡುಬರುತ್ತದೆ. ಇಲ್ಲಿ ಶ್ರೀವಸುಧೇಂದ್ರತೀರ್ಥರ ಉಲ್ಲೇಖವಿಲ್ಲ. ಇದನ್ನು ಗಮನಿಸಿದರೆ ಶ್ರೀಜಯರಾಮಾರ್ಯರು ಈ ವ್ಯಾಖ್ಯಾನವನ್ನು ಬರೆಯುವಾಗ ಶ್ರೀವಸುಧೇಂದ್ರತೀರ್ಥರಿಗೆ ಇನ್ನೂ ಆಶ್ರಮವಾಗಿರಲಿಲ್ಲವೆಂದು ತೋರುತ್ತದೆ.

**ಗುರುಗುಣಸ್ತವನಂ** ಎಂಬ ಪದವನ್ನು ಶ್ರೀಜಯರಾಮಾರ್ಯರು ತಮ್ಮ ವ್ಯಾಖ್ಯಾನದ ಪ್ರಾರಂಭಶ್ಲೋಕದಲ್ಲಿ "**ಗುರೋಃ ಗುಣನುತಿಂ**" ಅಂದರೆ ಗುರುಗಳ ಗುಣನುತಿ ಎಂದು ಅರ್ಥೈಸಿದ್ದಾರೆ. ಇದರಿಂದ ಈ ಗುರುಗುಣಸ್ತವನದಲ್ಲಿ ಗುರುಗಳ ಗುಣನುತಿ ಇದೆ ಎಂದರ್ಥವಾಗುವದು. ಈ ಸ್ತವನದಲ್ಲಿ ಸ್ರಗ್ಧರಾವೃತ್ತದ ೩೬ ಶ್ಲೋಕಗಳಿರುವುದನ್ನೂ ಈ ವ್ಯಾಖ್ಯಾಕಾರರೇ ತಿಳಿಸಿದ್ದಾರೆ. ಹಾಗಿದ್ದರೂ ಮಾತಸ್ತ್ವ.... ಎಂಬ ೨ನೆಯ ಶ್ಲೋಕವು ಶಾರ್ದೂಲವಿಕ್ರೀಡಿತ ವೃತ್ತದಲ್ಲಿದ್ದು ಇದಕ್ಕೆ ಇವರು ಮಾತ್ರ ವ್ಯಾಖ್ಯಾನವನ್ನು ಬರೆದಿದ್ದಾರೆ. ಆದರೆ ಶ್ರೀವಸುಧೇಂದ್ರತೀರ್ಥರು ಈ ಶ್ಲೋಕವನ್ನು ಪರಿಗಣಿಸಿಲ್ಲ. ಇದನ್ನು ಗಮನಿಸಿದರೆ ಈ ಶ್ಲೋಕವು ಗುರುಗುಣಸ್ತವನದ ಶ್ಲೋಕವೇ ಎಂಬ ಬಗ್ಗೆ ಸಂದೇಹ ಬರುವದು.

ಗುರುಗುಣಸ್ತವನಕ್ಕೆ ಶ್ರೀಜಯರಾಮಾರ್ಯರು ಬರೆದಿರುವ ವ್ಯಾಖ್ಯಾನದ ಒಂದು ಹಸ್ತಪ್ರತಿಯಲ್ಲಿ, ಶ್ರೀವಾದೀಂದ್ರತೀರ್ಥರ ಗುರುಗುಣಸ್ತವನದ ಉಪಸಂಹಾರದಲ್ಲಿ ಇನ್ನೂ ೬ ಅಧಿಕ ಶ್ಲೋಕಗಳು ಇರುವುದಾಗಿ ಶ್ರೀ ರಾಜಾ ಎಸ್. ಗುರುರಾಜಾಚಾರ್ಯರ-ರಿಂದ ಸಂಪಾದಿತವಾದ ಗುರುಗುಣಸ್ತವನ ಅನುವಾದ ಗ್ರಂಥದಲ್ಲಿ ಹೇಳಲ್ಪಟ್ಟಿದೆ. ಈ ಶ್ಲೋಕಗಳ ಕೊನೆಗೆ ವ್ಯಾಖ್ಯಾಕಾರರ ಉಪಸಂಹಾರ ಶ್ಲೋಕವೂ ಇದೆ. ಆಶ್ಚರ್ಯ-ವೇನೆಂದರೆ ವ್ಯಾಖ್ಯಾನದ ಉಪಕ್ರಮಶ್ಲೋಕದಲ್ಲಿ "ಶ್ರೀಜಯರಾಮಾರ್ಯರು ವ್ಯಾಖ್ಯಾಕರ್ತೃ" ಎಂದು ಉಲ್ಲೇಖವಿದ್ದರೆ ಹಸ್ತಪ್ರತಿಯಲ್ಲಿ ದೊರಕಿರುವ ಗುರುಗುಣಸ್ತವನದ ೬ ಅಧಿಕ ಶ್ಲೋಕಗಳ ಅಂತ್ಯದಲ್ಲಿರುವ ವ್ಯಾಖ್ಯಾನದ ಉಪಸಂಹಾರಶ್ಲೋಕದಲ್ಲಿ "ಶ್ರೀಧೀರೇಂದ್ರ-ತೀರ್ಥರು ವ್ಯಾಖ್ಯಾಕಾರ"ರೆಂದಿದೆ (**ಇತಿ ಶ್ರೀಧೀರೇಂದ್ರಯತಿವಿರಚಿತಾಖ್ಯಾ...**). ಗುರುಗುಣಸ್ತವನದ ಈ ೬ ಅಧಿಕ ಶ್ಲೋಕಗಳ ವೃತ್ತಗಳು ವ್ಯಾಖ್ಯಾನದ ಪ್ರಾರಂಭದಲ್ಲಿ ತಿಳಿಸಿದ ಸ್ರಗ್ಧರಾವೃತ್ತದಿಂದ ಭಿನ್ನವಾಗಿವೆ. ಈ ಅಧಿಕಶ್ಲೋಕಗಳಲ್ಲಿಯ ೫ ಶ್ಲೋಕಗಳಿಗೆ ಶ್ರೀಜಯರಾಮಾರ್ಯರ ವ್ಯಾಖ್ಯಾನವು ಉಪಲಬ್ಧವಿಲ್ಲವೆಂದೂ ತಿಳಿಸಲ್ಪಟ್ಟಿದೆ. ಈ ಅಧಿಕಶ್ಲೋಕಗಳು ಶ್ರೀವಸುಧೇಂದ್ರತೀರ್ಥರು ಪರಿಗಣಿಸಿದ ಗುರುಗುಣಸ್ತವನದಲ್ಲಿಲ್ಲ.

ಇದುವರೆಗೆ 'ಗುರುಗುಣಸ್ತವನ'ದ ಕರ್ತೃಗಳಾದ ಶ್ರೀವಾದೀಂದ್ರತೀರ್ಥರ ಪರಿಚಯವನ್ನು ಮತ್ತು 'ಗುರುಗುಣಸ್ತವನ'ದ ವ್ಯಾಖ್ಯಾಕಾರರಾದ ಶ್ರೀವಸುಧೇಂದ್ರತೀರ್ಥರ ಮತ್ತು ಶ್ರೀಜಯರಾಮಾರ್ಯರ (ಶ್ರೀಧೀರೇಂದ್ರತೀರ್ಥರು) ಪರಿಚಯವನ್ನು ಸಂಕ್ಷೇಪ-ದಲ್ಲಿ ಮಾಡಿಕೊಡಲಾಯಿತು. ಇನ್ನು ಮುಂದೆ ಗುರುಗುಣಸ್ತವನ ಕೃತಿಯ ಬಗ್ಗೆ ಪ್ರಾಸ್ತಾವಿಕವಾಗಿ ಕೆಲವು ವಿಷಯಗಳನ್ನು ಚರ್ಚಿಸಲಾಗುವದು.

## ಕೃತಿ ಪರಿಚಯ :

**ಗುರುಗುಣಸ್ತವನವೆಂದರೇನು ? :** ಗುರುಗುಣಸ್ತವನವೆಂದರೆ ಗುರುಗಳಲ್ಲಿ ಕಂಡು ಬರುವ (ಅನಿತರಸಾಧಾರಣ) ಗುಣಗಳ ಸ್ತುತಿ ಎಂದಾಗಲೀ ಅಥವಾ ಗುರುಗಳಲ್ಲಿರುವ 'ಗುರುಗುಣ' ಅಂದರೆ ಶ್ರೇಷ್ಠವಾದ ಗುಣಗಳ ಸ್ತವನವೆಂದಾಗಲೀ ಹೇಳಬಹುದು. 'ಗುರುಗುಣಸ್ತವನ' ಈ ಪದದಲ್ಲಿಯ 'ಗುರು, ಗುಣ ಹಾಗೂ ಸ್ತವನ' ಈ ಘಟಕ ಪದಗಳ ಲಕ್ಷಣ ಪ್ರಕಾರಗಳನ್ನು ಸಂಕ್ಷೇಪದಲ್ಲಿ ತಿಳಿದುಕೊಂಡರೆ 'ಗುರುಗುಣಸ್ತವನ' ಪದದ ಅರ್ಥವು ಸರಿಯಾಗಿ ಆಗುವದೆಂದು ಅವುಗಳನ್ನು ಯಥಾಮತಿ ಕೆಳಗೆ ವಿವರಿಸಲಾಗಿದೆ.

**ಗುರು : 'ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ'** (ಮ.ತಾ.ನಿ. ೧-೧೨೪) ಎಂದಂತೆ ತತ್ತ್ವವಿಷಯದಲ್ಲಿ ನಿಶ್ಚಿತಜ್ಞಾನವುಳ್ಳ ಮತ್ತು ಶಿಷ್ಯರ ಸಂಶಯಾದಿಗಳನ್ನು ನಿವಾರಿಸಲು ಸಮರ್ಥನಾದವನೇ 'ಗುರು' ಎಂದು ಕರೆಸಿಕೊಳ್ಳಲ್ಪಡುತ್ತಾನೆ ಎಂದು ಶ್ರೀಮದಾಚಾರ್ಯರು ಗುರುವಿನ ಲಕ್ಷಣವನ್ನು ಹೇಳಿದ್ದಾರೆ. ಇದೇ ಅರ್ಥವನ್ನು –

**ಗುಕಾರಸ್ತ್ವಂಧಕಾರಃ ಸ್ಯಾತ್ ರುಕಾರಸ್ತನ್ನಿರೋಧಕಃ ।**
**ಅಂಧಕಾರನಿರೋಧಿತ್ವಾತ್ ಗುರುರಿತ್ಯಭಿಧೀಯತೇ ॥** ಎಂಬ ಶ್ಲೋಕದಲ್ಲಿ ಕಾಣಬಹುದು. 'ಗು' ಅಂದರೆ ಅಂಧಕಾರ, ಅಜ್ಞಾನ, 'ರು' ಅಂದರೆ 'ರುಧ್' (ವಿರೋಧಿಸು ತಡಿ) ಎಂಬ ಧಾತುವಿನ ರೂಪವಾದ್ದರಿಂದ ತಡಿ, (ಅಡ್ಡಗಟ್ಟು) ಎಂದರ್ಥ. ಯಾರು ತನ್ನ ಅಜ್ಞಾನವನ್ನು ಹೋಗಲಾಡಿಸಿಕೊಂಡು ಇತರ ಸಜ್ಜನರ ಅಜ್ಞಾನವನ್ನು ಹೋಗಲಾಡಿಸಲು ಸಮರ್ಥನೋ ಅವನೇ 'ಗುರು' ಶಬ್ದವಾಚ್ಯನಾಗುತ್ತಾನೆ. ಈ ಶ್ಲೋಕದಲ್ಲಿಯ ಅಂಧಕಾರ ನಿರೋಧಿತ್ವಾತ್ ಎಂಬುದಕ್ಕೆ ತನ್ನ ಮತ್ತು ಇತರರ ಎಂದು ಎರಡು ಕಡೆ ಅನ್ವಯಿಸಿಕೊಂಡು ಅರ್ಥ ಮಾಡಬೇಕು.

**ಶಾಸ್ತ್ರಪ್ರಭವತ್ವಾದಿನಾ ಗುರುಶ್ಚೇತಿ ಭಾವಃ** ಎಂದು (ತತ್ತ್ವಪ್ರಕಾಶಿಕಾ ಭಾವದೀಪ) ಶ್ರೀರಾಘವೇಂದ್ರತೀರ್ಥರೂ, ಇಲ್ಲಿರುವ ಆದಿಪದವನ್ನು ವಿಸ್ತರಿಸಿ **'ಗುರುತ್ವಂ ಚಾನೇಕಧಾ ಸಂಪ್ರದಾಯಪ್ರವರ್ತಕತ್ವೇನ, ಉಪದೇಶಕತ್ವೇನ, ಅನುಗ್ರಾಹಕತ್ವೇನೇತಿ'** ಎಂದು (ಶ್ರೀರಾಘವೇಂದ್ರಸ್ತೋತ್ರವ್ಯಾಖ್ಯಾನ) ಶ್ರೀಧೀರೇಂದ್ರತೀರ್ಥರೂ ಗುರುಲಕ್ಷಣವನ್ನು ತಿಳಿಸುತ್ತಾರೆ. ಅಂದರೆ ಶಾಸ್ತ್ರಪ್ರಭವತ್ವ, ಸಂಪ್ರದಾಯಪ್ರವರ್ತಕತ್ವ, ಉಪದೇಶಕತ್ವ ಮತ್ತು ಅನುಗ್ರಾಹಕತ್ವ ಈ ನಾಲ್ಕು ಧರ್ಮಗಳಲ್ಲಿ ಒಂದೊಂದರಿಂದ ಯುಕ್ತನಾದವನೂ 'ಗುರು' ಎಂದಾಗುತ್ತಾನೆ. ಈ ನಾಲ್ಕರಲ್ಲಿ ಶಾಸ್ತ್ರಪ್ರಭವತ್ವವು ಹೆಚ್ಚು ಮಹತ್ವದ್ದಾಗಿರುತ್ತದೆ. ಶಾಸ್ತ್ರಪ್ರಭವತ್ವ ಎಂದರೆ ಶಾಸ್ತ್ರಗ್ರಂಥಗಳ ಅಧ್ಯಯನ ಅಧ್ಯಾಪನೆ, ಶಾಸ್ತ್ರಗ್ರಂಥಗಳ ರಚನೆ, ಸಿದ್ಧಾಂತ ಪ್ರಚಾರ ಮುಂತಾದವುಗಳನ್ನು ಗ್ರಹಿಸಬಹುದು. ಲೋಕದಲ್ಲಿ ಯೋಗ್ಯರಾದ ಗುರುಗಳೇನಿರುವರೋ ಅವರಲ್ಲಿ ಬಹುಳರು ಸಾಮಾನ್ಯವಾಗಿ

ಸಂಪ್ರದಾಯಪ್ರವರ್ತಕರು, ಉಪದೇಶಕರು ಅಥವಾ ಅನುಗ್ರಾಹಕರು ಆಗಿರುತ್ತಾರೆ. ಶಾಸ್ತ್ರಪ್ರಭವರಾಗಿರುವ ಗುರುಗಳು ಬಹು ವಿರಳ. ಶಾಸ್ತ್ರಪ್ರಭವತ್ವವಿದ್ದ ಯೋಗ್ಯರಾದ ಗುರುಗಳಲ್ಲಿ ಉಳಿದ ಮೂರು ಧರ್ಮಗಳು ಬಂದೇ ಬರುತ್ತವೆ. ಆದರೆ ಉಳಿದ ಮೂರು ಧರ್ಮಗಳಿದ್ದ ಮಾತ್ರಕ್ಕೆ ಶಾಸ್ತ್ರಪ್ರಭವತ್ವವು ಬರುತ್ತದೆಂದು ಹೇಳಲಾಗದು. ಶಾಸ್ತ್ರಪ್ರಭವತ್ವ ಧರ್ಮವು ಅಷ್ಟು ಶ್ರೇಷ್ಠವಾಗಿರುವುದರಿಂದಲೇ ಶ್ರೀರಾಘವೇಂದ್ರರು 'ಶಾಸ್ತ್ರಪ್ರಭವತ್ವಾದಿನಾ ಗುರುಶ್ಶ್ರೇತಿ ಭಾವಃ' ಎಂದು ಹೇಳಿದರು. ಈ ಕಾರಣದಿಂದಲೇ ಶ್ರೀಮದಾಚಾರ್ಯರು ತಮ್ಮ ಗುರುಗಳಾದ ಶ್ರೀವೇದವ್ಯಾಸರನ್ನು –

**ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ ಜಗದ್ಗುರೂಣಾಂ ಗುರುಮಂಜಸೈವ ।**
**ವಿಶೇಷತೋ ಮೇ ಪರಮಾಖ್ಯವಿದ್ಯಾವ್ಯಾಖ್ಯಾಂ ಕರೋಮ್ಯನ್ವಪಿ ಚಾಹಮೇವ ॥**

ಎಂಬಲ್ಲಿ ಶಾಸ್ತ್ರಪ್ರಭವರೆಂದು ಸ್ತುತಿಸಿದ್ದಾರೆ. ಆದ್ದರಿಂದ "ಗುರುಗುಣಸ್ತವನ" ಎಂಬ ಈ ಖಂಡಕಾವ್ಯದಲ್ಲಿ ಶ್ರೀವಾದೀಂದ್ರತೀರ್ಥರು ಶಾಸ್ತ್ರಗ್ರಂಥಕರ್ತೃಗಳಾದ ಅಥವಾ ಪಾಠಪ್ರವಚನಾದಿಗಳಿಂದ ಶಾಸ್ತ್ರಪ್ರವರ್ತಕರಾದ ತಮ್ಮ ಗುರುಗಳನ್ನಷ್ಟೇ ಆಯ್ದು ಅವರ ಸ್ಮರಣಪೂರ್ವಕ ಆ ಗುರುಗಳ ಅನಿತರ ಸಾಧಾರಣ ಗ್ರಂಥರಚನೆ, ಗ್ರಂಥರಚನಾಕೌಶಲಾದಿ-ಗಳನ್ನು ವರ್ಣಿಸಿದ್ದು ಕಂಡುಬರುತ್ತದೆ. ಪರಮ ಆಸ್ತಿಕರಾದ ಶ್ರೀವಾದೀಂದ್ರತೀರ್ಥರು ಮಹಾಸಂಸ್ಥಾನದ ಉಳಿದೆಲ್ಲ ಗುರುಗಳನ್ನು ಮಾನಸಿಕವಾಗಿ ವಂದಿಸಿರಲು ಸಾಕು.

## ಗುರುಪ್ರಕಾರ :

**ಸ್ಮೃತ್ವಾ ಗುರುಂ ಪೂರ್ವಗುರುಂ ಆದಿಮೂಲಗುರೂಂಸ್ತಥಾ ।**
**ದೇವತಾಂ ವಾಸುದೇವಂ ಚ ವಿದ್ಯಾಭ್ಯಾಸೀ ತು ಸಿದ್ಧಿಭಾಕ್ ॥**

*– ತಂತ್ರಸಾರಸಂಗ್ರಹ ೪.೧೦೭.*

— ತನ್ನ ಗುರುವನ್ನೂ, ಆ ಗುರುಗಳ ಗುರುವನ್ನೂ (ಪೂರ್ವಗುರು) ಅಂದರೆ ಪರಮಗುರುವನ್ನೂ, (ಅಥವಾ ಪರಮಗುರುವಿನಿಂದ ಆದಿಗುರುಗಳವರೆಗಿನ ಎಲ್ಲ ಪೂರ್ವ ಗುರುಗಳನ್ನೂ), ಆದಿಗುರುವನ್ನೂ, ಮೂಲಗುರುಗಳನ್ನೂ ಮತ್ತು ಆಯಾ ಪ್ರಸಂಗೋಚಿತ ಕಾರ್ಯಕ್ಕೆ ಅಥವಾ ಮಂತ್ರಕ್ಕೆ ನಿಯಾಮಕನಾದ (ಪ್ರತಿಪಾದ್ಯನಾದ) ದೇವತೆಯನ್ನೂ (ದೇವತಾಂ) ಅಥವಾ ವಿದ್ಯಾದೇವತೆಯನ್ನೂ ಮುಕ್ತಿಪ್ರದನಾದ ವಾಸುದೇವನನ್ನೂ ಸ್ಮರಿಸಿ ವಿದ್ಯಾಭ್ಯಾಸವನ್ನು ಪ್ರಾರಂಭಿಸುವವನಿಗೆ ಆ ವಿದ್ಯೆಯಾಗಲೀ ಅಥವಾ ಹಿಡಿದ ಕಾರ್ಯವಾಗಲೀ ಸಿದ್ಧಿಸುತ್ತದೆ ಎಂದರ್ಥ.

ಗುರು, ಪರಮಗುರು, ಆದಿಗುರು, ಮೂಲಗುರುಗಳು, ದೇವತಾ ಮತ್ತು ವಾಸುದೇವ ಇಷ್ಟು ಜನರು ನಮಗೆಲ್ಲರಿಗೂ ಗುರುಗಳಾಗಿದ್ದಾರೆ. ಇವರಲ್ಲಿ ಸಕಲರಿಗೂ

ಆದಿಗುರುಗಳು ಶ್ರೀಮಧ್ವಾಚಾರ್ಯರು. ಮೂಲಗುರುಗಳು ಏಳು ಎಂದು ಪಂಚರಾತ್ರದಲ್ಲಿ ಹೇಳಲಾಗಿದೆ. ಅವರಾರೆಂದರೆ –

ವ್ಯಾಸಂ ಚ ಭಾರತೀಂ ವಾಣೀಂ ವಿಧಿಂ ವಾಯುಂ ರಮಾಂ ತಥಾ ।
ತಥಾ ನಾರಾಯಣಂ ಮೂಲಗುರೂನಾಹುರ್ವಿಪಶ್ಚಿತಃ ॥ – *ಪಂಚರಾತ್ರೇ*
*(ತಂತ್ರಸಾರಸಂಗ್ರಹ – ಛಲಾರೀಟೀಕಾ)*

— ಶ್ರೀವೇದವ್ಯಾಸರು, ಭಾರತೀದೇವಿ, ಸರಸ್ವತೀದೇವಿ, ಬ್ರಹ್ಮ, ವಾಯು, ಲಕ್ಷ್ಮೀದೇವೀ ಮತ್ತು ನಾರಾಯಣ ಈ ಏಳು ದೇವತೆಗಳು ಮೂಲ ಗುರುಗಳಾಗಿದ್ದಾರೆ. ಇವರನ್ನು ಮಾತ್ರವೇ ಮೂಲಗುರುಗಳೆಂದು ಏಕೆ ಪರಿಗಣಿಸಬೇಕೆಂಬುದಕ್ಕೆ ಶ್ರೀಮದಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ಕಾರಣವನ್ನು ಹೇಳಿದ್ದಾರೆ –

ಇಷ್ಟಂ ದೈವಂ ಹರಿಃ ಸಾಕ್ಷಾತ್ ಲಕ್ಷ್ಮೀರ್ಭಾಗ್ಯಸ್ಯ ದೇವತಾ ।
ಗುರುರ್ಬ್ರಹ್ಮಾಥ ವಾಯುರ್ವಾ ವಿದ್ಯಾದೇವ್ಯೌ ಪ್ರಕೀರ್ತಿತೇ ॥
ತಸ್ಮಾದೇತೇ ಪ್ರಿಯಾ ವಿಷ್ಣೋರಂತರಂಗತಯಾ ಸದಾ ।
ಜ್ಞೇಯಾಶ್ಚೈವ ಪ್ರಪೂಜ್ಯಾಶ್ಚ ವಿಷ್ಣೋಃ ಪ್ರೀತಿಮಭೀಪ್ಸತಾ ॥
*– ತಂತ್ರಸಾರಸಂಗ್ರಹ ಅ.೪. ೭೯-೮೧.*

— ಪಂಚರಾತ್ರಾಗಮದಲ್ಲಿ ಹೇಳಿದ ಮೇಲಿನ ಏಳು ಮೂಲಗುರುಗಳಲ್ಲಿ ಶ್ರೀವೇದವ್ಯಾಸರು ಮತ್ತು ನಾರಾಯಣ ಇವರು ಸಾಕ್ಷಾತ್ ಇಷ್ಟದೇವತೆ. ಲಕ್ಷ್ಮಿಯು ಭಾಗ್ಯದೇವತೆ, ಬ್ರಹ್ಮ ವಾಯುಗಳು ಮುಖ್ಯಗುರುಗಳು ("ತಸ್ಮಾದ್ ಬ್ರಹ್ಮಾ ಗುರುರ್ಮುಖ್ಯಃ ಸರ್ವೇಷಾಮೇವ ಸರ್ವದಾ" – ಮ.ತಾ.ನಿ. ಅ.೧. ಶ್ಲೋ. ೧೨೪) ಸರಸ್ವತೀ ಭಾರತೀದೇವಿಯರು ವಿದ್ಯಾದೇವಿಯರು. ಇವರ ಅನುಗ್ರಹವಿಲ್ಲದೇ ವಿದ್ಯೆಯು ತಲೆಗೇ ಹತ್ತುವದಿಲ್ಲ. ಇವರೆಲ್ಲರೂ ಶ್ರೀಹರಿಯ ಅಂತರಂಗಭಕ್ತರಾಗಿದ್ದಾರೆ. ಶ್ರೀಹರಿಯ ಪ್ರಸಾದವನ್ನು ಅಪೇಕ್ಷಿಸುವವರು ಈ ಮೂಲ ಗುರುಗಳ ಮಹಿಮೆಯನ್ನು ತಿಳಿಯಬೇಕು ಮತ್ತು ಅವರನ್ನು ಭಕ್ತಿಯಿಂದ ಪೂಜಿಸಬೇಕು.

ಈ ಮೂಲಗುರುಗಳಲ್ಲಿ ೧. ಲಕ್ಷ್ಮೀ, ೨. ಬ್ರಹ್ಮ-ವಾಯು, ೩. ಸರಸ್ವತೀ-ಭಾರತೀ ಇವರು ಪರಶುಕ್ಲತ್ರಯರೆಂದು ಕರೆಯಿಸಿಕೊಳ್ಳಲ್ಪಡುತ್ತಾರೆ. ಇವರು ಸದಾ ಶುದ್ಧರು, ಇವರಲ್ಲಿ ಕಲಿಪ್ರವೇಶವೇ ಇಲ್ಲ.

ಈ ಮೇಲಿನ ವಿವರಣೆಯಿಂದ ಪ್ರತಿಯೊಬ್ಬನೂ ವಿದ್ಯಾರಂಭದಲ್ಲಾಗಲೀ, ಕಾರ್ಯಾರಂಭದಲ್ಲಾಗಲೀ, ೧. ಸಾಕ್ಷಾತ್ ವಿದ್ಯಾಗುರು ೨. ಪರಮಗುರು ೩. ಆದಿಗುರುಗಳಾದ ಶ್ರೀಮಧ್ವಾಚಾರ್ಯರು ೪. ಶ್ರೀವೇದವ್ಯಾಸರು ೫. ಭಾರತೀದೇವಿ ೬. ಸರಸ್ವತೀ ದೇವಿ ೭. ಬ್ರಹ್ಮದೇವ ೮. ವಾಯು ೯. ಭಾಗ್ಯದೇವತೆ ಮಹಾಲಕ್ಷ್ಮೀ, ಮತ್ತು

೧೦. ನಾರಾಯಣ ಎಂಬ **ಸಪ್ತ** (೪–೧೦) ಮೂಲಗುರುಗಳು ೧೧. ಆಯಾಮಂತ್ರ, ವಿದ್ಯೆ ಅಥವಾ ಕರ್ಮಗಳಿಗೆ ನಿಯಾಮಕನಾದ ಭಗವದ್ರೂಪ (ಮಂತ್ರದೇವತೆ) ಮತ್ತು ೧೨. ಮುಕ್ತಿಪ್ರದನಾದ ಶ್ರೀವಾಸುದೇವ ಈ ದ್ವಾದಶಗುರುಗಳನ್ನು ಭಕ್ತಿಯಿಂದ ವಂದಿಸಬೇಕೆಂಬುದು ತಿಳಿಯುವದು.

ನಿತ್ಯ 'ಗುರುನಮಸ್ಕಾರ'ದಲ್ಲಿ ಈ ದ್ವಾದಶಗುರುಗಳ ನಮನವನ್ನು ಹೀಗೆ ಮಾಡುತ್ತೇವೆ.

೧) ಓಂ ಶ್ರೀಗುರುಭ್ಯೋ ನಮಃ । ೨) ಶ್ರೀಪರಮಗುರುಭ್ಯೋ ನಮಃ । ೩) ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯೇಭ್ಯೋ ನಮಃ । ೪) ಶ್ರೀವೇದವ್ಯಾಸಾಯ ನಮಃ । ೫) ಶ್ರೀಭಾರತ್ಯೈ ನಮಃ । ೬) ಶ್ರೀಸರಸ್ವತ್ಯೈ ನಮಃ । ೭) ಶ್ರೀವಾಯವೇ ನಮಃ । ೮) ಶ್ರೀಬ್ರಹ್ಮಣೇ ನಮಃ । ೯) ಶ್ರೀಮಹಾಲಕ್ಷ್ಮ್ಯೈ ನಮಃ । ೧೦) ಶ್ರೀನಾರಾಯಣಾಯ ನಮಃ । ೧೧) ಏಕಾದಶಸ್ಥಾನೇ ತತ್ತನ್ಮಂತ್ರದೇವತಾ ಇಷ್ಟದೇವತಾ ಕುಲದೇವತಾತ್ಮಕ ಶ್ರೀಸೀತಾರಾಮಚಂದ್ರಾಯ / ಶ್ರೀರುಕ್ಮಿಣೀಸತ್ಯಭಾಮಾಸಮೇತ ಶ್ರೀಗೋಪಾಲಕೃಷ್ಣಾಯ / ಶ್ರೀಲಕ್ಷ್ಮೀನೃಸಿಂಹಾಯ / ಶ್ರೀಲಕ್ಷ್ಮೀಹಯಗ್ರೀವಾಯ / ಶ್ರೀಲಕ್ಷ್ಮೀವೆಂಕಟೇಶಾಯ ನಮಃ । ೧೨) ಮುಕ್ತಿಪ್ರದ ಶ್ರೀ ವಾಸುದೇವಾಯ ನಮಃ ।।

ಪ್ರಕೃತ ಗುರುಗುಣಸ್ತವನದಲ್ಲಿ ಈ ದ್ವಾದಶ ಗುರುಗಳ ಪೈಕಿ ಎಷ್ಟು ಗುರುಗಳ ಪ್ರಸ್ತಾಪವಿದೆ ಎಂಬುದನ್ನು ಈಗ ನೋಡೋಣ. ಇಲ್ಲಿ ಪ್ರಸ್ತಾಪಿಸಲ್ಪಟ್ಟ ದೇವತೆಗಳು ಗುರುಗಳು ಮೊದಲಾದವರನ್ನು ಶ್ಲೋಕಾನುಸಾರವಾಗಿ ಹೀಗೆ ಸಂಗ್ರಹಿಸಬಹುದು. ಕಂಸಿನಲ್ಲಿ ಶ್ರೀಜಯರಾಮಾರ್ಯರ (ಶ್ರೀಧೀರೇಂದ್ರತೀರ್ಥರ) ವ್ಯಾಖ್ಯಾನಾನುಸಾರ ಶ್ಲೋಕ ಸಂಖ್ಯೆಯನ್ನು ಕೊಟ್ಟಿದೆ.

೧) ಶ್ರೀಪತಿ ನಾರಾಯಣ [೧] ಮತ್ತು ಶ್ರೀ ಭೂದುರ್ಗಾ [೧] ೨) ಶ್ರೀಲಕ್ಷ್ಮೀದೇವಿ [೨] ೩) ಹನುಮಭೀಮಮಧ್ವರೂಪೀ ಮುಖ್ಯಪ್ರಾಣ [೩] ೪) ಪವಮಾನರೂಪಿಯಾದ ಶ್ರೀಮಧ್ವಾಚಾರ್ಯರು [೪] ೫) ಶ್ರೀಜಯತೀರ್ಥರು [೫] ೬) ಶ್ರೀರಾಮವ್ಯಾಸದಾಸ ಶ್ರೀವಿಬುಧೇಂದ್ರತೀರ್ಥರು [೬] ೭) ಶ್ರೀನೃಸಿಂಹದೇವರ ಮೂರು ಕಣ್ಣುಗಳಂತಿರುವ ಮೂರು ಗ್ರಂಥಗಳನ್ನು ಬರೆದ ಶ್ರೀವ್ಯಾಸರಾಜರು [೭] ೮) ಶ್ರೀಸುರೇಂದ್ರತೀರ್ಥರ ವರಕುವರ ಶ್ರೀವಿಜಯೀಂದ್ರತೀರ್ಥರು [೮] ೯) ಗರುಡವಾಹನಲಕ್ಷ್ಮೀನಾರಾಯಣನ ಪಾದಾಶ್ರಿತರಾದ ಶ್ರೀಸುಧೀಂದ್ರತೀರ್ಥರು [೯] ೧೦) ಶ್ರೀರಾಘವೇಂದ್ರತೀರ್ಥರು [೧೦] ೧೧) ಶ್ರೀರಾಮವ್ಯಾಸರ ಪಾದಧ್ಯಾನಾಸಕ್ತರಾದ, ಶ್ರೀಸುಮತೀಂದ್ರತೀರ್ಥರ ಶಿಷ್ಯಾಗ್ರಗಣ್ಯರಾದ ಶ್ರೀ ಉಪೇಂದ್ರತೀರ್ಥರು [೧೧] ೧೨) ಶ್ರೀರಾಘವೇಂದ್ರತೀರ್ಥರು [೧೨, ೧೩] ೧೩) ರವಿ, ಚಂದ್ರ, ಇತರೆಲ್ಲ ಗ್ರಹಗಳು (ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು), ಅಶ್ವಿನ್ಯಾದಿ ನಕ್ಷತ್ರಗಳು, ಇವೇ ಮೊದಲಾದವುಗಳ ಒಟ್ಟು ಪ್ರಕಾಶವನ್ನು ಮೀರಿಸುವ ಪ್ರಕಾಶಯುತರಾದ ಶ್ರೀರಾಘವೇಂದ್ರತೀರ್ಥರು [೧೪]

೧೪) ಶ್ರೀರಾಘವೇಂದ್ರತೀರ್ಥರು [೧೫] ೧೫) ಶ್ರೀಮದಾಚಾರ್ಯರು (ಮೂಲರೂಪ ಬ್ರಹ್ಮದೇವ) ಮತ್ತು ಸರಸ್ವತೀದೇವಿ ಇವರಿಂದ ವಿಶೇಷವಾಗಿ ಅನುಗ್ರಹೀತರಾದ ಶ್ರೀರಾಘವೇಂದ್ರತೀರ್ಥರು. [೧೬] ೧೬) ಶ್ರೀರಾಘವೇಂದ್ರತೀರ್ಥರು [೧೭, ೧೮, ೧೯, ೨೦, ೨೧] ೧೭) ಶ್ರೀಕೃಷ್ಣನ ಪುಟ್ಟದಾದ ಬಾಯಿಯಲ್ಲಿ ಬ್ರಹ್ಮಾಂಡವನ್ನೇ ಕಂಡ ಯಶೋದೆಯಂತೆ ಶ್ರೀಮದಾಚಾರ್ಯರ ಚಿಕ್ಕದಾದ ಅಣುಭಾಷ್ಯದಲ್ಲಿರುವ ಅನೇಕಾರ್ಥಗಳನ್ನು ತಿಳಿದು ತತ್ತ್ವಮಂಜರಿಯಲ್ಲಿ ಪ್ರಕಾಶಪಡಿಸಿದ ಶ್ರೀರಾಘವೇಂದ್ರರು [೨೨] ೧೮) ಶ್ರೀರಾಘವೇಂದ್ರತೀರ್ಥರು [೨೩, ೨೪] ೧೯) ಶ್ರೀಕೃಷ್ಣನು ಭಗವದ್ಗೀತೆಯನ್ನು ರಚಿಸಿದಾಗ ಚಂದ್ರವಂಶಕ್ಕೆ ಕ್ಷೇಮವಾದಂತೆ ಧೀರಶ್ರೀರಾಘವೇಂದ್ರರು ಗೀತಾರ್ಥಸಂಗ್ರಹವನ್ನು ರಚಿಸಿದಾಗ ಯತಿವಂಶ / ಸೂರ್ಯವಂಶಕ್ಕೆ ಮಂಗಳವಾಯಿತು [೨೫] ೨೦) ಶ್ರೀರಾಘವೇಂದ್ರ-ತೀರ್ಥರು [೨೬] ೨೧) ಪ್ರತ್ನರ ಅಂದರೆ ಅನೇಕ ಪೂರ್ವಾಚಾರ್ಯರ ಪ್ರಬಂಧಗಳಿಗೆ ವ್ಯಾಖ್ಯಾನ ಬರೆದ ಶ್ರೀರಾಘವೇಂದ್ರತೀರ್ಥರು – ಶ್ರೀಸುಧೀಂದ್ರರು, ಶ್ರೀವಿಜಯೀಂದ್ರರು, ಶ್ರೀವ್ಯಾಸರಾಜರು, ಶ್ರೀಟೀಕಾಕೃತ್ಪಾದ ಶ್ರೀಜಯತೀರ್ಥರು, ಶ್ರೀನರಹರಿತೀರ್ಥರು ಹಾಗೂ ಶ್ರೀಪದ್ಮನಾಭತೀರ್ಥರು, ಶ್ರೀಮಧ್ವಾಚಾರ್ಯರು ಮತ್ತು ಶ್ರೀತ್ರಿವಿಕ್ರಮ ಪಂಡಿತಾಚಾರ್ಯರು ಇವರೇ ಮೊದಲಾದವರ ಗ್ರಂಥಗಳಿಗೆ ವ್ಯಾಖ್ಯಾನ ಬರೆದುದರಿಂದ ಅಥವಾ ಅವರ ಗ್ರಂಥಗಳನ್ನು ತಮ್ಮ ಕೃತಿಗಳಲ್ಲಿ ಪ್ರಸ್ತಾಪಿಸಿರುವುದರಿಂದ ಶ್ರೀರಾಘವೇಂದ್ರತೀರ್ಥರಿಗೆ ಇವರೆಲ್ಲ ಪ್ರತ್ನರಾದರು [೨೭]. ೨೨) ಶ್ರೀರಾಘವೇಂದ್ರ-ತೀರ್ಥರು [೨೮,೨೯, ೩೦,೩೧,೩೨,೩೩] ೨೩) ದಶರಥರಾಜನಿಗೆ ಸಂತೋಷವನ್ನುಂಟು ಮಾಡಿ ಕೀರ್ತಿಯನ್ನು ಸಂಪಾದಿಸಿದ ಶ್ರೀರಾಮಚಂದ್ರನಂತೆ, ನ್ಯಾಯಾಮೃತಕ್ಕೆ ವ್ಯಾಖ್ಯಾನ ಬರೆಯದಿದ್ದರೂ ಕೀರ್ತಿಪಡೆದ ಶ್ರೀರಾಘವೇಂದ್ರತೀರ್ಥರು [೩೪] ೨೪) ಸಪ್ತ ಸಾಗರಗಳನ್ನು ಆಪೋಶನ ಮಾಡಿದ **ಅಗಸ್ತ್ಯರಂತೆ** ವಿಸ್ತಾರವಾದ ರಾಮಾಯಣ ಮಹಾಭಾರತಾದಿಗಳನ್ನು ಸಂಕ್ಷೇಪದಲ್ಲಿ ವರ್ಣಿಸುವ ಶ್ರೀರಾಮ ಹಾಗೂ ಶ್ರೀಕೃಷ್ಣಚಾರಿತ್ರ ಮಂಜರೀ, ಮ.ತಾ. ನಿರ್ಣಯ ಭಾವಸಂಗ್ರಹಾದಿಗಳನ್ನು ರಚಿಸಿದ ಶ್ರೀರಾಘವೇಂದ್ರಯತಿ-ವರ್ಯರು [೩೫] ೨೫) ಶ್ರೀರಾಘವೇಂದ್ರತೀರ್ಥರು [೩೬] ೨೬) ಶ್ರೀವೇದವ್ಯಾಸರು, ಶ್ರೀಮದಾಚಾರ್ಯರು, ಶ್ರೀಪದ್ಮನಾಭಾದಿ ಪ್ರಾಚೀನ ಗುರುಗಳು, ಶ್ರೀಜಯತೀರ್ಥರು, ಶ್ರೀವ್ಯಾಸರಾಜರು, ಶ್ರೀವಿಜಯೀಂದ್ರತೀರ್ಥರು ಮತ್ತು ಶ್ರೀರಾಘವೇಂದ್ರತೀರ್ಥರು [೩೭]

ಈ ರೀತಿ ಗುರುಗುಣಸ್ತವನದಲ್ಲಿ ದ್ವಾದಶಗುರುಗಳು ಒಂದಿಲ್ಲೊಂದು ಸಂದರ್ಭದಲ್ಲಿ ಪ್ರಸ್ತಾಪಿಸಲ್ಪಟ್ಟಿದ್ದಾರೆ. ಇಲ್ಲಿ ದ್ವಾದಶಗುರುಗಳೊಳಗಿನ ಕೆಲವು ಗುರುಗಳು ಸ್ಪಷ್ಟವಾಗಿ ಹಾಗೂ ಪ್ರತ್ಯೇಕವಾಗಿಯೂ ಸ್ತುತಿಸಲ್ಪಟ್ಟಿದ್ದರೆ ಇನ್ನು ಕೆಲವು ಗುರುಗಳ ಸ್ತವನವು ಸ್ಪಷ್ಟವಾಗಿ ಗೋಚರವಾಗುವದಿಲ್ಲ.

**ಗುಣಗಳು :** ಈ ಗುರುಗಳ ಗುಣಗಳ ಮೇಲೆ ಪ್ರಕಾಶ ಬೀರುವ ಮೊದಲು ಗುಣಗಳೆಂದರೇನು ಎಂಬುದನ್ನು ಸಂಕ್ಷೇಪದಲ್ಲಿ ಕೆಳಗೆ ನಿರೂಪಿಸಲಾಗಿದೆ.

**'ಗುಣ' ಶಬ್ದದ ವಿವಿಧ ಅರ್ಥಗಳು :**

೧) "ಪ್ರಮಾಯಾ ಅಸಾಧಾರಣಕಾರಣಂ ಗುಣಃ" ಅಂದರೆ ಜ್ಞಾನಕ್ಕೆ ಅಸಾಧಾರಣ ಕಾರಣವಾದದ್ದು ಗುಣ ಎಂದು ಕೆಲವರು ಹೇಳುತ್ತಾರೆ.

೨) ರೂಪಾದಿ ೨೪ ಗುಣಗಳೆಂದು ವೈಶೇಷಿಕರು ಹಾಗೂ ನೈಯಾಯಿಕರ ಮತ.

೩) ವಸ್ತುಧರ್ಮವು ಗುಣ ಎಂದು ವೈಯಾಕರಣಾದಿಗಳ ಮತ.

೪) ಅಂಗವಾದದ್ದು ಗುಣ ಎಂದು ಮೀಮಾಂಸಾಕರು ತಿಳಿದಿದ್ದಾರೆ. ಹೇಗೆಂದರೆ 'ಧಧ್ನಾ ಜುಹೋತಿ' ಎಂಬಲ್ಲಿ ಪ್ರಧಾನಯಾಗದಲ್ಲಿ ಆಧೇಯವಿಶೇಷವಾದ ದಧಿಯು ಯಾಗಾಂಗವಾಗಿದ್ದು ಗುಣ ಎಂದು ಕರೆಯಲ್ಪಡುತ್ತದೆ.

೫) ಸತ್ವ, ರಜಸ್ ಹಾಗೂ ತಮಸ್‌ಗಳು ಮೂರು ಗುಣಗಳು ಎಂದು ಸಾಂಖ್ಯರು.

೬) ಜ್ಞಾನಾನಂದಾದಿಗಳು ಗುಣಗಳೆಂದು ವೇದಾಂತಿಗಳು.

೭) ಶಮದಮತಿತಿಕ್ಷಾದಿಗಳು ಗುಣಗಳೆಂದು ಯೋಗಿಗಳು.

೮) ಶೌರ್ಯಾದಿಗಳು ಗುಣಗಳೆಂದು ವ್ಯವಹಾರಜ್ಞರು.

೯) ಮಾಧುರ್ಯ, ಓಜಸ್, ಪ್ರಸಾದ ಈ ಮೂರು ಗುಣಗಳೆಂದು ಆಲಂಕಾರಿಕರು.

೧೦) ಅಕಾರ್ಪಣ್ಯ, ಅಸ್ಪೃಹತ್ವಾದಿಗಳನ್ನು ಗುಣಗಳೆಂದು ಧರ್ಮಶಾಸ್ತ್ರಜ್ಞರು ತಿಳಿದಿದ್ದಾರೆ.

೧೧) ದೇಶಕಾಲಜ್ಞತಾದಿ (ದೇಶಕಾಲಗಳ ಜ್ಞಾನವಿರೋಣವು = ಲೋಕಾಂತರಗಳ ಜ್ಞಾನ ಮತ್ತು ಭೂತ ಭವಿಷ್ಯಗಳ ಜ್ಞಾನ ವಿರೋಣ) ಗುಣ ಎಂದು ಪೌರಾಣಿಕರು.

೧೨) ದೋಷಾನ್ಯ ಧರ್ಮಗಳನ್ನು ಗುಣಗಳೆಂದು ಇನ್ನು ಕೆಲವರು ತಿಳಿಯುತ್ತಾರೆ.

೧೩) **ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯನಿಗ್ರಹಃ |**
**ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಮ್ || – ಮನುಸ್ಮೃತಿ**
ಎಂದು ಮನುಸ್ಮೃತಿಕಾರನು ಧರ್ಮದ ಲಕ್ಷಣವನ್ನು ತಿಳಿಸುತ್ತ ಧೃತಿ, ಕ್ಷಮಾ, ದಮ, ಅಸ್ತೇಯ, ಶೌಚ, ಇಂದ್ರಿಯನಿಗ್ರಹ, ಧೀ, ವಿದ್ಯಾ, ಸತ್ಯ ಮತ್ತು ಅಕ್ರೋಧ ಎಂಬ ಹತ್ತು ಗುಣಗಳೆಂದು ಹೇಳುತ್ತಾನೆ.

೧೪) ನಾಟ್ಯಶಾಸ್ತ್ರದ ಸಾಹಿತ್ಯದರ್ಪಣಕಾರನು ಸಾತ್ವಿಕನಾಯಕನ ಗುಣಗಳನ್ನು ಹೀಗೆ ತಿಳಿಸುತ್ತಾನೆ –

**ಶೋಭಾ ವಿಲಾಸೋ ಮಾಧುರ್ಯಂ ಗಾಂಭೀರ್ಯಂ ಧೈರ್ಯತೇಜಸೀ |**
**ಲಲಿತೌದಾರ್ಯಮಿತ್ಯಷ್ಟೌ ಸತ್ವಜಾಃ ಪೌರುಷಾ ಗುಣಾಃ || ೫೮ ||**

*– ಸಾಹಿತ್ಯದರ್ಪಣೇ - ೩*

ಶೋಭಾ, ವಿಲಾಸ, ಮಾಧುರ್ಯ, ಗಾಂಭೀರ್ಯ, ಧೈರ್ಯ, ತೇಜಸ್ಸು, ಲಾಲಿತ್ಯ ಮತ್ತು ಔದಾರ್ಯ ಈ ಎಂಟು ಗುಣಗಳು ಸಾತ್ವಿಕ ನಾಯಕನ ಗುಣಗಳೆಂದು ತಿಳಿಸುತ್ತಾನೆ.

ಶಾಸ್ತ್ರಕಾರರ ದೃಷ್ಟಿಯಲ್ಲಿ ಗುಣಶಬ್ದದ ವಿವಿಧ ಅರ್ಥಗಳನ್ನು ತಿಳಿದಾದ ಮೇಲೆ ಕೋಶಗಳಲ್ಲಿ ಕಂಡುಬರುವ ಗುಣಶಬ್ದಾರ್ಥಗಳನ್ನು ಗಮನಿಸೋಣ.

ಗುಣಶಬ್ದಕ್ಕೆ ಸಂಸ್ಕೃತದಲ್ಲಿ ನಾನಾರ್ಥಗಳಿವೆ. (ಶ್ರೀಹರಿವಾಯುಸ್ತುತಿಯ ವ್ಯಾಖ್ಯಾನ-ದಿಂದ ಉದ್ಧರಿಸಿದ್ದು) –

i) **ಸತ್ತ್ವಾದೌ ರೂಪಾದೌ ಕಾರ್ಯಾದೌ ತಂತುಷು ಪ್ರಯೋಗಜ್ಞಾಃ ।**
**ಗುಣಶಬ್ದಂ ಶಿಂಜಿನ್ಯಾಂ ಪ್ರಯೋಜಯಂತ್ಯಪ್ರಧಾನೇಽಪಿ ॥** – *ಅಭಿಧಾನಂ*

ಈ ಶ್ಲೋಕದಲ್ಲಿ ಹಿಂದೆ ಹೇಳಿದ ಕೆಲವು ಶಾಸ್ತ್ರಕಾರರ ಗುಣಶಬ್ದಾರ್ಥವನ್ನು ಸಂಗ್ರಹಿಸಲಾಗಿದೆ.

ii) **ಗುಣೋ ಮೌರ್ವ್ಯಾಮಪ್ರಧಾನೇ ರೂಪಾದೌ ಸೂದ ಇಂದ್ರಿಯೇ ।**
**ತ್ಯಾಗಶೌರ್ಯಾದಿಸತ್ವಾದಿಸಂಧ್ಯಾದ್ಯಾವೃತ್ತಿರಜ್ಜುಷು ॥**
**ಶುಕ್ಲಾದಾವಪಿ ಬುಧ್ಯಾಂ ಚ .. ॥** – *ಮೇದಿನೀಕೋಶ*

ಬಿಲ್ಲಿನ ಹೆದೆ, ಅಪ್ರಧಾನ, ರೂಪಾದಿಗಳು (ತಾರ್ಕಿಕರ ೨೪ ಗುಣಗಳು), ಪಾಚಕ ಅಥವಾ ಸಾರು, ಇಂದ್ರಿಯ, ತ್ಯಾಗ, ಶೌರ್ಯಾದಿ, ಸತ್ತ್ವಾದಿ, ಸಂಧ್ಯಾದಿ, ಆವೃತ್ತಿ, ರಜ್ಜು, ಶುಕ್ಲಾದಿಗಳು ಮತ್ತು ಬುದ್ಧಿ ಎಂಬ ಅರ್ಥಗಳಲ್ಲಿ ಗುಣಶಬ್ದವು ಪ್ರಯೋಗಿಸಲ್ಪಡುತ್ತದೆ.

iii) **.... ಗುಣೋ ಜ್ಯಾಸೂತ್ರತಂತುಷು । ರಜ್ಜ್ವಾಂ ಸತ್ತ್ವಾದೌ ಸಂಧ್ಯಾದೌ**
**ಶೌರ್ಯಾದೌ ಭೀಮ ಇಂದ್ರಿಯೇ । ರೂಪಾದಾವಪ್ರಧಾನೇ ಚ**
**ದೋಷಾನ್ಯಸ್ಮಿನ್ ವಿಶೇಷಣೇ ॥.** – *ಹೇಮಚಂದ್ರಃ*

ಬಿಲ್ಲಿನ ಹೆದೆ, ಹಗ್ಗ, ದಾರ, ಸತ್ತ್ವರಜಸ್ತಮೋಗುಣಗಳು, ಸಂಧ್ಯಾದಿ, ಶೌರ್ಯಾದಿ, ಇಂದ್ರಿಯ, ರೂಪಾದಿಗಳು, ಅಪ್ರಧಾನ, ದೋಷಾನ್ಯ ಧರ್ಮಗಳು ಈ ಅರ್ಥಗಳನ್ನು ಗುಣಶಬ್ದವು ತಿಳಿಸುವುದೆಂದು ಹೇಮಚಂದ್ರನು ತನ್ನ ಕೋಶದಲ್ಲಿ ತಿಳಿಸುತ್ತಾನೆ.

iv) ಅಮರಕೋಶಕಾರನು –

**ಮೌರ್ವ್ಯಾಂ ದ್ರವ್ಯಾಶ್ರಿತೇ ಸತ್ವಶುಕ್ಲಸಂಧ್ಯಾದಿಕೇ ಗುಣಃ ॥** ೩-೨೦೨
**ಮೌರ್ವೀ ಜ್ಯಾ ಶಿಂಜಿನೀಗುಣಃ ।** ೨-೫೫೦
**ಸೂದಾ ಔದನಿಕಾ ಗುಣಾಃ ।** ೨-೬೧೪ ಎಂದು ಮುಂತಾಗಿ ಗುಣ ಶಬ್ದದ ಅರ್ಥಗಳನ್ನು ತಿಳಿಸುತ್ತಾನೆ.

v) ಶಬ್ದಾದ್ಯಾ ಇಂದ್ರಿಯಾದ್ಯಾಶ್ಚ ಸತ್ವಾದ್ಯಾಶ್ಚ ಶುಭಾನಿ ವಾ । ಅಪ್ರಧಾನಾನಿ ಚ ಗುಣಾ ನಿರುಚ್ಯಂತೇ ನಿರುಕ್ತಿಗೈಃ ॥ ಗುಣಶಬ್ದದಿಂದ ಶಬ್ದಾದಿ, ಇಂದ್ರಿಯಾದಿ, ಸತ್ವಾದಿ, ಶುಭ ಮತ್ತು ಅಪ್ರಧಾನ ಎಂದು ಅರ್ಥವಾಗುತ್ತದೆ.

ಈ ರೀತಿ ಶಾಸ್ತ್ರಕಾರರು ಬಳಸಿದ ಹಾಗೂ ಕೋಶಕಾರರು ತಿಳಿಸಿದ ಗುಣಶಬ್ದದ ವಿವಿಧ ಅರ್ಥಗಳನ್ನು ಅವಲೋಕಿಸಿದಾಗ ಇವು ಒಬ್ಬ ವ್ಯಕ್ತಿಯ ಆತ್ಮ(ಸ್ವರೂಪ), ಬುದ್ಧಿ, ಮನಸ್ಸು, ಇಂದ್ರಿಯಗಳು ಮತ್ತು ದೇಹ ಇವುಗಳಿಗೆ ಸಂಬಂಧಿಸಿದ ಧರ್ಮಗಳಾಗಿರಬೇಕೆಂದು ತಿಳಿಯುವದು. ಈ ಧರ್ಮಗಳನ್ನೇ ಗುಣಗಳೆಂದು ತಿಳಿಯಬಹುದು. ಕಾವ್ಯಗಳಲ್ಲಿ ಕಾವ್ಯನಾಯಕನ ಗುಣಗಳನ್ನು ವರ್ಣಿಸುವಾಗ ಆ ನಾಯಕನ ಆತ್ಮಾದಿಗಳಿಗೆ ಸಂಬಂಧಿಸಿದ ಉತ್ಕರ್ಷ ಸೂಚಕವಾದ ಧರ್ಮಗಳನ್ನೇ ಕಾಣುತ್ತೇವೆ.

ಒಬ್ಬ ಶ್ರೇಷ್ಠ ವ್ಯಕ್ತಿಯಲ್ಲಿ ಪ್ರಮುಖವಾಗಿ ೮ ಗುಣಗಳು ಇರಬೇಕೆಂದೂ ಅವು ದಯಾ, ಕ್ಷಮಾ, ಅನಸೂಯಾ, ಶೌಚ, ಅನಾಯಾಸ, ಮಂಗಲ, ಅಕಾರ್ಪಣ್ಯ ಮತ್ತು ಅಸ್ಪೃಹಾ ಎಂಬ ಎಂಟು ಗುಣಗಳೆಂದೂ ಗೌತಮ ಮುನಿಗಳು ತಿಳಿಸುತ್ತಾರೆ. ಅಥಾಷ್ಟಾವಾತ್ಮಗುಣಾಃ (ಸೂತ್ರ ೨೩)

ದಯಾ ಸರ್ವಭೂತೇಷು ಕ್ಷಾಂತಿರನಸೂಯಾ ಶೌಚಮನಾಯಾಸೋ ಮಂಗಲಮಕಾರ್ಪಣ್ಯಮಸ್ಪೃಹಾ ॥ (ಸೂತ್ರ ೨೪).

ಈ ರೀತಿ ಗುಣಗಳೆಂದು ಪ್ರಸಿದ್ಧವಾಗಿರುವ ಯಾವ ಯಾವ ಗುಣಗಳು ಗುರುಗುಣಸ್ತವನದ ಶ್ಲೋಕಗಳಲ್ಲಿ ವರ್ಣಿತರಾದ ಗುರುಗಳಲ್ಲಿ ಕಂಡುಬರುತ್ತವೆ ಎಂಬುದನ್ನು 'ಗುಣಪ್ರಕಾಶ' ಎಂಬ ಶೀರ್ಷಿಕೆಯ ಅಡಿಯಲ್ಲಿ ತೋರಿಸಲು ಪ್ರಯತ್ನಿಸಲಾಗಿದೆ.

## ಗುಣತಾರತಮ್ಯ, ಗುಣತಾರತಮ್ಯಜ್ಞಾನದ ಅವಶ್ಯಕತೆ ಮತ್ತು ಗುರೂಪದೇಶ :

ಕ್ಷಿತಿಪಾ ಮನುಷ್ಯಗಂಧರ್ವಾ ದೇವಾಶ್ಚ ಪಿತರಶ್ಚಿರಾಃ ।
ಆಜಾನಜಾಃ ಕರ್ಮಜಾಶ್ಚ ದೇವಾ ಇಂದ್ರಃ ಪುರಂದರಃ ॥ ೭೨ ॥
ರುದ್ರಃ ಸರಸ್ವತೀ ವಾಯುರ್ಮುಕ್ತಾಃ ಶತಗುಣೋತ್ತರಾಃ ।
ಏಕೋ ಬ್ರಹ್ಮಾ ಚ ವಾಯುಶ್ಚ ವೀಂದ್ರೋ ರುದ್ರಸಮಸ್ತಥಾ ॥ ೭೩ ॥
ಏಕೋ ರುದ್ರಸ್ತಥಾ ಶೇಷೋ ನ ಕಶ್ಚಿದ್ವಾಯುನಾ ಸಮಃ ।
ಮುಕ್ತೇಷು ಶ್ರೀಸ್ತಥಾ ವಾಯೋಃ ಸಹಸ್ರಗುಣಿತಾ ಗುಣೈಃ ॥ ೭೪ ॥
ತತೋಽನಂತಗುಣೋ ವಿಷ್ಣುರ್ನ ಕಶ್ಚಿತ್ತತ್ಸಮಃ ಸದಾ ।
ಇತ್ಯಾದಿ ವೇದವಾಕ್ಯಂ ವಿಷ್ಣೋರುತ್ಕರ್ಷಮೇವ ವಕ್ತ್ಯುಚ್ಚೈಃ ॥ ೭೫ ॥

— ಮ.ತಾ.ನಿ. ೮. ೧.

ನಾರಾಯಣನಿಂದ ಹಿಡಿದು ತೃಣಜೀವಿ ಪರ್ಯಂತ ಎಲ್ಲರೂ ತರತಮಭಾವದಿಂದ ಕೂಡಿದವರಾಗಿರುತ್ತಾರೆ. ಈ ತಾರತಮ್ಯವು ಅವರಲ್ಲಿರುವ ಗುಣತಾರತಮ್ಯದಿಂದ ಉಂಟಾಗಿರುತ್ತದೆ.

ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ಹರೇಸ್ತಥಾ ।
ಏತದ್ವಿನಾ ನ ಕಸ್ಯಾಪಿ ವಿಮುಕ್ತಿಃ ಸ್ಯಾತ್ಕಥಂಚನ ॥ – ಮ. ತಾ. ನಿ. ೧-೮೧.

ಈ ಗುಣತಾರತಮ್ಯವನ್ನು ಎಲ್ಲರೂ ಅವಶ್ಯವಾಗಿ ತಿಳಿಯಬೇಕು. ತಾರತಮ್ಯ ಜ್ಞಾನವಿಲ್ಲದೇ ಮೋಕ್ಷವಿಲ್ಲವೆಂದು ಶ್ರೀಮದಾಚಾರ್ಯರು ತಿಳಿಸುತ್ತಾರೆ.

ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ ।
ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿರ್ನ ಚಾನ್ಯಥಾ ॥ ಎಂಬ ಪ್ರಮಾಣಾನುಸಾರ ನಾವು ಶ್ರೀಹರಿಯಲ್ಲಿ ಇತರೆಲ್ಲ ದೇವತೆಗಳಲ್ಲಿ ಮಾಡುವ ಭಕ್ತಿಗಿಂತ ಅಧಿಕವಾದ ಭಕ್ತಿಯನ್ನು ಮಾಡಿದಾಗ ಪ್ರಸನ್ನನಾದ ಶ್ರೀಹರಿಯು ಮೋಕ್ಷವನ್ನು ಕೊಡುವನು. ಆ ಭಕ್ತಿಯು ಶ್ರೀಹರಿಯ ಮಾಹಾತ್ಮ್ಯಜ್ಞಾನ ಪೂರ್ವಕವಾಗಿ ಇರಬೇಕಾಗಿರುವುದರಿಂದ ಶ್ರೀಹರಿಯ ನಿರವಧಿಕವಾದ ಗುಣಗಳನ್ನು ಯಥಾಯೋಗ್ಯವಾಗಿ ತಿಳಿದುಕೊಂಡು ಉಪಾಸನೆ ಮಾಡಬೇಕಾಗುತ್ತದೆ. ಶ್ರೀಹರಿಯ ಮಾಹಾತ್ಮ್ಯವನ್ನು ಅಂದರೆ ಅವನಲ್ಲಿರುವ ನಿರವಧಿಕವಾದ ಗುಣಗಳನ್ನು ಮತ್ತು ಉಪಾಸನಾಕ್ರಮವನ್ನು ತಿಳಿಸಿಕೊಡುವವರೇ ಗುರುಗಳು. 'ಗುಣಸ್ವರೂಪಿಯಾದ ಪರಮಾತ್ಮನ ಗುಣಗಳ ಅಪರೋಕ್ಷ ಜ್ಞಾನವಿಲ್ಲದೇ ಮುಕ್ತಿಯು ದೊರೆಯುವದಿಲ್ಲ ಮತ್ತು ಗುರುಗಳ ಉಪದೇಶವಿಲ್ಲದೇ ಈ ಅಪರೋಕ್ಷ ಜ್ಞಾನವಾಗುವದಿಲ್ಲ. ಆದ್ದರಿಂದ ತನಗೆ ಶ್ರೇಯಸ್ಸನ್ನು ಬಯಸುವವನು ಗುರುಗಳಿಗೆ ಶರಣು ಹೋಗಿ ಅವರಿಂದ ಉಪದೇಶ ಪಡೆಯಬೇಕು ಎಂಬುದು 'ಜ್ಞಾನಾದೃತೇ ನೈವ ಮುಕ್ತಿರ್ಜ್ಞಾನಂ ನೈವ ಗುರೋರ್ವಿನಾ । ತಸ್ಮಾದ್ಗುರುಂ ಪ್ರಪದ್ಯೇತ ಜಿಜ್ಞಾಸುಃ ಶ್ರೇಯ ಉತ್ತಮಮ್॥' ಎಂಬ ಪ್ರಮಾಣದಿಂದ ತಿಳಿಯುವದು.

ಗುರು ಉಪದೇಶವಿಲ್ಲದ ಜ್ಞಾನವು । ಗುರು ಉಪದೇಶವಿಲ್ಲದ ಸ್ನಾನವು । ಗುರು ಉಪದೇಶವಿಲ್ಲದ ಧ್ಯಾನವು । ಗುರು ಉಪದೇಶವಿಲ್ಲದ ಜಪವು । ಗುರು ಉಪದೇಶವಿಲ್ಲದ ತಪವು । ಗುರು ಉಪದೇಶವಿಲ್ಲದ ಮಂತ್ರ । ಗುರು ಉಪದೇಶವಿಲ್ಲದ ತಂತ್ರ । ಉರಗನ ಉಪವಾಸದಂತೆ ಕಾಣಿರೋ । ಗುರುವ್ಯಾಸರಾಯರ ಕರುಣದಿಂದಲಿ ಎನಗೆ । ಪುರಂದರವಿಠಲನೇ ಪರನೆಂದರುಹಿ ದುರಿತಭಯವನೆಲ್ಲ ಪರಿಹರಿಸಿದರಾಗಿ । ಪರ ಮಹಾಮಂತ್ರ ಉಪದೇಶಿಸಿದರಾಗಿ ॥೧॥ ವ್ಯಾಸರಾಯರ ಚರಣಕಮಲ ದರ್ಶನವೆನ -। ಗೇಸು ಜನ್ಮದ ಸುಕೃತಫಲದಿ ದೊರಕಿತೋ ॥ – ಎಂದು ಮೋಕ್ಷಪ್ರಾಪ್ತಿಗೆ ಅಂಗಸಾಧನೆ-

ಗಳೆಂದು ತಿಳಿಯಲ್ಪಟ್ಟ ಸ್ನಾನ, ಜಪ, ತಪ, ಮಂತ್ರ, ತಂತ್ರ ಎಲ್ಲವೂ ಗುರೂಪದೇಶ ಇಲ್ಲದಿದ್ದರೆ ನಿಷ್ಫಲವಾಗುವವೆಂದು ಶ್ರೀಪುರಂದರದಾಸರು ತಿಳಿಸುತ್ತ "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ" ಎಂದು ಗುರುವಿನ ಮಹತಿಯನ್ನು ಸ್ತುತಿಸುತ್ತಾರೆ.

ನಮಗೆ ಶ್ರೇಯಸ್ಸುಂಟಾಗುವಲ್ಲಿ ಮಹತ್ವದ ಪಾತ್ರವನ್ನು ವಹಿಸುವ ಗುರುಗಳ ಲಕ್ಷಣ ಪ್ರಕಾರಗಳನ್ನು ಈ ಹಿಂದೆ ವಿವರಿಸಲಾಗಿದ್ದು ಆ ಗುರುಗಳ ಮಹತ್ವವನ್ನು ತಿಳಿಸುವ ಕೆಲವು ಶ್ಲೋಕಗಳನ್ನು ಸಂಗ್ರಹಿಸಿ ಪರಿಶಿಷ್ಟ(viii)ದಲ್ಲಿ ಕೊಡಲಾಗಿದೆ.

**ಗುರುಪ್ರಪತ್ತಿ** : ಮುಮುಕ್ಷುಗಳಾದವರು ಅಥವಾ ತನಗೆ ಶ್ರೇಯಸ್ಸನ್ನು ಬಯಸುವವರು ಇಂಥ ಮಹಿಮೋಪೇತರಾದ ಗುರುಗಳಿಂದ ಉಪದೇಶ ಪಡೆಯಲು ಅವರಿಗೆ ಶರಣು ಹೋಗಬೇಕು – **ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್ ನಾಸ್ತ್ಯಕೃತಃಕೃತೇನ । ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್ ॥** – *ಅಥರ್ವಣೋಪನಿಷತ್ ೧-೨-೧೨.*

— 'ಬ್ರಹ್ಮಜ್ಞಾನವನ್ನು ಬಯಸುವವನು ಯಜ್ಞಯಾಗಾದಿ ಕರ್ಮಗಳಿಂದ ಫಲಿಸುವ ಲೋಕಗಳು ಅನಿತ್ಯವಾಗಿರುವುದನ್ನು ತಿಳಿದುಕೊಂಡು, ಕಾಮ್ಯಕರ್ಮಗಳಲ್ಲಿ ಅಲಂಬುದ್ಧಿಯನ್ನು (ವೈರಾಗ್ಯ) ಹೊಂದಬೇಕು. ಸ್ಥಿರಫಲಪ್ರಾಪ್ತಿಗೆ ಕಾರಣವಾಗಿರುವ ವಿಶೇಷಜ್ಞಾನಾರ್ಥವಾಗಿ (ಜ್ಞಾನೇನೈವ ಪರಂ ಪದಂ) ಆ ಜ್ಞಾನೇಚ್ಛುವು ಸಮಿತ್ತುಗಳನ್ನು ಕೈಯಲ್ಲಿ ಹಿಡಿದುಕೊಂಡು ವೇದವೇದಾಂಗಗಳನ್ನು ಬಲ್ಲ, ಸದಾ ಪರಬ್ರಹ್ಮನಲ್ಲಿ ಆಸಕ್ತನಾದ ಶ್ರೋತ್ರಿಯ ಗುರುವನ್ನು ಶರಣು ಹೋಗಬೇಕು' ಎಂದು ಅಥರ್ವಣೋಪ-ನಿಷತ್ತಿನ ನಿರ್ದೇಶವಾಗಿದೆ. ಗುರುಗಳಿಗೆ ಶರಣು ಹೋದನಂತರ ಅವರು ಪ್ರಸನ್ನರಾಗಿ ಜ್ಞಾನೋಪದೇಶ ಮಾಡಬೇಕಾದರೆ ಅವರಲ್ಲಿ ಭಕ್ತಿಯನ್ನು ಮಾಡಬೇಕು. ಅಂದರೆ **ಗುರುಗಳ ಮಾಹಾತ್ಮ್ಯಸೂಚಕವಾದ ಗುಣಗಳನ್ನು ಸ್ತುತಿಸಬೇಕು.** ಗುರುಭಕ್ತಿಯಿಂದ ಪ್ರಸನ್ನರಾದ ಗುರುಗಳು ಶಾಸ್ತ್ರಾರ್ಥಗಳನ್ನು ತಿಳಿಸುವ ಮೂಲಕ ಪರಮಾತ್ಮನ ಗುಣ(ಮಹಿಮೆ)ಗಳನ್ನು ತಿಳಿಸುವರು ಮತ್ತು ಗುಣೋಪಾಸನಾ ಕ್ರಮವನ್ನೂ ಉಪದೇಶಿಸುವರು. ಪ್ರಸನ್ನರಾದ ಗುರುಗಳ ಉಪದೇಶದಿಂದ ಸಾಧಕನಿಗೆ ಹರಿಭಕ್ತಿ ಮಾಡಲು ಸಾಧ್ಯವಾಗುವದು. ಹರಿಭಕ್ತಿಯು ಗುರುಭಕ್ತಿ ಪೂರ್ವಕವಾಗಿದ್ದಾಗಲೇ ಅದು ಫಲಕಾರಿಯಾಗುವದು. 'ಗುರುಭಕ್ತಿ ಇಲ್ಲದೇ ಹರಿಭಕ್ತಿ ದೊರೆಯಲಾರದು, ಹರಿಭಕ್ತಿ ಇಲ್ಲದೇ ಪರಮಾತ್ಮನು ಒಲಿಯಲಾರನು' ಎಂದು ಶ್ರೀ ಪುರಂದರದಾಸರು, "**ಹೇಗೆ ಶ್ರೀಹರಿ ದಯಮಾಡುವನೋ ನಮಗೆ । ಹೇಗೆ ಶ್ರೀಹರಿ ದಯಮಾಡುವನೋ ॥ಪ॥ ಶಕ್ತಿಮೀರಿ ಗುರುಭಕ್ತಿಪೂರ್ವಕ ಹರಿಭಕ್ತಿ ಇಲ್ಲದ ಕುಯುಕ್ತಿವಂತರಿಗೆ ॥೨॥**" ಎಂಬ ಕೀರ್ತನೆಯಲ್ಲಿ ಸ್ಪಷ್ಟಪಡಿಸಿದ್ದಾರೆ. ಇದನ್ನೇ ಶ್ರೀನಾರಾಯಣ ಪಂಡಿತಾಚಾರ್ಯರು

'ಮುಕುಂದಭಕ್ತ್ಯೈ ಗುರುಭಕ್ತಿಜಾಯ್ಯೈ ....' ಎಂದು ಹೇಳಿದರು. ಈ ಎಲ್ಲ ವಿಷಯಗಳನ್ನು ಒಂದು ಸರಮಾಲೆಯಲ್ಲಿ ಜೋಡಿಸಿ ಹೇಳುವುದಾದರೆ –

**"ಮೋಕ್ಷ ← ವಿಷ್ಣುಪ್ರಸಾದ ← ಹರಿಭಕ್ತಿ ← ಹರಿಯ ಮಾಹಾತ್ಮ್ಯಜ್ಞಾನ ← ಗುರೂಪದೇಶ ← ಗುರುಪ್ರಸಾದ ← ಗುರುಭಕ್ತಿ ← ಗುರುಮಾಹಾತ್ಮ್ಯಜ್ಞಾನ ಪೂರ್ವಕ ಗುರುಭಕ್ತಿಗೆ ಸಾಧಕವಾಗುವ ಗುರುಗುಣಸ್ತವನ"** ಎಂದು ತಿಳಿಯಬಹುದು.

**ಸ್ತವನ :** ಸ್ತವನ ವೆಂದರೆ ಸ್ತುತಿ, ಪ್ರಶಂಸೆ ಎಂದರ್ಥ. ನಮಗೆ ಇಷ್ಟವಾದ ಪದಾರ್ಥವನ್ನಾಗಲೀ (ಸಂತಾನ, ಸಂಪತ್ತು, ಜ್ಞಾನಭಕ್ತಿ, ವೈರಾಗ್ಯ ಇತ್ಯಾದಿ) ಅಥವಾ ಪದವನ್ನಾಗಲೀ (ಸ್ವರ್ಗ, ಮೋಕ್ಷ ಇತ್ಯಾದಿ) ಕೊಡಲು ಸಮರ್ಥನಾದ ಪುರುಷನು ಇಷ್ಟಾರ್ಥವನ್ನು ಕೊಡುವಂತಾಗಬೇಕಾದರೆ ಅವನು ಪ್ರಸನ್ನನಾಗಬೇಕು. ಇದಕ್ಕಾಗಿ ಅವನಲ್ಲಿರುವ ಗುಣಗಳನ್ನು ಪ್ರಶಂಸಿಸಬೇಕಾಗುತ್ತದೆ. ಯಾವ ಗುಣಗಳನ್ನು ಸ್ತುತಿಸಿದರೆ ಗುರುಗಳು ಬೇಗ ಪ್ರಸನ್ನರಾಗುವರೆಂಬುದನ್ನು ತಿಳಿದು ಅವೇ ಗುಣಗಳನ್ನು ಮುಖ್ಯವಾಗಿ ಹಾಗೂ ಅಧಿಕವಾಗಿ ಸ್ತುತಿಸಬೇಕು. ಗುರುಗಳು ಪ್ರಸನ್ನರಾಗಬೇಕಾದರೆ ಆ ಗುರುಗಳು ಶ್ರೀಹರಿ, ವಾಯು ಹಾಗೂ ತಮ್ಮ ಜ್ಯೇಷ್ಠಗುರುಗಳು ಪ್ರಸನ್ನರಾಗಲು ಯಾವ ಕಾರ್ಯಗಳನ್ನು ಮಾಡಿದರೋ ಅವುಗಳ ವರ್ಣನೆಯನ್ನೂ ಮಾಡಬೇಕು. ಹೀಗೆ ಮಾಡುವುದರಿಂದಲೇ ಆ ಗುರುಗಳ ಪ್ರಸಾದವು ಶೀಘ್ರವಾಗುವದು. '**ತಥಾಽವತೀರ್ಯ ಸಕಲಸಚ್ಛಾಸ್ತ್ರಕರ್ತೄಣಾಂ ಸರ್ವದುರ್ಮತಭಂಜಕಾನಾಂ ಅನಾದಿತಃ ಸತ್ಸಂಪ್ರದಾಯ-ಪರಂಪರಾಪ್ರಾಪ್ತ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪಕಾನಾಂ ಅತ ಏವ ಭಗವತ್ಪರಮಾನು-ಗ್ರಹಪಾತ್ರಭೂತಾನಾಂ**' ಎಂದು ಪ್ರಾತಃಸಂಕಲ್ಪ ಗದ್ಯದಲ್ಲಿ ಶ್ರೀರಾಘವೇಂದ್ರತೀರ್ಥರು ತಿಳಿಸಿದಂತೆ ಸಚ್ಛಾಸ್ತ್ರಗ್ರಂಥಗಳ ರಚನೆ, ದುರ್ಮತ ಭಂಜನ, ಸಿದ್ಧಾಂತಪ್ರತಿಷ್ಠಾಪನೆ ಇವು ಭಗವತ್ಪರಮಾನುಗ್ರಹಕ್ಕೆ ಮುಖ್ಯ ಸಾಧನಗಳಾಗಿರುತ್ತವೆ. ಗುರುಗಳು ತಾವು ಜೀವಿಸಿರು-ವಾಗ ದುರ್ಮತಖಂಡನ ಪೂರ್ವಕ ಸಿದ್ಧಾಂತ ಪ್ರತಿಷ್ಠಾಪನೆಯನ್ನು ಮಾಡುತ್ತಾರೆ. ಅವರ ಅವತಾರ ಸಮಾಪ್ತಿಯ ನಂತರವೂ ಈ ಕಾರ್ಯವು ಮುಂದುವರಿಯಬೇಕಾದರೆ ಅವರು ಗ್ರಂಥಗಳನ್ನು ರಚಿಸಿರಬೇಕಾಗುವದು. ಸಚ್ಛಾಸ್ತ್ರ ಗ್ರಂಥಗಳ ರಚನೆಯು ಅಷ್ಟು ಮಹತ್ವದ್ದಾಗಿರುವುದರಿಂದಲೇ ಶ್ರೀಮದಾಚಾರ್ಯರು ಈ ಭೂಮಿಯಲ್ಲಿ ಅವತರಿಸಿದ ನಂತರ ಅನೇಕ ಗ್ರಂಥಗಳನ್ನು ರಚಿಸಿದರು. ಇದಕ್ಕಾಗಿಯೇ ಶ್ರೀರಾಘವೇಂದ್ರರು ಶ್ರೀಮದಾಚಾರ್ಯರನ್ನು ವರ್ಣಿಸುವಾಗ "**ತಥಾ ಅವತೀರ್ಯ ಸಕಲಸಚ್ಛಾಸ್ತ್ರ ಕರ್ತೄಣಾಂ**" ಎಂದು ಶ್ರೀಮದಾಚಾರ್ಯರ ಗ್ರಂಥಕರ್ತೃತ್ವವನ್ನು ಮೊದಲು ಹೇಳಿದರು. ಗ್ರಂಥರಚನೆಯಿಂದ ಸನ್ನಿಹಿತ ಶಿಷ್ಯರಿಗೂ ಹಾಗೂ ಮುಖ್ಯವಾಗಿ ಅಸನ್ನಿಹಿತ ಶಿಷ್ಯರಿಗೂ ಪೂರ್ವಾಚಾರ್ಯರ ಗ್ರಂಥಗಳನ್ನು ಅಧ್ಯಯನ ಮಾಡಲು ಮತ್ತು ಪರಮತಖಂಡನ ಪೂರ್ವಕ ಸಿದ್ಧಾಂತ ಪ್ರತಿಷ್ಠಾಪನಾ ಕಾರ್ಯವನ್ನು ಮುಂದುವರೆಸಲು ಸಹಾಯಕ-

ವಾಗುವದು. ಗುರುಗಳ ಇಂಥ ಮಹತ್ತರವಾದ ಗ್ರಂಥಕರಣರೂಪಕಾರ್ಯವನ್ನು ವರ್ಣಿಸುವುದರಿಂದ ಗುರುಗಳು ಶೀಘ್ರ ಪ್ರಸನ್ನರಾಗುವರೆಂಬುದು ಒಂದು ವಿಷಯ.

ದೀನಜನರ ರಕ್ಷಣೆ ಮಾಡುವುದರಿಂದ ಪರಮಾತ್ಮನು ಪ್ರಸನ್ನನಾಗುತ್ತಾನೆಂಬ ತತ್ತ್ವವನ್ನು ತಿಳಿದ ಮಹಾತ್ಮರು ಸದಾ ತಮ್ಮ ಆಶ್ರಿತಜನರ ದುರಿತಗಳನ್ನು ಕಳೆದು ಅವರನ್ನು ರಕ್ಷಿಸುತ್ತಿರುತ್ತಾರೆ. ಶ್ರೀಮದ್ಭಾಗವತದಲ್ಲಿ ಅಮೃತಮಥನ ಸಮಯದಲ್ಲಿ ಕಾಲಕೂಟವಿಷವು ಹೊರಬಂದಾಗ ವಾಯುದೇವನಿಂದ ಬಲಹೀನಗೊಳಿಸಲ್ಪಟ್ಟ ಆ ವಿಷದ ಅಲ್ಪಾಂಶವನ್ನು ಭುಂಜಿಸುವ ಮೊದಲು ಶಿವನು ಪಾರ್ವತಿಗೆ ಹೇಳಿದ ಮಾತುಗಳಿಂದ ದೀನಾನುಕಂಪದ ಮಹತ್ವವು ತಿಳಿಯುವದು.

**ಅಹೋ ಬತ ಭವಾನ್ಯೇತತ್ ಪ್ರಜಾನಾಂ ಪಶ್ಯ ವೈಶಸಮ್ ।**
**ಕ್ಷೀರೋದಮಥನೋದ್ಭೂತಾತ್ ಕಾಲಕೂಟಾದುಪಸ್ಥಿತಾತ್ ॥೩೭॥**
**ಆಸಾಂ ಪ್ರಾಣಪರೀಪ್ಸೂನಾಂ ವಿಧೇಯಮಭಯಂ ಹಿ ಮೇ ।**
**ಏತಾವಾನ್ ಹಿ ಪ್ರಭೋರರ್ಥೋ ಯದ್ದೀನಪರಿಪಾಲನಮ್ ॥೩೮॥**
**ಪ್ರಾಣೈಃ ಸ್ವೈಃ ಪ್ರಾಣಿನಃ ಪಾಂತಿ ಸಾಧವಃ ಕ್ಷಣಭಂಗುರೈಃ ।**
**ಬದ್ಧವೈರೇಷು ಭೂತೇಷು ಮೋಹಿತೇಷ್ವಾತ್ಮಮಾಯಯಾ ॥೩೯॥**
**ಪುಂಸಃ ಕೃಪಯತೋ ಭದ್ರೇ ಸರ್ವಾತ್ಮಾ ಪ್ರೀಯತೆ ಹರಿಃ ।**
**ಪ್ರೀತೇ ಹರೌ ಭಗವತಿ ಪ್ರೀಯೇಽಹಂ ಸಚರಾಚರಃ ॥೪೦॥**

"ಹೇ ಭವಾನಿ ! ಸಮುದ್ರಮಂಥನದಿಂದ ಉತ್ಪನ್ನವಾದ ಈ ಕಾಲಕೂಟವಿಷದಿಂದ ಪ್ರಜೆಗಳೆಲ್ಲ ಪೀಡಿತರಾಗಿರುವದನ್ನು ನೋಡು. 'ಪ್ರಭೋ ನಮ್ಮನ್ನು ರಕ್ಷಿಸು' ಎಂದು ಈ ಪ್ರಜೆಗಳು ನನಗೆ ಶರಣು ಬಂದು ಪ್ರಾಣಭಿಕ್ಷೆ ಬೇಡುತ್ತಿದ್ದಾರೆ. ಇವರನ್ನೆಲ್ಲ ನಾನು ರಕ್ಷಿಸಲೇ ಬೇಕು. ದೀನಜನಪಾಲನೆಯು ಪ್ರಭುವಿನ ಕರ್ತವ್ಯವಾಗಿದೆ. ಸಜ್ಜನರು ಕ್ಷಣಭಂಗುರವಾದ ತಮ್ಮ ಪ್ರಾಣಗಳನ್ನು ಲೆಕ್ಕಿಸದೇ ಇನ್ನೊಬ್ಬರನ್ನು ರಕ್ಷಿಸುತ್ತಾರೆ. ದೀನಜನರ ಪರಿಪಾಲನೆಯಿಂದ ಸರ್ವಾತ್ಮನಾದ ಶ್ರೀಹರಿಯು ಪ್ರಸನ್ನನಾಗುವನು." ಈ ಒಂದು ಕಥಾನಕವನ್ನು ಪರೀಕ್ಷಿತ್ ರಾಜನಿಗೆ ಹೇಳಿ ಶ್ರೀಶುಕಾಚಾರ್ಯರು "ದೀನಾನುಕಂಪವು ಪರಮಾತ್ಮನ ಪರಮಾರಾಧನೆ" – **ತಪ್ಯಂತೇ ಲೋಕತಾಪೇನ ಪ್ರಾಯಶಃ ಸಾಧವೋ ಜನಾಃ । ಪರಮಾರಾಧನಂ ತದ್ಧಿ ಪುರುಷಸ್ಯಾಖಿಲಾತ್ಮನಃ ॥೪೪॥** (*–ಭಾಗ ಸ್ಕಂಧ ೮. ಅ.೭*) ಎಂದು ತಿಳಿಸುತ್ತಾರೆ. ದೀನಜನರ ಪರಿಪಾಲನೆಯು 'ದಯಾ' ಅಥವಾ 'ಕೃಪಾ' ಗುಣದ ಕಾರ್ಯವಾಗಿದೆ. ದೀನಜನರ ಮೇಲಿನ ದಯಾ ಅಥವಾ ಕೃಪಾದಿಂದಲೇ ಗುರುಗಳು ಅನೇಕ ಸಚ್ಛಾಸ್ತ್ರಗ್ರಂಥಗಳನ್ನು ರಚಿಸಿರುವುದರಿಂದ ಆ ಗ್ರಂಥವರ್ಣನೆಯಿಂದ ಅವರಲ್ಲಿರುವ ದಯಾ ಅಥವಾ ಕೃಪಾಗುಣದ ವರ್ಣನೆಯಾದಂತಾಗಿ ಅದರಿಂದಲೂ ಗುರುಗಳು ಪ್ರಸನ್ನರಾಗುವರು. ಈ ರೀತಿ ಗ್ರಂಥವರ್ಣನೆಯಿಂದ

ಗುರುಗಳ ಕಾರ್ಯಸ್ತುತಿ ಹಾಗೂ ದಯಾಗುಣದ ಸ್ತುತಿ ಮಾಡಿದಂತಾಗುವದು ಮತ್ತು ಇಂಥ ಗ್ರಂಥವರ್ಣನೆಯು ಗುರುಪ್ರಸಾದಕ್ಕೆ ಮುಖ್ಯ ಸಾಧನವಾಗುತ್ತದೆ ಎಂಬುದು ಮತ್ತೊಂದು ವಿಷಯ.

## ಗುರುಗುಣಸ್ತವನದಿಂದ ಗುರುಗಳಿಗೆ ಯಾವ ಅಹಂಕಾರವಿಲ್ಲ :

**ಅಪರೋಕ್ಷೇ ಗುರುಃ ಸ್ತುತ್ಯಃ ಪರೋಕ್ಷೇ ಮಿತ್ರಬಾಂಧವಾಃ ।**

**ಕಾರ್ಯಾಂತೇ ದಾಸಭೃತ್ಯಾಶ್ಚ ಪುತ್ರಾನ್ ನೈವ ಚ ನೈವ ಚ ॥** – ಎಂಬ ಸೂಕ್ತಿಯಂತೆ "ಗುರುಗಳನ್ನು ಅವರೆದುರಿನಲ್ಲೇ ಸ್ತುತಿಸಬೇಕು. ಮಿತ್ರರನ್ನು ಹಾಗೂ ಬಾಂಧವರನ್ನು ಅವರ ಪರೋಕ್ಷದಲ್ಲಷ್ಟೇ ಸ್ತುತಿಸಬೇಕು. ಕೆಲಸ ಮಾಡಿಯಾದ ಮೇಲೆ ದಾಸರನ್ನಾಗಲೀ, ಸೇವಕರನ್ನಾಗಲೀ ಸ್ತುತಿಸಬೇಕು. ಮಕ್ಕಳನ್ನಂತೂ ಎಂದಿಗೂ ಎಲ್ಲಿಯೂ ಸ್ತುತಿಸಬಾರದು." ಈ ಸೂಕ್ತಿಯಲ್ಲಿ ಮಿತ್ರಬಾಂಧವರನ್ನೆಲ್ಲ ಪ್ರತ್ಯಕ್ಷದಲ್ಲಿ ಸ್ತುತಿಸಬಾರದೆಂದು ಹೇಳಿ ಗುರುಗಳನ್ನು ಮಾತ್ರ ಪ್ರತ್ಯಕ್ಷವಾಗಿಯೂ ಸ್ತುತಿಸಲು ಹೇಳಲಾಗಿದೆ. ಇದಕ್ಕೇನು ಕಾರಣ ? ಗುರುಗಳೆನಿಸುವವರು ಜ್ಞಾನಿಗಳಾಗಿರುತ್ತಾರೆ. '**ನಾಹಂ ಕರ್ತಾ ಹರಿಃ ಕರ್ತಾ**' 'ಕರ್ಮ ಮಾಡುವವ ನಾನಲ್ಲ. ಶ್ರೀಹರಿಯೇ ಸರ್ವಕರ್ಮ ಕರ್ತಾ ಸರ್ವಕರ್ಮಕಾರಯಿತಾ' ಎಂಬ ನಿಶ್ಚಿತಜ್ಞಾನವುಳ್ಳವರಾಗಿರುತ್ತಾರೆ. ತಾವು ನಿಮಿತ್ತ ಮಾತ್ರ. ತಮ್ಮಿಂದೇನಾದರೂ ಸಾಧನೆಯಾಗಿದ್ದರೆ ಅದಕ್ಕೆ ಶ್ರೀಹರಿ ಹಾಗೂ ಅವನ ಪರಿವಾರದವರಾದ ತತ್ತ್ವಾಭಿಮಾನಿ ದೇವತೆಗಳೇ ಕಾರಣ ಎಂದು ನಂಬಿರುತ್ತಾರೆ. ಶ್ರೀಜಗನ್ನಾಥದಾಸರ ವಾಣಿಯಲ್ಲಿ ಹೇಳುವುದಾದರೆ "**ಒಳಹೊರಗೆ ನೀನಿದ್ದು ತಿಳಿಸಿಕೊಳದಲೆ ಜನಕೆ ಹಲವು ಕರ್ಮಗಳ ನೀ ಮಾಡಿ । ನೀ ಮಾಡಿ ಮಾಡಿಸಿ ಫಲಕೆ ಜೀವರನು ಗುರಿಮಾಳ್ಪೆ ॥**" ಎಂಬ ಅನುಸಂಧಾನವುಳ್ಳವರಾಗಿರುತ್ತಾರೆ. ಈ ಅನುಸಂಧಾನ-ದಿಂದ ಸ್ಥಿತಪ್ರಜ್ಞರಾಗಿರುವ ಗುರುಗಳು ಯಾರು ಎಷ್ಟೇ ಸ್ತುತಿಸಿದರೂ ಅಹಂಕಾರ ಭಾವವನ್ನು ಹೊಂದದೇ ಭಕ್ತರ ಸ್ತವನವನ್ನೆಲ್ಲ ಗುರ್ವಂತರ್ಗತ ಪರಮಾತ್ಮನಿಗೇ ಅರ್ಪಿಸುವರು. ಈ ಕಾರಣದಿಂದ **ಜ್ಞಾನಿಗಳಾಗಿದ್ದು ಗುರುಗಳೆನಿಸಿರುವವ**ರನ್ನು ಅವರೆದುರಿನಲ್ಲೇ ಸ್ತುತಿಸಬೇಕು ಎಂದು ಈ ಸೂಕ್ತಿಯಲ್ಲಿ ಹೇಳಿದೆ. ಇಂಥ ಗುರುಗಳು ಯತಿಗಳೇ ಆಗಿರಲಿ ಅಥವಾ ಇತರ ಆಶ್ರಮದವರೇ ಆಗಿರಲಿ ಅವರು ಜೀವಂತವಾಗಿದ್ದಾಗ ಅವರೆದುರಿನಲ್ಲೇ ಸ್ತೋತ್ರ ಮಾಡಬೇಕು. ಬೃಂದಾವನ ಪ್ರವೇಶ ಮಾಡಿ ನಾರಾಯಣ ಧ್ಯಾನಾಸಕ್ತರಾದಾಗ ಬೃಂದಾವನದ ಎದುರಿನಲ್ಲಿಯಾಗಲೀ ಅಥವಾ ಅನ್ಯತ್ರ ಎಲ್ಲಿದ್ದರೂ ಅವರನ್ನು ಸ್ಮರಿಸುತ್ತ ಸ್ತುತಿಸಬೇಕು. ಭಕ್ತರು ಸ್ತೋತ್ರ ಮಾಡುವಾಗ ಸ್ತುತ್ಯರಾದ ಗುರುಗಳು ಯಾವ ಅನುಸಂಧಾನ ಯುಕ್ತರಾಗಿರುವರೆಂಬುದನ್ನು ನೋಡಿದೆವು. ಸ್ತೋತಾ ಯಾವ ರೀತಿ ಸ್ತುತಿಸಬೇಕು ಎಂಬುದನ್ನು ಈಗ ನೋಡುವಾ.

ಗುರುಗಳು ಪ್ರಸನ್ನರಾಗಲಿ ಮತ್ತು ಪ್ರಸನ್ನರಾದ ಗುರುಗಳು ಜ್ಞಾನೋಪದೇಶ ಮಾಡಲಿ ಹಾಗೂ ಇಷ್ಟಾರ್ಥಗಳನ್ನು ಪೂರೈಸಲಿ ಎಂಬ ಉದ್ದೇಶದಿಂದ ಭಕ್ತನು ಗುರುಗಳ ಸ್ತೋತ್ರ ಮಾಡಿದರೆ, ಗುರುಗಳು ನಿರ್ವಿಕಾರರಾಗಿ ನಿಷ್ಕ್ರಿಯರಾಗಿ ಕುಳಿತುಕೊಂಡರೇನು ಪ್ರಯೋಜನ ? ಅದಕ್ಕಾಗಿ ಗುರುಗಳು ಪ್ರಸನ್ನರಾಗಿ ಅನುಗ್ರಹೋನ್ಮುಖರಾಗುವಂತೆ ಸ್ತುತಿಸಬೇಕು ಅಂದರೆ ಗುರುಗಳ ಸಾಧನೆಗಳನ್ನು ಅಥವಾ ಗುಣಗಳನ್ನು ಅವರಿಗೆ ಮಾತ್ರ ಸೀಮಿತವಾಗಿರಿಸದೇ ಅವುಗಳಿಗೆ ಶ್ರೀಹರಿವಾಯುಗುರುಗಳ ಹಿನ್ನೆಲೆ ಇರುವದೆಂದು ತಿಳಿದು ಸ್ತುತಿಸಿದಾಗ ಈ ತರಹದ ಅನುಸಂಧಾನವೇ ಗುರುಗಳಿಗೆ ಸಮ್ಮತವಾಗಿರುವುದ-ರಿಂದ ಅವರು ಕೂಡಲೇ ಪ್ರಸನ್ನಚಿತ್ತರಾಗುವರು. ಅವರಿಗೆ ಮಾತ್ರ ಸೀಮಿತವಾಗಿರಿಸಿದರೆ ಅಂಥ ಪ್ರಶಂಸೆಯಿಂದ ಗುರುಗಳು ಪ್ರೀತರಾಗುವದಿಲ್ಲ. ಇಷ್ಟೇ ಅಲ್ಲದೇ **ಕ್ಲೇಶೋಽಧಿಕರಸ್ತೇಷಾಂ ಅವ್ಯಕ್ತಾಸಕ್ತಚೇತಸಾಂ** ಎಂಬಲ್ಲಿ ಹೇಳಿದಂತೆ ಸ್ತುತಿಪಾಠಕನಿಗೆ ಗುರುಪ್ರಸಾದವಾಗದೇ ಅಧಿಕವಾದ ದುಃಖವುಂಟಾಗುವದು. ಗುರುಗಳು ಪ್ರಸನ್ನರಾದರೆ ಕೂಡಲೇ "**ದೀನಂ ದೂನಂ ಅನಾಥಂ ಶರಣಾಗತಮೇನಂ ಉದ್ಧರೇತಿ**" – "ಸ್ವಾಮಿ ! ದೀನನೂ, ದೂನನೂ, ಅನಾಥನೂ ಮತ್ತು ಶರಣಾಗತನೂ ಆದ ಈ ಭಕ್ತನನ್ನು ಉದ್ಧರಿಸು" ಎಂದು ಅವರು ತಮ್ಮ ಗುರ್ವಂತರ್ಯಾಮಿಯಾದ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಹರಿಯನ್ನು ಪ್ರಾರ್ಥಿಸುತ್ತಾರೆ. ಹರಿವಾಯುಗುರುಗಳಿಂದ ಅಪ್ಪಣೆ ಪಡೆದು ಭಕ್ತರ ಇಷ್ಟಾರ್ಥಗಳನ್ನು ಪೂರೈಸುತ್ತಾರೆ. ಜ್ಞಾನಭಕ್ತಿ ವೈರಾಗ್ಯಗಳು ಬೇಕಾಗಿದ್ದರೆ ಅವುಗಳನ್ನೂ ಕೊಡುತ್ತಾರೆ. ಶ್ರೀರಾಘವೇಂದ್ರತೀರ್ಥಗುರುಸಾರ್ವ-ಭೌಮರಂತೂ ಯೋಗ್ಯಜೀವರಿಗೆ ಚತುರ್ವಿಧ ಪುರುಷಾರ್ಥಗಳನ್ನೂ ಕೂಡ ಅನುಗ್ರಹಿಸಬಲ್ಲರು.

ಇದುವರೆಗೆ, "**ಗುರುಗುಣಸ್ತವನ**" ಎಂಬ ಅಖಂಡಪದದಲ್ಲಿಯ **ಗುರು, ಗುಣ** ಮತ್ತು **ಸ್ತವನ** ಎಂಬ ಘಟಕ ಪದಗಳ ಬಗ್ಗೆ ವಿವೇಚನೆ ಮಾಡುತ್ತ ಗುರುಗಳ ಲಕ್ಷಣ ಪ್ರಕಾರ, ದ್ವಾದಶ ಗುರುಗಳು, ಗುರುಗಳ ಮಹತ್ವ, ಗುಣಲಕ್ಷಣ, ಗುಣತಾರತಮ್ಯ, ಮುಮುಕ್ಷುಗಳಿಗೆ ಗುಣತಾರತಮ್ಯ ಜ್ಞಾನದ ಅವಶ್ಯಕತೆ, ಗುರೂಪದೇಶ, ಹರಿಭಕ್ತಿ, ಗುರುಗುಣಸ್ತವನದಿಂದ ಗುರುಪ್ರಸಾದ ಇವೇ ಮೊದಲಾದ ವಿಷಯಗಳನ್ನು ಯಥಾಮತಿ ನಿರೂಪಿಸಲಾಯಿತು. ಇನ್ನು "ಗುರುಗುಣಸ್ತವನ" ಈ ಅಖಂಡಪದದ ಬಗ್ಗೆ ವಿವೇಚಿಸ-ಲಾಗುವದು.

**ಗುರುಗುಣಸ್ತವನ** : ಗುರುಗುಣಸ್ತವನವೆಂಬ ಖಂಡಕಾವ್ಯದಲ್ಲಿ ಶ್ರೀವಾದೀಂದ್ರ-ತೀರ್ಥರು ಶ್ರೀಮದಾಚಾರ್ಯರಿಂದ ಪ್ರಾರಂಭಿಸಿ ತಮ್ಮ ಗುರುಗಳಾದ ಶ್ರೀಉಪೇಂದ್ರ-ತೀರ್ಥರ ವರೆಗಿನ ಗುರುಪರಂಪರೆಯಲ್ಲಿ ಪ್ರಮುಖರಾದ ಹಾಗೂ ವೇದಾಂತಸಾಹಿತ್ಯಕ್ಕೆ ಅಸಾಮಾನ್ಯ ಕೊಡುಗೆಯನ್ನಿತ್ತ, ಗ್ರಂಥಕರ್ತೃಗಳಾದ ಕೆಲವೇ ಗುರುಗಳನ್ನು ಮತ್ತು ಅವರ

ಸೈನ್ಯಗಳಲ್ಲಿರುವ ಅಜೇಯರಾದ ಸೈನಿಕರ ಅಧಿಪತಿಯಾದವರು ಶ್ರೀವಿಬುಧೇಂದ್ರತೀರ್ಥರು. ಇಲ್ಲಿ ಜ್ಞಾನ, ಧೈರ್ಯ, ನಾಯಕತ್ವ ಗುಣಗಳ ಸ್ತವನವಿದೆ.

೨. **ಮಾಯಾಸಿದ್ಧಾಂತದೀಕ್ಷಾವಿಘಟನಘಟನಾಸರ್ವತಂತ್ರಸ್ವತಂತ್ರಃ** = ಶ್ರೀವಿಬುಧೇಂದ್ರರು ಮಾಯಾವಾದವನ್ನು ನಿರಸನ ಮಾಡಿ ವೈಷ್ಣವಸಿದ್ಧಾಂತವನ್ನು ಪ್ರತಿಷ್ಠಾಪಿಸುವಲ್ಲಿ ಅಗ್ರಗಣ್ಯರಾಗಿದ್ದರು ಮತ್ತು ಸಕಲಶಾಸ್ತ್ರಗಳಲ್ಲಿ ಅಪ್ರತಿಮ ಪಂಡಿತರಾಗಿದ್ದರು. ಇಲ್ಲಿ ನಿಷ್ಠೆ, ಪಾಂಡಿತ್ಯ ಹಾಗೂ ವಾದಕೌಶಲಗಳ ನಿರ್ದೇಶನವಿದೆ.

೩. **ಶ್ರೀರಾಮವ್ಯಾಸದಾಸಃ** = ಶ್ರೀಮೂಲರಾಮ, ದಿಗ್ವಿಜಯರಾಮ ಹಾಗೂ ಜಯರಾಮರ ಮತ್ತು ಶ್ರೀವೇದವ್ಯಾಸರ ದಾಸರಾಗಿದ್ದರು. ಇಲ್ಲಿ ಭಕ್ತಿ ಮತ್ತು ದಾಸ್ಯಗುಣಗಳ ಪ್ರಕಾಶನವಿದೆ. **'ಬಹಿಷ್ಠೇಶ್ವರದಾಸತ್ವಂ ದಾಸ್ಯಮಿತ್ಯಭಿಧೀಯತೇ ||'** (ಭಾಗ. ೭.೧೨.೧೧, ತಂತ್ರಮಾಲಾ) ಎಂಬ ವಚನದಂತೆ ಶ್ರೀರಾಮವ್ಯಾಸರ ದಾಸನೆಂಬ ಭಾವನೆಯುಳ್ಳ ಶ್ರೀವಿಬುಧೇಂದ್ರತೀರ್ಥರು ಮಹಾಪಂಡಿತರಾಗಿದ್ದರೂ ಅತಿ ವಿನೀತರೂ ಸಾಧುಗಳೂ ಆಗಿದ್ದರು. ಅಂಥವರ **ನಾತಿಮಾನಿತಾ** = ಅಹಂಕಾರರಾಹಿತ್ಯ ಎಂಬ ಗುಣವು ಇಲ್ಲಿ ವ್ಯಕ್ತವಾಗಿದೆ.

೪. **ಸಂಯಮೀಂದ್ರಃ** = ವಿಬುಧೇಂದ್ರರನ್ನು ಯತಿಶ್ರೇಷ್ಠರೆಂದು ಸ್ತುತಿಸುವಾಗ ಅವರ ಇಂದ್ರಿಯನಿಗ್ರಹ ಅಂದರೆ 'ದಮ' ಗುಣದ ನಿರೂಪಣೆ ಇದೆ.

**ವಿಶೇಷ ವಿಷಯ : ಶ್ರೀರಾಮವ್ಯಾಸದಾಸಃ** (ಶ್ರೀರಾಮವ್ಯಾಸಯೋಃ ದಾಸಃ) ಶ್ರೀವಿಬುಧೇಂದ್ರರಿಗೆ ಕಾರಣಾಂತರದಿಂದ ಶ್ರೀಬ್ರಹ್ಮದೇವಕರಾರ್ಚಿತ ಶ್ರೀಮನ್ಮೂಲರಾಮಚಂದ್ರನ ಪ್ರತಿಮೆಯನ್ನು ಅರ್ಚಿಸಲಾಗಲಿಲ್ಲ. ಅದೊಂದು ಅವರ ಮನದಲ್ಲಿ ಉಳಿದು ಸದಾ ಶ್ರೀರಾಮಧ್ಯಾನದಲ್ಲಿ ಆಸಕ್ತರಾಗಿರುತ್ತಿದ್ದರು. ಆದ್ದರಿಂದ ಅವರು ರಾಮದಾಸರಾದರು. ಶ್ರೀವಿಬುಧೇಂದ್ರರು ಸ್ವಭಾವತಃ ಶ್ರೀರಾಮದಾಸರಾಗಿದ್ದರೂ ಇದೊಂದು ಔಪಚಾರಿಕ ಕಾರಣವೆಂದು ತಿಳಿಯಬೇಕು.

ಶ್ರೀವ್ಯಾಸದಾಸರು ಹೇಗೆಂದರೆ – ಶ್ರೀವಿಬುಧೇಂದ್ರರು, ಸದಾ ಪಾಠಪ್ರವಚನ ಹಾಗೂ ಪರವಾದಿ ದಿಗ್ವಿಜಯಗಳಲ್ಲಿ ಆಸಕ್ತರಾಗಿರುತ್ತಿದ್ದರು. ಪರಮತ ಖಂಡನ ಪೂರ್ವಕ ಸಿದ್ಧಾಂತಪ್ರತಿಷ್ಠಾಪನೆ ಮಾಡುತ್ತ ಶ್ರೀವೇದವ್ಯಾಸರ ಸೇವೆಯನ್ನು ಮಾಡುತ್ತಿದ್ದರು. ಈ ಎಲ್ಲ ಕಾರಣಗಳಿಂದ ಶ್ರೀವ್ಯಾಸದಾಸರಾದರು.

**ಆಕೇರಲಂ ತಥಾಸೇತುಂ ಆಗಂಗಂ ಚಾಹಿಮಾಲಯಮ್ |**
**ನಿರಾಕೃತಾದ್ವೈತಶ್ಚೈವಂ ವಿಬುಧೇಂದ್ರಗುರುಂ ಭಜೇ ||**

ಇದು ಶ್ರೀವಿಬುಧೇಂದ್ರತೀರ್ಥರ ಚರಮಶ್ಲೋಕ. ಇದರಲ್ಲಿ ವರ್ಣಿತವಾದ ಶ್ರೀವಿಬುಧೇಂದ್ರರು ಮಾಡುತ್ತಿದ್ದ **ಪರಮತ ನಿರಾಕರಣ ಪೂರ್ವಕ ಸ್ವಮತಸ್ಥಾಪನೆ**

ಎಂಬ ಯತಿಕರ್ತವ್ಯಕಾರ್ಯವು, ಗುರುಗುಣಸ್ತವನದ ಈ ಶ್ಲೋಕದಲ್ಲಿರುವ ೧. ಶ್ರೀಮತ್ಪೂರ್ಣಪ್ರಬೋಧಪ್ರಕಟಿತಪದವೀಧಾವಿಮೇಧಾವಿಧೀಮತ್ಸೇನಾನಾಸೀರಸೀಮಾ-ಸಮುದಿತವಿದಿತಾಬಾಧಯೋಧಾಧಿನೇತಾ ॥ ಮತ್ತು ೨. ಮಾಯಾಸಿದ್ಧಾಂತದೀಕ್ಷಾ-ವಿಘುಟನಘುಟನಾಸರ್ವತಂತ್ರಸ್ವತಂತ್ರಃ ಎಂಬ ಎರಡು ವಿಶೇಷಣಗಳಿಂದ ನಿರೂಪಿತವಾಗಿದೆ.

೭. ಅವತಾರಿಕಾ : ಮೂರು ಉದ್ಗ್ರಂಥಗಳ ಕರ್ತೃಗಳಾದ ಶ್ರೀವ್ಯಾಸರಾಜರು ಶ್ರೇಯಸ್ಸನ್ನುಂಟು ಮಾಡಲಿ ಎಂದು ಪ್ರಾರ್ಥಿಸುತ್ತಾರೆ.

**ಮಾಯಾತಂತ್ರಾಮರಾರಿಸ್ಮಯಮಪನಯತೋ ಮಧ್ವಸಿದ್ಧಾಂತನಾಮ್ನೋ**
**ನೇತ್ರಾಣೀವ ತ್ರಯೋಽಪಿ ತ್ರಿಜಗತಿ ನೃಹರೇರಿಂಧತೇ ಯತ್ಪ್ರಬಂಧಾಃ ।**
**ಯದ್ವಾಗದ್ವೈತವಿದ್ಯಾಚಲಕುಲಕುಲಿಶಪ್ರೌಢಿಮಾಢೌಕತೇ ಸಃ**
**ಶ್ರೇಯೋ ಭೂಯೋ ವಿದಧ್ಯಾತ್ಸುಮಹಿತಮಹಿಮಾ ಸಂಪ್ರತಿ ವ್ಯಾಸರಾಜಃ ॥೭॥**

**ಅನ್ವಯಾರ್ಥ** : **ಯತ್ಪ್ರಬಂಧಾಃ** – **ಯತ್** = ಯಾರ, **ಪ್ರಬಂಧಾಃ** = ಪ್ರಬಂಧಗಳು (ಶ್ರೇಷ್ಠವಾದ ಗ್ರಂಥಗಳು), **ತ್ರಯೋಽಪಿ** = ಮೂರೂ ಕೂಡ ಅಂದರೆ ಯಾರ ಮೂರೂ ಪ್ರಬಂಧಗಳೂ ಕೂಡ, **ತ್ರಿಜಗತಿ** = ಮೂರ್ಲೋಕಗಳಲ್ಲಿ, **ಮಾಯಾತಂತ್ರಾ-ಮರಾರಿಸ್ಮಯಂ** – **ಮಾಯಾತಂತ್ರ** = ಮಾಯಾಮತವೆಂಬ (ಅದ್ವೈತಸಿದ್ಧಾಂತವೆಂಬ), **ಅಮರಾರಿ** = ದೇವಶತ್ರು ಹಿರಣ್ಯಕಶಿಪುವಿನ, **ಸ್ಮಯಂ** = ಗರ್ವವನ್ನು, **ಅಪನಯತಃ** = ಹೊಡೆದೋಡಿಸುವ, **ಮಧ್ವಸಿದ್ಧಾಂತನಾಮ್ನಃ** = ಮಧ್ವಸಿದ್ಧಾಂತವೆಂಬ, **ನೃಹರೇಃ** = ಶ್ರೀನೃಸಿಂಹದೇವರ, **ನೇತ್ರಾಣಿ ಇವ** = ಮೂರು ಕಣ್ಣುಗಳಂತೆ, **ಇಂಧತೇ** = ಪ್ರಕಾಶಿಸುತ್ತಿವೆಯೋ ಮತ್ತು **ಯದ್ವಾಕ್** – **ಯತ್** = ಯಾರ, **ವಾಕ್** = ವಾಣಿಯು, **ಅದ್ವೈತವಿದ್ಯಾಚಲಕುಲಕುಲಿಶಪ್ರಾಢಿಂ** – **ಅದ್ವೈತವಿದ್ಯಾ** = ಅದ್ವೈತಮತವೆಂಬ, **ಅಚಲ** = ಪರ್ವತಗಳ, **ಕುಲ** = ಸಮೂಹದ ವಿಷಯದಲ್ಲಿ, **ಕುಲಿಶ** = ವಜ್ರಾಯುಧದ, **ಪ್ರೌಢಿಂ** = ಸಾಮರ್ಥ್ಯವನ್ನು, **ಆಢೌಕತೇ** = ಹೊಂದಿರುವದೋ, **ಸುಮಹಿತಮಹಿಮಾ** = ಸುವಿಖ್ಯಾತ ಮಹಿಮಾಶಾಲಿಗಳಾದ, **ಸಃ** = ಅಂಥ, **ವ್ಯಾಸರಾಜಃ** = ಶ್ರೀವ್ಯಾಸರಾಜರು, **ಸಂಪ್ರತಿ** = ಈಗ ನಮಗೆ, **ಭೂಯಃ** = ಬಹಳವಾದ, **ಶ್ರೇಯಃ** = ಶ್ರೇಯಸ್ಸನ್ನು, **ವಿದಧ್ಯಾತ್** = ಉಂಟು ಮಾಡಲಿ.

**ತಾತ್ಪರ್ಯಾರ್ಥ** : ಶ್ರೀವ್ಯಾಸರಾಜರ ತಾತ್ಪರ್ಯಚಂದ್ರಿಕಾ, ನ್ಯಾಯಾಮೃತ ಮತ್ತು ತರ್ಕತಾಂಡವ ಎಂಬ ಮೂರು ಪ್ರಬಂಧಗಳು, ಅದ್ವೈತಸಿದ್ಧಾಂತವೆಂಬ ದೈತ್ಯ ಹಿರಣ್ಯ ಕಶಿಪುವಿನ ಗರ್ವವನ್ನು ನಿರ್ಮೂಲಮಾಡುವ ಮಧ್ವಸಿದ್ಧಾಂತವೆಂಬ ಶ್ರೀನೃಸಿಂಹ ದೇವರ ಮೂರು ಕಣ್ಣುಗಳಂತೆ ಶೋಭಿಸುತ್ತಿವೆ. ಶ್ರೀವ್ಯಾಸರಾಜ ಗುರುಸಾರ್ವಭೌಮರ ವಚನಗಳು, ಪರ್ವತಗಳ ಸಮೂಹವನ್ನು ನಾಶಪಡಿಸುವ ವಜ್ರಾಯುಧದಂತೆ,

ಅದ್ವೈತಶಾಸ್ತ್ರವನ್ನು ನಿರಸಗೊಳಿಸುವಲ್ಲಿ ಅತ್ಯಂತ ಸಮರ್ಥವಾಗಿವೆ. ಇಂಥ ಮಹಿಮೋಪೇತ-ರಾದ ಶ್ರೀವ್ಯಾಸರಾಜರು ನಮಗೆ ಬಹಳವಾದ ಶ್ರೇಯಸ್ಸನ್ನುಂಟು ಮಾಡಲಿ.)

**ಗುಣಪ್ರಕಾಶ :** ಈ ಶ್ಲೋಕದಲ್ಲಿ ಶ್ರೀವ್ಯಾಸರಾಜರನ್ನು 'ಸುಮಹಿತಮಹಿಮಾ' ಎಂಬ ಒಂದು ವಿಶೇಷಣದಿಂದಲೂ ಅವರ ಗ್ರಂಥಗಳನ್ನು 'ಮಾಯಾತಂತ್ರಾಮರಾರಿ .......' ಎಂಬ ಒಂದು ವಿಶೇಷಣದಿಂದಲೂ ಮತ್ತು ವಾಗ್ವೈಖರಿಯನ್ನು 'ಯದ್ವಾಗದ್ವೈತವಿದ್ಯಾಚಲಕುಲಕುಲಿಶ' ಎಂಬ ವಿಶೇಷಣದಿಂದಲೂ ಸ್ತುತಿಸಲಾಗಿದೆ.

೧. **ಸುಮಹಿತಮಹಿಮಾ** – ಶ್ರೀವ್ಯಾಸರಾಜರು ವಿಖ್ಯಾತಕೀರ್ತಿಶಾಲಿಗಳಾದವರು.

೨. ಅವರ ಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವ ಎಂಬ ಮೂರು ಗ್ರಂಥಗಳು ಮಾಯಾವಾದವೆಂಬ ಹಿರಣ್ಯಕಶಿಪುವನ್ನು ಸಂಹರಿಸಿದ ಶ್ರೀನೃಸಿಂಹದೇವರ ಮೂರು ಕಣ್ಣುಗಳಿದ್ದಂತೆ. ಈ ಗ್ರಂಥಗಳ ವರ್ಣನೆಯ ನಿಮಿತ್ತದಿಂದ ಆ ಶ್ರೇಷ್ಠಗ್ರಂಥಕರ್ತೃಗಳಾದ ಶ್ರೀವ್ಯಾಸರಾಜರ ಪ್ರತಿಭೆ, ಪ್ರೌಢಿಮೆಗಳ ಉಲ್ಲೇಖವಿದೆ.

೩. ಶ್ರೀವ್ಯಾಸರಾಜರ ವಾಣಿಯು ಅದ್ವೈತ ಶಾಸ್ತ್ರವೆಂಬ ಪರ್ವತಸಮೂಹಕ್ಕೆ ಇಂದ್ರನ ವಜ್ರಾಯುಧದಂತಿದ್ದಿತು. ಇಲ್ಲಿ ಶ್ರೀವ್ಯಾಸರಾಜರ ವಾದಕೌಶಲದ ಪ್ರಸ್ತಾಪವಿದೆ.

**೮. ಅವತಾರಿಕಾ** : ತಮ್ಮನ್ನು ಪೋಷಿಸುವಂತೆ ಶ್ರೀವಿಜಯೀಂದ್ರತೀರ್ಥರನ್ನು ಪ್ರಾರ್ಥಿಸುತ್ತಾರೆ.

**ಚಾತುರ್ಯೈಕಾಕೃತಿರ್ಯಶ್ಚತುರಧಿಕಶತಗ್ರಂಥರತ್ನಪ್ರಣೇತಾ**
**ಧೂತಾರಾತಿಪ್ರಬಂಧಃ ಸ್ಫುಟವಿದಿತಚತುಃಷಷ್ಟಿವಿದ್ಯಾವಿಶೇಷಃ ।**
**ಸೋಽಯಂ ನಃ ಶ್ರೀಸುರೇಂದ್ರವ್ರತಿವರತನಯೋಽದ್ವೈತಶೈವಾಸಹಿಷ್ಣುಃ**
**ಪುಷ್ಣಾತು ಶ್ರೀಜಯೀಂದ್ರಸ್ತ್ರಿಭುವನವಿದಿತಸ್ಸರ್ವತಂತ್ರಸ್ವತಂತ್ರಃ ॥ ೮ ॥**

**ಅನ್ವಯಾರ್ಥ : ಚಾತುರ್ಯೈಕಾಕೃತಿಃ** – **ಚಾತುರ್ಯ** = ಚಾತುರ್ಯವೇ (ದಕ್ಷತೆಯೇ), **ಏಕಾಕೃತಿಃ** = ಮುಖ್ಯವಾದ ಮೂರ್ತಿಯಂತಿರುವ, (ಶ್ರೀವಿಜಯೀಂದ್ರ-ತೀರ್ಥರು), **ಚತುರಧಿಕಶತಗ್ರಂಥರತ್ನಪ್ರಣೇತಾ** – **ಚತುರಧಿಕಶತ** = ಒಂದುನೂರಾ ನಾಲ್ಕು, **ಗ್ರಂಥರತ್ನ** = ಶ್ರೇಷ್ಠಗ್ರಂಥಗಳ, **ಪ್ರಣೇತಾ** = ಕರ್ತೃಗಳಾದ, (ಶ್ರೀವಿಜಯೀಂದ್ರ-ತೀರ್ಥರು), **ಧೂತಾರಾತಿಪ್ರಬಂಧಃ** – **ಧೂತ** = ನಿರಸನಗೊಳಿಸಲ್ಪಟ್ಟ, **ಅರಾತಿ** = ಅದ್ವೈತಿಗಳೇ ಮೊದಲಾದ ಶತ್ರುಗಳ, **ಪ್ರಬಂಧಾಃ** = ಗ್ರಂಥಗಳುಳ್ಳ (ಅದ್ವೈತವಾದಿಗಳೇ ಮೊದಲಾದ ಶತ್ರುಗಳ ಸಕಲ ಗ್ರಂಥಗಳನ್ನು ಖಂಡಿಸಿದ, ಶ್ರೀವಿಜಯೀಂದ್ರತೀರ್ಥರು), **ಸ್ಫುಟವಿದಿತಚತುಃಷಷ್ಟಿವಿದ್ಯಾವಿಶೇಷಃ** – **ಸ್ಫುಟ** = ಚೆನ್ನಾಗಿ, **ವಿದಿತ** = ತಿಳಿಯಲ್ಪಟ್ಟ **ಚತುಃಷಷ್ಟಿ** = ಅರವತ್ನಾಲ್ಕು, **ವಿದ್ಯಾವಿಶೇಷಾಃ** = ವಿದ್ಯಾವಿಶೇಷಗಳುಳ್ಳವರೂ ಆದ

(ಶ್ರೀವಿಜಯೀಂದ್ರತೀರ್ಥರು), **ಅದ್ವೈತಶೈವಾಸಹಿಷ್ಣುಃ** – **ಅದ್ವೈತ** = ಅದ್ವೈತಮತ ಮತ್ತು **ಶೈವ** = ಶೈವಮತ ಇವುಗಳನ್ನು, **ಅಸಹಿಷ್ಣುಃ** = ಸಹಿಸದಿರುವ, **ತ್ರಿಭುವನವಿದಿತಃ** – **ತ್ರಿಭುವನ** = ತ್ರಿಲೋಕಗಳಲ್ಲಿ, **ವಿದಿತಃ** = ಪ್ರಸಿದ್ಧರಾದ (ಶ್ರೀವಿಜಯೀಂದ್ರತೀರ್ಥರು). **ಸರ್ವತಂತ್ರಸ್ವತಂತ್ರಃ** = ಸರ್ವತಂತ್ರಗಳಲ್ಲಿ ಪರಾನಪೇಕ್ಷರಾದ, **ಶ್ರೀಸುರೇಂದ್ರವ್ರತಿವರ-ತನಯಃ** = ಶ್ರೀಸುರೇಂದ್ರತೀರ್ಥರೆಂಬ ವ್ರತಿಶ್ರೇಷ್ಠರ ವರಕುಮಾರಕರಾದ, **ಸಃ** = ಅಂತಹ, **ಅಯಂ** = ಪ್ರಕೃತರಾದ, **ಶ್ರೀಜಯೀಂದ್ರಃ** = ಶ್ರೀವಿಜಯೀಂದ್ರತೀರ್ಥರು, **ನಃ** = ನಮ್ಮನ್ನು, **ಪುಷ್ಣಾತು** = ಪೋಷಿಸಲಿ.

**ತಾತ್ಪರ್ಯಾರ್ಥ** : ಚಾತುರ್ಯವೇ ಮೂರ್ತಿವೆತ್ತು ಬಂದಂತಿರುವ, ೧೦೪ ಶ್ರೇಷ್ಠ ಗ್ರಂಥಗಳನ್ನು ರಚಿಸಿರುವ, ಅಲ್ಲದೇ ಅದ್ವೈತವಾದಗಳೇ ಮೊದಲಾದ ಪರಕೀಯರ ಪ್ರಬಂಧಗಳನ್ನು ತಮ್ಮ ಶ್ರೇಷ್ಠ ಕೃತಿಗಳಿಂದ ನಿರಾಕರಿಸಿದ, ೬೪ ಕಲೆಗಳಲ್ಲಿ ನಿಷ್ಣಾತರಾದ, ಅದ್ವೈತ ಹಾಗೂ ಶೈವ ಮತಗಳನ್ನು ಸಹಿಸದಿರುವ, ಮೂರ್ಲೋಕಗಳಲ್ಲಿ ಪ್ರಸಿದ್ಧರಾಗಿರುವ, ಸಕಲ ಸಿದ್ಧಾಂತಗಳಲ್ಲಿ ಪರಾನಪೇಕ್ಷರಾಗಿದ ಹಾಗೂ ಶ್ರೀಸುರೇಂದ್ರ-ತೀರ್ಥರ ವರಕುಮಾರರಾದ ಶ್ರೀವಿಜಯೀಂದ್ರತೀರ್ಥರು ನಮ್ಮನ್ನು ಪೋಷಿಸಲಿ.

**ಗುಣಪ್ರಕಾಶ** : ಶ್ರೀರಾಯರ ಪರಮಗುರುಗಳಾದ ಶ್ರೀವಿಜಯೀಂದ್ರತೀರ್ಥರ ವರ್ಣನಾಪರವಾದ ಈ ಶ್ಲೋಕದಲ್ಲಿ ೮ ವಿಶೇಷಣಗಳಿಂದ ಗುರುಗಳನ್ನು ಸ್ತುತಿಸಲಾಗಿದೆ.

೧. **ಚಾತುರ್ಯೈಕಾಕೃತಿಃ** = ಶ್ರೀವಿಜಯೀಂದ್ರತೀರ್ಥರು ಚಾತುರ್ಯಗುಣವೇ ಮೂರ್ತಿವೆತ್ತು ಬಂದಂತಿದ್ದರು.

೨. **ಚತುರಧಿಕಶತಗ್ರಂಥರತ್ನಪ್ರಣೇತಾ** = ಇವರು ೧೦೪ ಗ್ರಂಥಗಳನ್ನು ರಚಿಸಿ-ದವರು. ಇಷ್ಟು ಗ್ರಂಥಗಳನ್ನು ಬೇರಿನ್ನಾರೂ ರಚಿಸಿರುವದಿಲ್ಲ. ಇಷ್ಟು ಅಧಿಕ ಗ್ರಂಥಗಳನ್ನು ರಚಿಸಿರುವದು ಶ್ರೀವಿಜಯೀಂದ್ರತೀರ್ಥರ ಅಗಾಧವಾದ ಪಾಂಡಿತ್ಯ ಹಾಗೂ ಪ್ರತಿಭೆಯ ದ್ಯೋತಕವಾಗಿದೆ.

೩. **ಧೂತಾರಾತಿಪ್ರಬಂಧಃ** = ಅದ್ವೈತಿಗ್ರಂಥಗಳನ್ನು ಖಂಡನ ಮಾಡಿರುವವರು.

೪. **ಸ್ಫುಟವಿದಿತಚತುಃಷಷ್ಟಿವಿದ್ಯಾವಿಶೇಷಃ** = ೬೪ ಕಲೆಗಳಿಂದ ಯುಕ್ತರಾದವರು.

ಈ ವಿಶೇಷಣವು ಶ್ರೀವಿಜಯೀಂದ್ರತೀರ್ಥರ ಪ್ರತಿಭಾಗುಣದ ದ್ಯೋತಕವಾಗಿದೆ. ೬೪ ಕಲೆಗಳ ಸಂಕ್ಷಿಪ್ತ ಪರಿಚಯಕ್ಕೆ ಶಬ್ದಕಲ್ಪದ್ರುಮದ 'ಕಲಾ' ಶಬ್ದವನ್ನು ನೋಡಬೇಕು.

೫. **ಶ್ರೀಸುರೇಂದ್ರವ್ರತಿವರತನಯಃ** = ಶ್ರೀಸುರೇಂದ್ರತೀರ್ಥರ ಕರಕಮಲಸಂಜಾತರು.

ವ್ರತೀ ಅಂದರೆ ತಪಸ್ವೀ, ವ್ರತಧಾರೀ ಎಂದು ಕೋಶವಿದೆ. ಇಲ್ಲಿ ಶ್ರೀಸುರೇಂದ್ರತೀರ್ಥರ ತಪೋನಿಷ್ಠೆ ಸಂಯಮ ಮತ್ತು ದಮ ಗುಣಗಳ ಸ್ತವನವೂ ಇದೆ.

೬. ಅದ್ವೈತಶೈವಾಸಹಿಷ್ಣುಃ = ಅದ್ವೈತ ಮತ್ತು ಶೈವ ಮತಗಳು ದೋಷಯುಕ್ತ-ವಾಗಿರುವುದರಿಂದ ಅವುಗಳನ್ನು ಸಹಿಸದವರು.

೭. ತ್ರಿಭುವನವಿದಿತಃ = ಮೂರ್ಲೋಕಗಳಲ್ಲಿ ಪ್ರಖ್ಯಾತರಾದವರು.

೮. ಸರ್ವತಂತ್ರಸ್ವತಂತ್ರಃ = ಸಕಲಶಾಸ್ತ್ರಗಳಲ್ಲಿ ಪರಾಪೇಕ್ಷೆ ಇಲ್ಲದೇ ಸ್ವತಃ-ಸಮರ್ಥರು ಅಂದರೆ ಗ್ರಂಥರಚನೆ ಮಾಡುವದಿರಲಿ, ಪಾಠಪ್ರವಚನ ಮಾಡುವದಿರಲಿ ಸ್ವತಃ ತಾವೇ ಮಾಡುತ್ತಿದ್ದರು. – ಪ್ರತಿಭಾಗುಣ

೯. **ಅವತಾರಿಕಾ** : ಶ್ರೀಸುಧೀಂದ್ರತೀರ್ಥರು ಮಂಗಳವನ್ನುಂಟು ಮಾಡಲಿ ಎಂದು ಪ್ರಾರ್ಥಿಸುತ್ತಾರೆ.

**ವ್ಯಾಧೂತಾವದ್ಯಹೃದ್ಯಾಮಿತಕೃತಿರಚನಾಚಾರುಚಾತುರ್ಯಹೃಷ್ಯತ್-**
**ಕರ್ಣಾಟಕ್ಷೋಣಿಪಾಲಪ್ರತಿಪದರಚಿತಾನೇಕರತ್ನಾಭಿಷೇಕಃ ।**
**ಪತ್ರೀಶಾರೂಢಲಕ್ಷ್ಮೀಪತಿಪದನಲಿನೋದಗ್ರರೋಲಂಬಲೀಲೋ**
**ವಿಖ್ಯಾತಶ್ರೀಸುಧೀಂದ್ರವ್ರತಿಪತಿರತುಲಂ ಭದ್ರಮುನ್ನಿದ್ರಯೇನ್ನಃ ॥ ೯ ॥**

**ಅನ್ವಯಾರ್ಥ** : **ವ್ಯಾಧೂತಾವದ್ಯಹೃದ್ಯಾಮಿತಕೃತಿರಚನಾಚಾರುಚಾತುರ್ಯಹೃಷ್ಯತ್ ಕರ್ಣಾಟಕ್ಷೋಣಿಪಾಲಪ್ರತಿಪದರಚಿತಾನೇಕರತ್ನಾಭಿಷೇಕಃ** – **ವ್ಯಾಧೂತ** = ನಿರಾಕರಿಸಲ್ಪಟ್ಟ, **ಅವದ್ಯ** = ದೋಷಗಳುಳ್ಳ, ಮತ್ತು **ಹೃದ್ಯ** = ಮನೋಹರವಾದ, **ಅಮಿತಕೃತಿ** = ಅಸಂಖ್ಯ ಗ್ರಂಥಗಳ, **ರಚನಾ** = ರಚನೆ ಮಾಡುವಲ್ಲಿರುವ, **ಚಾರುಚಾತುರ್ಯ** = ಮನೋಜ್ಞ-ವಾದ ಕೌಶಲವನ್ನು ಕಂಡು, **ಹೃಷ್ಯತ್** = ಹರ್ಷಿತರಾದ, **ಕರ್ಣಾಟಕ್ಷೋಣಿಪಾಲ** = ಕರ್ಣಾಟಪ್ರಾಂತದ ರಾಜರುಗಳಿಂದ, **ಪ್ರತಿಪದ** = ಮೇಲಿಂದ ಮೇಲೆ, **ರಚಿತ** = ಮಾಡಲ್ಪಟ್ಟ, **ಅನೇಕರತ್ನಾಭಿಷೇಕಃ** = ಅನೇಕ ರತ್ನಗಳ ಅಭಿಷೇಕವುಳ್ಳ (ಶ್ರೀಸುಧೀಂದ್ರ-ತೀರ್ಥರು), **ಪತ್ರೀಶಾರೂಢಲಕ್ಷ್ಮೀಪತಿಪದನಲಿನೋದಾರಲೋಲಂಬಲೀಲಃ** – **ಪತ್ರೀಶ** = ಪಕ್ಷಿರಾಜನಾದ ಗರುಡನ ಹೆಗಲ ಮೇಲೆ, **ಆರೂಢ** = ಕುಳಿತುಕೊಂಡಿರುವ, **ಲಕ್ಷ್ಮೀಪತಿ** = ಲಕ್ಷ್ಮೀಪತಿ ನಾರಾಯಣನ, **ಪದನಲಿನ** = ಪಾದ ಕಮಲಗಳಲ್ಲಿ, **ಉದಾರ** = ಉತ್ಕೃಷ್ಟವಾದ, **ಲೋಲಂಬ** = ಭ್ರಮರದಂತೆ, **ಲೀಲಃ** = ವ್ಯಾಪಾರವುಳ್ಳ (ಶ್ರೀಸುಧೀಂದ್ರ-ತೀರ್ಥರು), **ವಿಖ್ಯಾತಃ** = ಪ್ರಖ್ಯಾತರಾದ, **ಶ್ರೀಸುಧೀಂದ್ರವ್ರತಿಪತಿಃ** = ಶ್ರೀಸುಧೀಂದ್ರ-ತೀರ್ಥರೆಂಬ ಯತಿಶ್ರೇಷ್ಠರು, **ನಃ** = ನಮಗೆ, **ಅತುಲಂ ಭದ್ರಂ** = ಅಸದೃಶವಾದ ಕ್ಷೇಮವನ್ನು, **ಉನ್ನಿದ್ರಯೇತ್** = ಉಂಟುಮಾಡಲಿ.

**ತಾತ್ಪರ್ಯಾರ್ಥ** : ನಿರ್ದುಷ್ಟವಾದ ಮತ್ತು ಮನೋಹಾರಿಯಾದ ಅನೇಕ ಶ್ರೇಷ್ಠ ಪ್ರಬಂಧಗಳನ್ನು ರಚಿಸುವಲ್ಲಿ ತೋರುತ್ತಿದ್ದ ಮನೋಜ್ಞವಾದ ಕೌಶಲ್ಯದಿಂದ ಅತಿ

ಹರ್ಷಿತನಾದ ಕರ್ಣಾಟಕ ಸಾಮ್ರಾಜ್ಯದ ಅಧಿಪತಿಯಿಂದ ಮೇಲಿಂದ ಮೇಲೆ ರತ್ನಾಭಿಷೇಕ ಮಾಡಿಸಿಕೊಂಡ, ಗರುಡವಾಹನ ಲಕ್ಷ್ಮೀನಾರಾಯಣದೇವರ ಪಾದಕಮಲಗಳಲ್ಲಿ ಭ್ರಮರದಂತೆ ಆಸಕ್ತರಾದ, ಸರ್ವತ್ರ ಖ್ಯಾತರಾದ ಶ್ರೀಸುಧೀಂದ್ರತೀರ್ಥರೆಂಬ ಯತಿವರೇಣ್ಯರು ನಮಗೆ ಅಸದೃಶವಾದ ಮಂಗಳವನ್ನುಂಟುಮಾಡಲಿ.

**ಗುಣಪ್ರಕಾಶ :** ಇಲ್ಲಿ ಶ್ರೀರಾಯರ ಗುರುಗಳಾದ ಶ್ರೀಸುಧೀಂದ್ರತೀರ್ಥರನ್ನು ನಾಲ್ಕು ವಿಶೇಷಣಗಳಿಂದ ಸ್ತುತಿಸಲಾಗಿದೆ.

೧. **ವ್ಯಾಧೂತಾವದ್ಯಹೃದ್ಯಾಮಿತಕೃತಿರಚನಾಚಾರುಚಾತುರ್ಯಹೃಷ್ಯತ್ಕರ್ಣಾಟಕ್ಷೋಣಿಪಾಲ ಪ್ರತಿಪದರಚಿತಾನೇಕರತ್ನಾಭಿಷೇಕಃ** = ಶ್ರೀಸುಧೀಂದ್ರತೀರ್ಥರು ದೋಷ ರಹಿತವೂ ಅನಿಂದಿತವೂ, ಮನೋಹರವೂ ಸುಲಲಿತವೂ ಆದ ಅನೇಕ ಗ್ರಂಥಗಳ ರಚನೆಯಲ್ಲಿ ತೋರಿದ ಮನೋಜ್ಞವಾದ ಕೌಶಲ್ಯ ಪಾಂಡಿತ್ಯಾದಿಗಳನ್ನು ಕಂಡು ಅತಿ ಹರ್ಷಿತನಾದ ಕರ್ಣಾಟಕ ಸಾಮ್ರಾಜ್ಯದ ಭೂಪಾಲನಾದ ವೆಂಕಟಪತಿರಾಜನಿಂದ ಅನೇಕ ಬಾರಿ ವಿವಿಧರತ್ನಗಳಿಂದ ಅಭಿಷೇಕ ಮಾಡಿಸಿಕೊಂಡವರಾಗಿದ್ದರು.

ಇಲ್ಲಿ ಶ್ರೀಸುಧೀಂದ್ರತೀರ್ಥರ ಜ್ಞಾನ, ಪಾಂಡಿತ್ಯ, ಮಾಧುರ್ಯ, ಪಟುತಾ ಗ್ರಂಥರಚನಾಕೌಶಲ ಈ ಗುಣಗಳು ವರ್ಣಿತ.

೨. **ಪತ್ರೀಶಾರೂಢಲಕ್ಷ್ಮೀಪತಿಪದನಲಿನೋದಗ್ರರೋಲಂಬಲೀಲಃ** = ಗರುಡವಾಹನ ಶ್ರೀಲಕ್ಷ್ಮೀನಾರಾಯಣನ ಪಾದಕಮಲಗಳಲ್ಲಿ ಶ್ರೇಷ್ಠ ಭೃಂಗದಂತೆ ಆಸಕ್ತರಾದವರಾಗಿದ್ದರು. ಇಲ್ಲಿ ಗುರು ಶ್ರೀಸುಧೀಂದ್ರತೀರ್ಥರ ಆಸ್ತಿಕ್ಯಬುದ್ಧಿ, ಶಾಂತಿ (ಭಗವನ್ನಿಷ್ಠತಾ) ಮತ್ತು ಹರಿಭಕ್ತಿ ಇವೇ ಮೊದಲಾದ ಗುಣಗಳು ಪ್ರಕಾಶಿತವಾಗಿವೆ.

೩. **ವಿಖ್ಯಾತಃ** = ಶ್ರೀಸುಧೀಂದ್ರತೀರ್ಥರು ಅತ್ಯಂತ ಪ್ರಸಿದ್ಧರಾಗಿದ್ದರು.

೪. **ಶ್ರೀಸುಧೀಂದ್ರವ್ರತಿಪತಿಃ** = ಕಾಂತಿಸಂಪನ್ನರಾದ ಶ್ರೀಸುಧೀಂದ್ರತೀರ್ಥರು ಪರಮಹಂಸಶೇಖರರು. ಇಲ್ಲಿ 'ವ್ರತಿಪತಿ' ಎನ್ನುವುದರಿಂದ ಶ್ರೀಸುಧೀಂದ್ರತೀರ್ಥರ 'ದಮ' ಮತ್ತು 'ತಪ' ಗುಣಗಳ ಸ್ತವನವಿದೆಯೆಂದು ತಿಳಿಯಬೇಕು.

**೧೦. ಅವತಾರಿಕಾ :** ಈ ಖಂಡಕಾವ್ಯದ ನಾಯಕರಾದ ಶ್ರೀರಾಘವೇಂದ್ರತೀರ್ಥರು ತಮಗೆ ಸದಾ ಕ್ಷೇಮವನ್ನುಂಟುಮಾಡಲಿ ಎಂದು ಕವಿಗಳು ಈಗ ಪ್ರಾರ್ಥಿಸುತ್ತಾರೆ.

**ಧೂತಾವದ್ಯೈರವಿದ್ಯಾವಿಘಟನಪಟುಭಿರ್ವಿದ್ವದಭ್ಯರ್ಥನೀಯೈಃ**
**ವಾಚಃ ಪ್ರಾಚಾಂ ಪ್ರವಾಚಾಮುಪಚಯಮಭಜನ್ ಯತ್ಕೃತಗ್ರಂಥಜಾಲೈಃ ।**
**ಸಂಖ್ಯಾವಂತೋ ಯಮಾಹುರ್ಮುಹುರಖಿಲಕಲಾಮೂರ್ತಿಮುದ್ವೇಲಕೀರ್ತಿಂ**
**ಧೀರಶ್ರೀರಾಘವೇಂದ್ರಸ್ಸ ದಿಶತು ಸತತಂ ಭವ್ಯಮವ್ಯಾಹತಂ ನಃ ॥ ೧೦ ॥**

**ಅನ್ವಯಾರ್ಥ :** **ಧೂತಾವದ್ಯೈಃ** – **ಧೂತ** = ಪರಿಹರಿಸಲ್ಪಟ್ಟ, **ಅವದ್ಯೈಃ** = ದೋಷಗಳುಳ್ಳ, (**ಗ್ರಂಥಜಾತೈಃ** = ಗ್ರಂಥಸಮೂಹಗಳಿಂದ,) **ಅವಿದ್ಯಾವಿಘಟನಪಟುಭಿಃ** – **ಅವಿದ್ಯಾ** = ಅಜ್ಞಾನದ, **ವಿಘಟನ** = ನಿರಸನದಲ್ಲಿ, **ಪಟುಭಿಃ** = ಅತ್ಯಂತ ಸಮರ್ಥವಾದ (ಗ್ರಂಥಸಮೂಹಗಳಿಂದ), **ವಿದ್ವದಭ್ಯರ್ಥನೀಯೈಃ** – **ವಿದ್ವದ್** = ವಿದ್ವಾಂಸರಿಂದ, **ಅಭ್ಯರ್ಥನೀಯೈಃ** = ಅಪೇಕ್ಷಣೆಯವಾದ (ಗ್ರಂಥಸಮೂಹಗಳಿಂದ), **ಯತ್ಕೃತಗ್ರಂಥಜಾತೈಃ (ಲೈಃ)** – **ಯತ್** = ಯಾವ ಶ್ರೀರಾಘವೇಂದ್ರತೀರ್ಥರಿಂದ, **ಕೃತ** = ರಚಿಸಲ್ಪಟ್ಟ, **ಗ್ರಂಥಜಾತೈಃ** = ಗ್ರಂಥಗಳ ಸಮೂಹಗಳಿಂದ (ಗ್ರಂಥಗಳ ಸಹಾಯದಿಂದ), **ಪ್ರವಾಚಾಂ** = ಪ್ರಕೃಷ್ಟ ವಾಗ್ಮಿಗಳಾದ, **ಪ್ರಾಚಾಂ** = ಪ್ರಾಚೀನಾಚಾರ್ಯರ ಅಥವಾ ಪ್ರಾಚೀನ ಗುರುಗಳ, **ವಾಚಃ** = ಪಾಠ ಪ್ರವಚನಾದಿಗಳು ಅಥವಾ ವಾಕ್ಯಗಳು ಅಥವಾ ಗ್ರಂಥಗಳು, **ಉಪಚಯಂ** = ಪುಷ್ಟಿಯನ್ನು ಅಥವಾ ಅಧಿಕವಾದ ಪ್ರಸಿದ್ಧಿಯನ್ನು, **ಅಭಜನ್** = ಹೊಂದಿದವೋ, **ಸಂಖ್ಯಾವಂತಃ** = ಜ್ಞಾನಿಗಳು, **ಯಂ** = ಯಾರನ್ನು ಕುರಿತು, **ಅಖಿಲಕಲಾಮೂರ್ತಿಂ** – **ಅಖಿಲ** = ಸಕಲ, **ಕಲಾ** = ಕಲೆಗಳೇ (ವಿದ್ಯೆಗಳೇ), **ಮೂರ್ತಿಂ** = ಮೂರ್ತಿವೆತ್ತು ಬಂದಂತಿರುವರು ಎಂದು, **ಮುಹುಃ ಆಹುಃ** = ಪುನಃ ಪುನಃ ಹೇಳಿರುವರೋ, **ಸಃ** = ಅಂತಹ, **ಉದ್ವೇಲಕೀರ್ತಿಃ** = ಅಪರಿಮಿತವಾದ ಕೀರ್ತಿಯುಳ್ಳ, **ಧೀರಶ್ರೀರಾಘವೇಂದ್ರಃ** = ಜ್ಞಾನಿಗಳಾದ ಶ್ರೀರಾಘವೇಂದ್ರತೀರ್ಥರು, **ನಃ** = ನಮಗೆ, **ಸತತಂ** = ಯಾವಾಗಲೂ / ಪ್ರತಿದಿನವೂ, **ಅವ್ಯಾಹತಂ** = ಅಪ್ರತಿಹತವಾದ, **ಭವ್ಯಂ** = ಕ್ಷೇಮವನ್ನು, **ದಿಶತು** = ಅನುಗ್ರಹಿಸಲಿ.

**ತಾತ್ಪರ್ಯಾರ್ಥ :** ಯಾವ ಶ್ರೀರಾಘವೇಂದ್ರತೀರ್ಥರಿಂದ ರಚಿಸಲ್ಪಟ್ಟ ನಿರ್ದುಷ್ಟವಾದ ಮತ್ತು ಅಜ್ಞಾನವನ್ನು ನಿವಾರಿಸುವಲ್ಲಿ ಸಮರ್ಥವಾದ ಹಾಗೂ ವಿದ್ವಾಂಸರಿಂದ ಸದಾ ಅಪೇಕ್ಷಿಸಲ್ಪಡುವ ಗ್ರಂಥಗಳಿಂದ ಪ್ರವಚನಶೀಲರಾದ ಪ್ರಾಚೀನಾಚಾರ್ಯರ ವಾದಗಳು ಹಾಗೂ ವ್ಯಾಖ್ಯಾನಗಳು ಪ್ರಸಿದ್ಧಿಯನ್ನು ಹೊಂದಿದವೋ, ಯಾರನ್ನು ಜ್ಞಾನಿಗಳು ಅಖಿಲಕಲಾಮೂರ್ತಿಗಳೆಂದೂ, ಅಸದೃಶವಾದ ಕೀರ್ತಿಸಂಪನ್ನರೆಂದೂ ಪುನಃ ಪುನಃ ಸ್ತುತಿಸುತ್ತಾರೋ ಅಂಥ ಧೀರ ಶ್ರೀರಾಘವೇಂದ್ರ-ಗುರುಸಾರ್ವಭೌಮರು ನಮಗೆ ಅಪ್ರತಿಹತವಾದ ಮಂಗಳವನ್ನು ಅನುಗ್ರಹಿಸಲಿ.

**ಗುಣಪ್ರಕಾಶ :** ಈ ಗುರುಗುಣಸ್ತವನವೆಂಬ ಖಂಡಕಾವ್ಯದ ನಾಯಕರಾದ ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರ ಗ್ರಂಥಗಳನ್ನು ಮೂರು ವಿಶೇಷಣಗಳಿಂದ ಮತ್ತು ಗ್ರಂಥಕರ್ತೃಗಳಾದ ಶ್ರೀರಾಯರನ್ನು ಮೂರು ವಿಶೇಷಣಗಳಿಂದ ಇಲ್ಲಿ ಸ್ತುತಿಸಲಾಗಿದೆ.

೧. **ಧೂತಾವದ್ಯಾಃ, ಅವಿದ್ಯಾವಿಘಟನಪಟವಃ,** ಮತ್ತು **ವಿದ್ವದಭ್ಯರ್ಥನೀಯಾಃ, (ಗ್ರಂಥಜಾಲಾಃ)** ಇವು ಗ್ರಂಥಪರವಾದ ಮೂರು ವಿಶೇಷಣಗಳಾಗಿವೆ. ಶ್ರೀರಾಯರ

ಗ್ರಂಥಗಳು ನಿರ್ದುಷ್ಟವಾಗಿವೆ. ಅಜ್ಞಾನವನ್ನು ಪರಿಹರಿಸುವಲ್ಲಿ ಸಮರ್ಥವಾಗಿವೆ (ಅಥವಾ ಮಾಯಾವಾದಗಳನ್ನು ಖಂಡಿಸುವಲ್ಲಿ ಸಮರ್ಥವಾಗಿವೆ) ಮತ್ತು ವಿದ್ವಾಂಸರಿಂದ ಸದಾಕಾಲದಲ್ಲಿಯೂ ಪ್ರಾರ್ಥನೀಯವಾಗಿವೆ ಅಂದರೆ ವಿದ್ವಾಂಸರ ಅಧ್ಯಯನ ಅಧ್ಯಾಪನೆಗಳಿಗೆ ಶ್ರೀರಾಯರ ಗ್ರಂಥಗಳೇ ಬೇಕಾಗುವವು. ಇಲ್ಲಿ ಶ್ರೀರಾಯರ ಅಗಾಧ ಜ್ಞಾನ, ಪ್ರತಿಭಾದಿಗುಣಗಳ ಸ್ತುತಿ ಇದೆ.

೨. ಅಖಿಲಕಲಾಮೂರ್ತಿಃ, ಉದ್ವೇಲಕೀರ್ತಿಃ, ಧೀರಶ್ರೀರಾಘವೇಂದ್ರಃ ಇವು ಶ್ರೀರಾಯರ ಮೂರು ವಿಶೇಷಣಗಳು. ಶ್ರೀರಾಯರು ಎಲ್ಲಾ ವಿದ್ಯೆಗಳೇ ಮೂರ್ತಿವೆತ್ತು ಬಂದಂತಿರುವರು. ಮೇರೆ ಮೀರಿದ ಕೀರ್ತಿಯುಳ್ಳವರು. ಧೀರಶ್ರೀರಾಘವೇಂದ್ರಃ ಎಂಬಲ್ಲಿಯ ಧೀರ ಹಾಗೂ ಶ್ರೀ ಶಬ್ದಗಳಿಂದ ಶ್ರೀರಾಯರು ಧೀರರೂ, ಜ್ಞಾನಿಗಳೂ ಕಾಂತಿಸಂಪನ್ನರೂ ಆಗಿರುವರೆಂಬುದು ಗೊತ್ತಾಗುವದು.

**ಸಃ ಸತತಂ ಅವ್ಯಾಹತಂ ಭವ್ಯಂ ನಃ ದಿಶತು** = ಇಂಥ ಧೀರಶ್ರೀರಾಘವೇಂದ್ರರು ನಮಗೆ ಯಾವಾಗಲೂ ಅಪ್ರತಿಹತವಾದ ಕ್ಷೇಮವನ್ನು ಕೊಡಲಿ ಎಂಬ ಪ್ರಾರ್ಥನೆಯಿಂದ ಶ್ರೀರಾಯರ ಕ್ಷೇಮ ಹಾಗೂ ಮೋಕ್ಷಪ್ರದಾತೃತ್ವವು ವ್ಯಕ್ತವಾಗುತ್ತದೆ.

**೧೧. ಅವತಾರಿಕಾ :** ಆಶ್ರಮಗುರುಗಳೂ ವಿದ್ಯಾಗುರುಗಳೂ ಆದ ಶ್ರೀಉಪೇಂದ್ರ-ತೀರ್ಥರನ್ನು ಆಶ್ರಯಿಸುವುದಾಗಿ ಹೇಳುತ್ತ ಗುರುಗಳನ್ನು ಸ್ತುತಿಸುತ್ತಾರೆ.

**ಯೇ ರಾಮವ್ಯಾಸಪಾದಪ್ರಣಿಹಿತಮನಸೋ ಮಧ್ವತಂತ್ರಪ್ರತಿಷ್ಠಾ-**
**ಧುರ್ಯಾಮರ್ಯಾದಸಂವಿತ್ಸುಮಹಿತಸುಮತೀಂದ್ರಾರ್ಯಶಿಷ್ಯಾಗ್ರಗಣ್ಯಾಃ ।**
**ನಿತ್ಯತ್ರಯ್ಯಂತಚಿಂತಾಪರಿಣತವಿಶದಾಶೇಷತತ್ತ್ವಾವಬೋಧ-**
**ಪ್ರಖ್ಯಾತಾನ್ ತಾನುಪೇಂದ್ರವ್ರತಿವಿಬುಧಮಣೀನ್ ದೇಶಿಕಾನಾಶ್ರಯೇಽಹಮ್ ॥೧೧॥**

**ಅನ್ವಯಾರ್ಥ : ಯೇ** = ಯಾರು ಸದಾ, **ರಾಮವ್ಯಾಸಪಾದಪ್ರಣಿಹಿತಮನಸಃ** – **ರಾಮವ್ಯಾಸ** = ಮೂಲರಘುಪತಿ ವೇದವ್ಯಾಸರ, **ಪಾದ** = ಪಾದಕಮಲಗಳಲ್ಲಿ, **ಪ್ರಣಿಹಿತ** = ಇಡಲ್ಪಟ್ಟ, **ಮನಸಃ** = ಮನಸ್ಸುಳ್ಳವರಾಗಿರುವರೋ, (ಉಪೇಂದ್ರತೀರ್ಥರು), **ಮಧ್ವತಂತ್ರಪ್ರತಿಷ್ಠಾಧುರ್ಯಾಮರ್ಯಾದಸಂವಿತ್ಸುಮಹಿತಸುಮತೀಂದ್ರಾರ್ಯಶಿಷ್ಯಾಗ್ರ-ಗಣ್ಯಾಃ** – **ಮಧ್ವತಂತ್ರ** = ಮಧ್ವಸಿದ್ಧಾಂತದ, **ಪ್ರತಿಷ್ಠಾ** = ಸ್ಥಾಪನೆಯಲ್ಲಿ, **ಧುರ್ಯಾ** = ಸಮರ್ಥವಾದ (ಧುರೀಣವಾದ) ಹಾಗೂ **ಅಮರ್ಯಾದ** = ಅಪಾರವಾದ, **ಸಂವಿತ್** = ಜ್ಞಾನದಿಂದ, **ಸುಮಹಿತ** = ಸುಪೂಜ್ಯರಾದ, **ಸುಮತೀಂದ್ರಾರ್ಯ** = ಶ್ರೀಸುಮತೀಂದ್ರ-ತೀರ್ಥರ, **ಶಿಷ್ಯಾಗ್ರಗಣ್ಯಾಃ** = ಅನೇಕ ಶಿಷ್ಯರಲ್ಲಿ ಅಗ್ರಗಣ್ಯರಾಗಿರುವರೋ (ಶ್ರೀಉಪೇಂದ್ರ-ತೀರ್ಥರು), **ತಾನ್** = ಅಂತಹ, **ನಿತ್ಯತ್ರಯ್ಯಂತಚಿಂತಾಪರಿಣತವಿಶದಾಶೇಷತತ್ತ್ವಾವ-**

**ಬೋಧಪ್ರಖ್ಯಾತಾನ್** – **ನಿತ್ಯ** = ಸದಾಕಾಲದಲ್ಲಿಯೂ, **ತ್ರಯ್ಯಂತಚಿಂತಾ** = ವೇದಾಂತ (ವೇದೋಪನಿಷತ್ತುಗಳ) ಚಿಂತನೆಯಿಂದ, **ಪರಿಣತ** = ಪರಿಪಕ್ವವೂ, **ವಿಶದ** = ನಿರ್ಮಲವೂ ಆದ, **ಅಶೇಷತತ್ತ್ವ** = ಅಶೇಷತತ್ತ್ವಗಳ, **ಅವಬೋಧ** = ಜ್ಞಾನದಿಂದ, **ಪ್ರಖ್ಯಾತಾನ್** = ಪ್ರಸಿದ್ಧರಾದ, **ದೇಶಿಕಾನ್** = ನಮ್ಮ ಗುರುವರ್ಯರಾದ, **ಉಪೇಂದ್ರವ್ರತಿವಿಬುಧಮಣೀನ್** = ಶ್ರೀಉಪೇಂದ್ರತೀರ್ಥವ್ರತಿಗಳೆಂಬ ಜ್ಞಾನಿಶ್ರೇಷ್ಠರನ್ನು, **ಅಹಂ** = ನಾನು, **ಆಶ್ರಯೇ** = ಆಶ್ರಯಿಸುತ್ತೇನೆ.

**ತಾತ್ಪರ್ಯಾರ್ಥ** : ಶ್ರೀಮನ್ಮೂಲರಘುಪತಿ ವೇದವ್ಯಾಸರ ಪಾದಗಳನ್ನೇ ಸದಾ ಧ್ಯಾನಿಸುತ್ತಿರುವವರಾದ, ಮಧ್ವಸಿದ್ಧಾಂತದ ಪ್ರತಿಷ್ಠಾಪನೆಯಲ್ಲಿ ಸಮರ್ಥವಾದ ಅಪಾರಜ್ಞಾನದಿಂದ ಸರ್ವತ್ರ ಪೂಜಿತರಾದ ಶ್ರೀಸುಮತೀಂದ್ರತೀರ್ಥರ ಶಿಷ್ಯರಲ್ಲಿ ಅಗ್ರಗಣ್ಯರಾದ, ನಿತ್ಯದಲ್ಲೂ ವೇದೋಪನಿಷತ್ತುಗಳ ಚಿಂತನೆಯಿಂದ ಪಕ್ವವೂ ನಿರ್ಮಲವೂ ಆದ ಅಶೇಷತತ್ತ್ವಜ್ಞಾನಗಳಿಂದ ಪ್ರಸಿದ್ಧರಾದ, ನಮ್ಮ ಗುರುವರ್ಯರಾದ, ಶ್ರೀಮದುಪೇಂದ್ರತೀರ್ಥರೆಂಬ ವ್ರತಿಶ್ರೇಷ್ಠರನ್ನು ನಾನು ಆಶ್ರಯಿಸುತ್ತೇನೆ.

**§ ಶ್ರೀವಸುಧೇಂದ್ರತೀರ್ಥರ ಗುರುಗುಣಸ್ತವನದ ಪಾಠದಂತೆ ಈ ಶ್ಲೋಕ ಮತ್ತು ಅನ್ವಯಾರ್ಥವು ಕೆಳಗಿನಂತಿದೆ –**

**ಯೇ ರಾಮವ್ಯಾಸಪಾದಪ್ರಣಿಹಿತಮನಸೋ ಮಧ್ವತಂತ್ರಪ್ರತಿಷ್ಠಾ-**
**ಧುರ್ಯಾಮರ್ಯಾದಬೋಧಾಃ ಫಣಿಪತಿಭಣಿತಿಪ್ರೌಢಿಕೇಲಿಪ್ರತೋಲೀ ।।**
**ಮೀಮಾಂಸಾತರ್ಕಜನ್ಮಕ್ಷಿತಿರಥ ಕವಿತಾರೀತಿವರ್ತ್ಮಪ್ರತೀತ-**
**ಪ್ರಾಗಲ್ಭಾಸ್ತಾನುಪೇಂದ್ರವ್ರತಿವಿಬುಧಮಣೀನ್ ದೈಶಿಕಾನಾಶ್ರಯೇಽಹಮ್ ।।**

**ಅನ್ವಯಾರ್ಥ** : **ಯೇ** = ಯಾರು, **ಮಧ್ವತಂತ್ರಪ್ರತಿಷ್ಠಾಧುರ್ಯಾಃ** = ಮಧ್ವಸಿದ್ಧಾಂತ ಪ್ರತಿಷ್ಠಾಪನೆಯ ಧುರೀಣತೆಯನ್ನು (ಹೊಣೆಗಾರಿಕೆ) ಪಡೆದಿರುವರೋ, (ವೇದಾಂತಶಾಸ್ತ್ರದಲ್ಲಿ ಪರಿಣತರೋ), **ಅಮರ್ಯಾದಬೋಧಾಃ** = ಅಪಾರವಾದ ಜ್ಞಾನವುಳ್ಳವರೋ, **ಫಣಿಪತಿಭಣಿತಿಪ್ರೌಢಿಕೇಲಿಪ್ರತೋಲೀ** – **ಫಣಿಪತಿ** = ಸಹಸ್ರ ಫಣೆಗಳುಳ್ಳ ಶೇಷದೇವರ, **ಭಣಿತಿ** = ಉಕ್ತಿಗಳ, **ಪ್ರೌಢಿ** = ಪ್ರೌಢಿಮೆಯ, **ಕೇಲಿ** = ಲೀಲೆಗೆ, **ಪ್ರತೋಲೀ** = ಮಾರ್ಗದಂತಿರುವರೋ (ಅಂದರೆ ಯಾರು ಶೇಷಾಂಶರಾದ ಪತಂಜಲಿ ಮುನಿಗಳು ಬರೆದ ಪಾಣಿನಿಯ ಅಷ್ಟಾಧ್ಯಾಯೀಸೂತ್ರಭಾಷ್ಯದಲ್ಲಿ ಪರಿಣತಿಯನ್ನು ಪಡೆದವರಾಗಿರುವರೋ ಅಂದರೆ ವ್ಯಾಕರಣಶಾಸ್ತ್ರದಲ್ಲಿ ಪರಿಣತರೋ), **ಮೀಮಾಂಸಾತರ್ಕಜನ್ಮಕ್ಷಿತಿಃ** = ಮೀಮಾಂಸಾ ಮತ್ತು ತರ್ಕಶಾಸ್ತ್ರಗಳಿಗೆ ಉಗಮಸ್ಥಾನವಾಗಿರುವರೋ ಅರ್ಥಾತ್ ತವರು ಮನೆಯಂತಿರುವರೋ (ಅಂದರೆ ಮೀಮಾಂಸಾ ಮತ್ತು ತರ್ಕಶಾಸ್ತ್ರಗಳಲ್ಲಿ

ಪರಿಣತರೋ), ಅಥ ಕವಿತಾರೀತಿವರ್ತ್ಮಪ್ರತೀತಪ್ರಾಗಲ್ಭ್ಯಾನ್ – ಕವಿತಾರೀತಿ = ಕಾವ್ಯರಚನೆಯ, ವರ್ತ್ಮ = ಮಾರ್ಗದಿಂದ, ಪ್ರತೀತ = ತಿಳಿಯಲ್ಪಟ್ಟ, ಪ್ರಾಗಲ್ಭ್ಯಾನ್ = ಸುಪ್ರಸಿದ್ಧ ಚಾತುರ್ಯವುಳ್ಳವರೋ (ಕಾವ್ಯರಚನೆಯಲ್ಲಿ ಚತುರರೋ), ತಾನ್ = ಅಂತಹ, ಉಪೇಂದ್ರವ್ರತಿವಿಬುಧಮಣೀನ್ = ಶ್ರೀಉಪೇಂದ್ರತೀರ್ಥರೆಂಬ ವ್ರತಿಶ್ರೇಷ್ಠ-ರನ್ನೂ ಹಾಗೂ ಜ್ಞಾನಿಶ್ರೇಷ್ಠರನ್ನೂ, ದೈಶಿಕಾನ್ = ಉಪದೇಶಕ ಗುರುಗಳನ್ನೂ, ಅಹಂ ಆಶ್ರಯೇ = ನಾನು ಆಶ್ರಯಿಸುತ್ತೇನೆ.

(ಶ್ರೀಉಪೇಂದ್ರತೀರ್ಥರು ನ್ಯಾಯ, ಮೀಮಾಂಸಾ, ವ್ಯಾಕರಣ, ವೇದಾಂತ ಎಂಬ ಚತುಶ್ಶಾಸ್ತ್ರಗಳಲ್ಲಿ ಅತ್ಯಂತ ಪರಿಣತರೂ ಕಾವ್ಯರಚನೆಯಲ್ಲಿ ಚತುರರೂ ಆಗಿದ್ದ-ರೆಂಬುದು ಈ ಶ್ಲೋಕದ ವಿಶೇಷಣಗಳಿಂದ ವ್ಯಕ್ತವಾಗುವದು).

**ಗುಣಪ್ರಕಾಶ** : ಈ ಶ್ಲೋಕದಲ್ಲಿ ಶ್ರೀವಾದೀಂದ್ರತೀರ್ಥರ ಆಶ್ರಮ ಗುರುಗಳಾದ ಶ್ರೀಉಪೇಂದ್ರತೀರ್ಥರ ಗುಣವರ್ಣನೆಯೊಂದಿಗೆ ಪರಮಗುರುಗಳಾದ ಶ್ರೀಸುಮತೀಂದ್ರತೀರ್ಥರ ಗುಣಸ್ತವನವನ್ನೂ ಕಾಣಬಹುದು.

**'ಮಧ್ವತಂತ್ರಪ್ರತಿಷ್ಠಾಧುರ್ಯಾಮರ್ಯಾದಸಂವಿತ್ಸುಮಹಿತಸುಮತೀಂದ್ರಾರ್ಯ-ಶಿಷ್ಯಾಗ್ರಗಣ್ಯಾಃ'** ಎಂಬುದು ಶ್ರೀಉಪೇಂದ್ರತೀರ್ಥರ ಸ್ತುತಿಪರವಾದ ವಿಶೇಷಣ. ಇದರೊಳಗಿನ **'ಮಧ್ವತಂತ್ರಪ್ರತಿಷ್ಠಾಧುರ್ಯಾಮರ್ಯಾದಸಂವಿತ್ಸುಮಹಿತಸುಮತೀಂ-ದ್ರಾರ್ಯ...'** ಎಂಬುದು ಶ್ರೀಸುಮತೀಂದ್ರಾರ್ಯರ ಸ್ತುತಿಪರವಾದ ವಿಶೇಷಣ ಭಾಗವು. ಇದರ ಅರ್ಥ – ಶ್ರೀಸುಮತೀಂದ್ರತೀರ್ಥರು ಶ್ರೀಮಧ್ವಾಚಾರ್ಯರ ಸಿದ್ಧಾಂತ ಪ್ರತಿಷ್ಠಾಪನೆಯಲ್ಲಿ ಸಮರ್ಥವಾದ ಅಪಾರಜ್ಞಾನದಿಂದ ಸರ್ವತ್ರ ಚೆನ್ನಾಗಿ ಪೂಜಿತರಾದವರು. ಇಲ್ಲಿ ಶ್ರೀಸುಮತೀಂದ್ರತೀರ್ಥರ ಜ್ಞಾನಗುಣದ ಸ್ತವನವಿದೆ. ಶ್ರೀಸುಮತೀಂದ್ರತೀರ್ಥರ ಅಗಾಧ ತತ್ತ್ವಜ್ಞಾನವನ್ನು ಕಂಡು ರಾಜಮಹಾರಾಜರುಗಳು, ಪರವಾದಿ ವಿದ್ವಾಂಸರು, ಶಿಷ್ಯರು ಇವರೇ ಮೊದಲಾದವರಿಂದ ಅವರು ಮುಕ್ತಕಂಠದಿಂದ ಪ್ರಶಂಸಿಸಲ್ಪಟ್ಟು ಪೂಜಿತರಾಗಿದ್ದರು.

**ಶ್ರೀಉಪೇಂದ್ರತೀರ್ಥರ ಗುಣವರ್ಣನೆ : ರಾಮವ್ಯಾಸಪ್ರಣಿಹಿತಮನಸಃ** = ಶ್ರೀಉಪೇಂದ್ರತೀರ್ಥರು ಶ್ರೀಮೂಲರಾಮ ಮತ್ತು ಶ್ರೀವೇದವ್ಯಾಸ ದೇವರ ಚರಣಕಮಲ-ಗಳನ್ನು ಸದಾ ಧ್ಯಾನಿಸುವವರಾಗಿದ್ದರು. ಇಲ್ಲಿ ಗುರುಗಳ 'ಪರಿಭಕ್ತಿ' ಗುಣಸ್ತುತಿ ಇದೆ.

**ಮಧ್ವತಂತ್ರಪ್ರತಿಷ್ಠಾಧುರ್ಯಾಮರ್ಯಾದಸಂವಿತ್ಸುಮಹಿತಸುಮತೀಂದ್ರಾರ್ಯ-ಶಿಷ್ಯಾಗ್ರಗಣ್ಯಾಃ** = ಶ್ರೀಮಧ್ವಾಚಾರ್ಯರ ಸಿದ್ಧಾಂತಪ್ರತಿಷ್ಠಾಪನೆಯಲ್ಲಿ ಸಮರ್ಥವಾದ ಜ್ಞಾನವುಳ್ಳವರಾಗಿದ್ದರಿಂದ ಸರ್ವರಿಂದಲೂ ಪೂಜಿತರಾದ ಶ್ರೀಸುಮತೀಂದ್ರತೀರ್ಥರ

ಶಿಷ್ಯರಲ್ಲಿ ಶ್ರೀಉಪೇಂದ್ರತೀರ್ಥರು ಅಗ್ರಗಣ್ಯರಾದವರಾಗಿದ್ದರು. ಇಲ್ಲಿ ಶ್ರೀಉಪೇಂದ್ರ-ತೀರ್ಥರ ಗುರುಭಕ್ತಿ ಗುಣದ ಸ್ತುತಿಯನ್ನು ಕಾಣಬಹುದು.

ಶ್ರೀಸುಮತೀಂದ್ರತೀರ್ಥರ ಅನೇಕ ಶಿಷ್ಯರಲ್ಲಿ ಉಪೇಂದ್ರತೀರ್ಥರು ಅಗ್ರಗಣ್ಯ-ರಾಗಿರಬೇಕಾದರೆ ಇವರು ಇತರೆಲ್ಲರಿಗಿಂತ ಅತಿ ಮೇಧಾವಿಗಳಾಗಿರಬೇಕು, ಭಕ್ತಿಯಿಂದ ಅಧಿಕವಾಗಿ ಗುರುಶೂಶ್ರೂಷಾದಿಗಳನ್ನು ಮಾಡುತ್ತಿರಬೇಕು. ಈ ರೀತಿ ವಿಚಾರಿಸಿದಾಗ ಶ್ರೀಉಪೇಂದ್ರತೀರ್ಥರ ಜ್ಞಾನ, ಪ್ರತಿಭಾ ಹಾಗೂ ಗುರುಶುಶ್ರೂಷಾದಿ (ಭಕ್ತಿ)ಗುಣಗಳ ವರ್ಣನೆಯೂ ಈ ವಿಶೇಷಣದಿಂದ ಸೂಚಿತವಾಗುವದೆಂದು ತಿಳಿಯಬಹುದು.

**'ನಿತ್ಯತ್ರಯ್ಯಂತಚಿಂತಾಪರಿಣತವಿಶದಾಶೇಷತತ್ತ್ವಾವಬೋಧಪ್ರಖ್ಯಾತಾಃ'** = ಯಾವಾಗಲೂ ವೇದಾಂತಗಳೆಂಬ ಉಪನಿಷತ್ತುಗಳಲ್ಲಿ ಪ್ರತಿಪಾದಿತವಾದ ತತ್ತ್ವಗಳ ಚಿಂತನೆಯಿಂದ ಪಳಗಿದ ನಿರ್ಮಲವಾದ ಅಶೇಷತತ್ತ್ವ ಜ್ಞಾನದಿಂದ ಸುಪ್ರಸಿದ್ಧರಾದವರು. ಇಲ್ಲಿ ಗುರುಗಳ 'ಜ್ಞಾನ' ಗುಣದ್ದೇ ಸ್ತವನ.

**ಉಪೇಂದ್ರವ್ರತಿವಿಬುಧಮಣಯಃ** = ಉಪೇಂದ್ರತೀರ್ಥರು ವ್ರತಿಶ್ರೇಷ್ಠರೂ ಜ್ಞಾನಿಶ್ರೇಷ್ಠರೂ ಆಗಿರುವವರು.

ಇಲ್ಲಿ ವ್ರತೀ ಅಂದರೆ ವ್ರತವುಳ್ಳವರು. **"ನಿಯಮೋ ವ್ರತಮಸ್ತ್ರೀ ತಚ್ಚೋಪವಾಸಾದಿ ಪುಣ್ಯಕಂ ||"** – *ಅಮರ ೨-೪೪೨* ಮತ್ತು **'ವ್ರತಂ ಸಂಯಮಃ'** ಎಂದು ಶಬ್ದರತ್ನಾವಲಿ ಈ ಕೋಶಾನುಸಾರ ವ್ರತ ಎಂದರೆ ನಿಯಮ ಮತ್ತು ಸಂಯಮ. ನಿಯಮ ಮತ್ತು ಸಂಯಮವುಳ್ಳವರು ವ್ರತಿಗಳು.

**ಭೈಕ್ಷೇಣ ವರ್ತಯೇನ್ನಿತ್ಯಂ ನೈಕಾನ್ನಾದೀ ಭವೇದ್ವ್ರತೀ |**
**ಭೈಕ್ಷೇಣ ವ್ರತಿನೋ ವೃತ್ತಿರುಪವಾಸಸಮಾ ಸ್ಮೃತಾ ||** – *ಮನುಸ್ಮೃತಿ ೨-೧೮೮.*

ಮನುಸ್ಮೃತ್ಯನುಸಾರ ಅನ್ನವನ್ನು ಒಬ್ಬರಿಂದಲೇ ಸ್ವೀಕರಿಸದೇ ಅನೇಕ ಜನರಿಂದ ಭೈಕ್ಷವೃತ್ತಿಯಿಂದ ಸಂಗ್ರಹಿಸಬೇಕು. ಹೀಗಿರುವವನು ವ್ರತೀ. ಇಂಥ ಭಿಕ್ಷಾನ್ನವನ್ನು ಭುಂಜಿಸಿದರೂ ಅದು ಉಪವಾಸಕ್ಕೆ ಸಮವೆಂದು ತಿಳಿಯಲ್ಪಡುತ್ತದೆ. ವ್ರತೀ ಎಂದರೆ ತಪಸ್ವೀ, ವ್ರತಧಾರೀ ಎಂದೂ ಕೋಶವಿದೆ.

ಈ ಮೇಲಿನ ವಿವರಣೆಯ ಹಿನ್ನೆಲೆಯಲ್ಲಿ ನೋಡಿದಾಗ ಶ್ರೀಉಪೇಂದ್ರತೀರ್ಥರ ಸಂಯಮ ಗುಣ, ತಪೋಗುಣಗಳ ವರ್ಣನೆಯು ಇಲ್ಲಿದೆಯೆಂದು ತಿಳಿದುಬರುವದು.

**ದೇಶಿಕಾಃ** = ಉಪದೇಶಕಾಃ | ಉಪೇಂದ್ರತೀರ್ಥರು ಶಿಷ್ಯರಿಗೆ ತತ್ತ್ವೋಪದೇಶ ಮಾಡುವವರಾಗಿದ್ದರು. ಉಪದೇಶಕ್ಕೆ ಶಿಷ್ಯೋದ್ಧಾರವಾಗಲೆಂಬ ಶಿಷ್ಯರ ಮೇಲಿನ ಕೃಪೆಯೇ ಮುಖ್ಯ ಕಾರಣವಾಗಿರುವುದರಿಂದ ಶ್ರೀಉಪೇಂದ್ರತೀರ್ಥರ ಕೃಪಾಗುಣವೂ ಸೂಚಿತವಾಗಿದೆ.

ಶ್ರೀವಸುಧೇಂದ್ರತೀರ್ಥರ ವ್ಯಾಖ್ಯಾನದಲ್ಲಿ ಈ ೧೧ನೆಯ ಶ್ಲೋಕವು ಬಹಳ ಪಾಠಾಂತರಗಳಿಂದ ಕೂಡಿದೆ. ಅವರ ಪಾಠಾನುಸಾರ ನೋಡಿದಾಗ ಶ್ರೀಉಪೇಂದ್ರತೀರ್ಥರ ಪ್ರವಚನಕೌಶಲ, ಮೀಮಾಂಸಾತರ್ಕಶಾಸ್ತ್ರ ಕೌಶಲ, ಚಾತುರ್ಯ ಜ್ಞಾನಾದಿ ಗುಣಗಳ ಸ್ತವನವು ಕಂಡುಬರುತ್ತದೆ.

ಇನ್ನು ಮುಂದಿನ ೧೨ನೆಯ ಶ್ಲೋಕದಿಂದ ೩೭ನೆಯ ಶ್ಲೋಕದವರೆಗೆ ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರ ಗ್ರಂಥಗಳನ್ನು ಸ್ತುತಿಸುತ್ತ ಅವರ ಗುಣಸ್ತವನವನ್ನೂ ಮಾಡಲಾಗುವದು.

**೧೨. ಅವತಾರಿಕಾ** : ಶ್ರೀರಾಘವೇಂದ್ರರ ಸ್ತವನವು ಪುರುಷಾರ್ಥಕ್ಕೆ ಸುಲಭ-ವಾದ ಸಾಧನವೆಂದು ಸ್ಥಾಪಿಸುತ್ತಾರೆ.

**ಯೋಗೋ ಯಃ ಕರ್ಮನಾಮಾ ಕವಿಭಿರಭಿಹಿತೋ ಯಶ್ಚ ವಿಜ್ಞಾನಸಂಜ್ಞಃ**
**ಶಕ್ತೋ ನಾಸಿದ್ಧಕಾಯಸ್ತನುಮತಿರನಯೋಸ್ತಾವದಾವರ್ಜನೇಽಹಮ್ ।**
**ಯಶ್ಚೋಪಾಯೈರುಪೇಯಃ ಸ್ಥಿರಫಲವಿಧಯೇ ದೈಶಿಕಸ್ಯ ಪ್ರಸಾದಃ**
**ತಸ್ಮೈ ತಸ್ಯ ಸ್ತುವೀಯಾನಿಶಮಪಿ ಚರಿತಂ ರಾಘವೇಂದ್ರವ್ರತೀಂದೋಃ ॥ ೧೨ ॥**

**ಅನ್ವಯಾರ್ಥ** : **ಯಃ** = ಯಾವ, **ಕರ್ಮನಾಮಾ** = ಕರ್ಮಯೋಗವೆಂಬ ಹೆಸರಿನ, **ಯೋಗಃ** = ಯೋಗವು (ಮೋಕ್ಷಸಾಧನೋಪಾಯವು), **ಚ** = ಮತ್ತು, **ವಿಜ್ಞಾನಸಂಜ್ಞಃ** = ವಿಜ್ಞಾನಯೋಗವೆಂಬ ಹೆಸರಿನ, **ಯೋಗಃ** = ಮೋಕ್ಷಸಾಧನೋ-ಪಾಯವೂ, **ಕವಿಭಿಃ** = ಜ್ಞಾನಿಗಳಿಂದ, **ಅಭಿಹಿತಃ** = ಹೇಳಲ್ಪಟ್ಟಿದೆಯೋ, **ಅನಯೋಃ** = ಈ ಎರಡು ಉಪಾಯಗಳ, **ಆವರ್ಜನೇ ತಾವತ್** = ಸಂಪಾದನೆಯಲ್ಲಂತೂ, **ಅಸಿದ್ಧಕಾಯಃ** = ರೋಗಾದ್ಯುಪದ್ರವಗಳಿಂದ ಪೀಡಿತವಾದ ಶರೀರವುಳ್ಳ ಮತ್ತು, **ತನುಮತಿಃ** = ಅಲ್ಪಮತಿಯಾದ, **ಅಹಂ** = ನಾನು, **ನ ಶಕ್ತಃ** = ಸಮರ್ಥನಲ್ಲ. **ಸ್ಥಿರಫಲವಿಧಯೇ** = ಸ್ಥಿರಫಲವಾದ ಮೋಕ್ಷಪ್ರಾಪ್ತಿಗಾಗಿ, **ದೇಶಿಕಸ್ಯ** = ಯಾವ ಗುರುಗಳ, **ಯಶ್ಚ ಪ್ರಸಾದಃ** = ಅನುಗ್ರಹವೆಂಬ ಯಾವ ಪ್ರಸಾದವು, **ಉಪಾಯೈಃ** = ಸಾಧನಗಳಿಂದ, **ಉಪೇಯಃ** = ಅತ್ಯವಶ್ಯವಾಗಿ ದೊರಕಿಸಲ್ಪಡಬೇಕೋ, **ತಸ್ಮೈ** = ಆ ಗುರ್ವನುಗ್ರಹಪ್ರಾಪ್ತಿಗಾಗಿ, **ತಸ್ಯ ರಾಘವೇಂದ್ರವ್ರತೀಂದೋಃ** = ಮಹಾಮಹಿಮರಾದ ಆ ಶ್ರೀರಾಘವೇಂದ್ರತೀರ್ಥ-ಯತಿಚಂದ್ರರ, **ಚರಿತಂ** = ಚರಿತ್ರೆಯನ್ನು, **ಅನಿಶಮಪಿ** = ಸದಾಕಾಲದಲ್ಲಿಯೂ, **ಸ್ತುವೀಯ** = ಸ್ತುತಿಸುವೆನು.

**ತಾತ್ಪರ್ಯಾರ್ಥ** : ನಿವೃತ್ತಕರ್ಮಾನುಷ್ಠಾನವೆಂಬ ಯಾವ ಮೋಕ್ಷೋಪಾಯವು ಮತ್ತು ಶ್ರವಣಮನನನಿಧಿಧ್ಯಾಸನರೂಪ ಜಿಜ್ಞಾಸಾಜನ್ಯ ಅಪರೋಕ್ಷಜ್ಞಾನರೂಪವಾದ

ಯಾವ ಮೋಕ್ಷೋಪಾಯವು ಜ್ಞಾನಿಗಳಿಂದ ಹೇಳಲ್ಪಟ್ಟಿವೆಯೋ ಇವುಗಳನ್ನು ಸಂಪಾದಿಸಲು ಅಸಿದ್ಧಕಾಯನೂ, ಅಲ್ಪಮತಿಯೂ ಆದ ನಾನು ಸಮರ್ಥನಲ್ಲ. ಸ್ಥಿರಫಲವಾದ ಮೋಕ್ಷಸಿದ್ಧಿಗೆ ಅತ್ಯವಶ್ಯವಾದ ಗುರುಪ್ರಸಾದವು ಗುರುಭಕ್ತಿರೂಪ ಸುಲಭ ಉಪಾಯಗಳಿಂದ ದೊರಕಿಸಲು ಸಾಧ್ಯವಿರುವುದರಿಂದ ಆ ಗುರುಪ್ರಸಾದ ಪ್ರಾಪ್ತಿಗಾಗಿ ಶ್ರೀರಾಘವೇಂದ್ರಯತಿಸಾರ್ವಭೌಮರ ಚರಿತೆಯನ್ನು, ಮಹಿಮೆಗಳನ್ನು ಹಾಗೂ ಅನಿತರಸಾಧಾರಣ ಗ್ರಂಥಪ್ರಣಯನಾದಿ ಮಾಹಾತ್ಮ್ಯಗಳನ್ನು ನಾನು ಯಾವಾಗಲೂ ಸ್ತುತಿಸುತ್ತೇನೆ.

**ಗುಣಪ್ರಕಾಶ :** ಈ ಶ್ಲೋಕದಲ್ಲಿ ಶ್ರೀವಾದೀಂದ್ರತೀರ್ಥರು ಮುಮುಕ್ಷುಗಳಾದವರಿಗೆ ಗುರುಪ್ರಸಾದವು ಅತ್ಯವಶ್ಯವೆಂದು ಗುರುಪ್ರಸಾದದ ಮಹತ್ವವನ್ನು ಮೊದಲು ತಿಳಿಸುತ್ತ ಗುರುಪ್ರಸಾದವನ್ನು ಪಡೆಯುವುದಕ್ಕಾಗಿಯೇ ತಾವು ಶ್ರೀರಾಘವೇಂದ್ರತೀರ್ಥರ ಗ್ರಂಥಪ್ರಣಯನಾದಿ ಮಹಾತ್ಮೆಯನ್ನು ತಿಳಿಸುವುದಾಗಿ ಹೇಳುತ್ತಾರೆ.

ಇಲ್ಲಿ **ಶ್ರೀರಾಘವೇಂದ್ರವ್ರತೀಂದುಃ** ಎಂಬ ಪದವು ಶ್ರೀರಾಯರ ಬಗ್ಗೆ ಅನೇಕ ವಿಷಯಗಳನ್ನು ತಿಳಿಸುತ್ತದೆ. **ಶ್ರೀರಾಘವೇಂದ್ರವ್ರತೀಂದುಃ** ಎಂದರೆ ಶ್ರೀರಾಘವೇಂದ್ರರೆಂಬ ವ್ರತಿಶ್ರೇಷ್ಠರು ಅಥವಾ ಶ್ರೀರಾಘವೇಂದ್ರವ್ರತಿಗಳೆಂಬ ಚಂದ್ರ ಅಥವಾ ವಾಯು ಎಂದರ್ಥ. "ಅಘಂ ದ್ರಾವಯತೇ ಯಸ್ಮಾತ್ ವೇಂಕಾರೋ ವಾಂಛಿತಪ್ರದಃ" ಎಂದು 'ಶ್ರೀರಾಘವೇಂದ್ರ' ಪದದ ನಿರ್ವಚನದಂತೆ ಶ್ರೀರಾಯರು ಸಜ್ಜನರ ಪಾಪಗಳನ್ನು ಕಳೆದು ಇಷ್ಟಾರ್ಥಪ್ರದರು ಎಂದು ತಿಳಿಯುವದು. ಇದರಿಂದ ಅವರ ದಯಾಗುಣದ ಸ್ತವನವೂ, ವ್ರತೀ ಎಂದರೆ ತಪಸ್ವೀ, ಸಂಯಮೀ ಎಂದಿರುವುದರಿಂದ ಶ್ರೀರಾಯರ ತಪೋಗುಣ ಹಾಗೂ ಸಂಯಮಗುಣಗಳ ಸ್ತವನವೂ, ಇಂದುಃ ಎಂಬ ಪದದಿಂದ ಅವರ ಆಹ್ಲಾದಕತ್ವ ಧರ್ಮದ ಸ್ತವನವೂ ಇಲ್ಲಿದೆಯೆಂದು ತಿಳಿಯಬಹುದು.

## ೧೨ನೆಯ ಶ್ಲೋಕದ ಮತ್ತು "ಶ್ರೀರಾಘವೇಂದ್ರವ್ರತೀಂದುಃ" ಈ ಪದದ ವಿಶೇಷಾರ್ಥಗಳು :

ಎಲ್ಲರೂ ಈ ೧೨ ನೆಯ ಶ್ಲೋಕದ ಅರ್ಥವನ್ನು ಹೀಗೆ ಮಾಡಿದ್ದು ಕಂಡುಬರುತ್ತದೆ. ಇಲ್ಲಿ ಭಾವಾರ್ಥವನ್ನು ಮಾತ್ರ ಕೊಡಲಾಗಿದೆ – "ಶ್ರೀವಾದೀಂದ್ರತೀರ್ಥರು ಹೇಳುತ್ತಾರೆ ಏನೆಂದರೆ – ಜ್ಞಾನಿಗಳಾದವರು ಮೋಕ್ಷಪ್ರಾಪ್ತಿಗೆ ಕರ್ಮಯೋಗ ಮತ್ತು ಜ್ಞಾನಯೋಗ ಎಂಬ ಎರಡು ಉಪಾಯಗಳನ್ನೇನೋ ತಿಳಿಸಿದ್ದಾರೆ. ಕರ್ಮಯೋಗದಿಂದ ಮೋಕ್ಷಸಂಪಾದನೆ ಮಾಡಬೇಕಾದರೆ ಶ್ರೇಷ್ಠವಾದ ಸಿದ್ಧಿಬೇಕು, ದೇಹವು ರೋಗರುಜಿನುಗಳಿಂದ ಮುಕ್ತವಾಗಿ ಸುದೃಢವಾಗಿರಬೇಕು. ಆದರೆ ನಾವಾದರೋ ಯಾವ ಸಿದ್ಧಿಯೂ ಇಲ್ಲದವರು, ಹಾಗೂ ನಮ್ಮ ದೇಹವು ಸುದೃಢವೂ

ರೋಗಮುಕ್ತವೂ ಆಗಿರುವದಿಲ್ಲ. ಇಂಥ ಅವಸ್ಥೆಯಲ್ಲಿ ಕರ್ಮಯೋಗದಿಂದ ನಾವು ಮೋಕ್ಷವನ್ನು ಪಡೆಯಲಾರೆವು. ಇನ್ನು ಜ್ಞಾನಯೋಗದಿಂದ ಮುಕ್ತಿಯನ್ನು ಸಾಧಿಸಬೇಕೆಂದರೆ (ವಿದ್ಯಯಾಽಮೃತಮಶ್ನುತೇ, ತಮೇವಂ ವಿದ್ವಾನಮೃತ ಇಹ ಭವತಿ ಜ್ಞಾನೇನೈವ ಪರಂ ಪದಂ ಇತ್ಯಾದಿ ಶ್ರುತಿ ಸ್ಮೃತಿ ಪ್ರಮಾಣಗಳು) ಅಗಾಧವಾದ ಬುದ್ಧಿಮತ್ತೆ, ಪ್ರತಿಭೆಗಳು ಬೇಕು. ಆದರೆ ಅಲ್ಪಮತಿಗಳಾದ (= ತನುಮತಿ) ನಮಗೆ ಜ್ಞಾನಯೋಗವೂ ಅಸಾಧ್ಯವಾದ ಉಪಾಯವಾಗಿದೆ. ಹೀಗೆ ಕರ್ಮಯೋಗ ಹಾಗೂ ಜ್ಞಾನಯೋಗಗಳೆಂಬ ಎರಡೂ ಉಪಾಯಗಳಿಂದ ನಾವು ದೂರವಾಗಿದ್ದರೂ ಮೋಕ್ಷಪ್ರಾಪ್ತಿ ಹೇಗೆ ಎಂದು ನಾವಂತೂ ಭಯಪಡುತ್ತಿಲ್ಲ. ಮೋಕ್ಷಕ್ಕಾಗಿ ಗುರುಪ್ರಸಾದವೆಂಬ ಸುಲಭೋಪಾಯವೊಂದು (ಗುರುಪ್ರಸಾದದಿಂದ ಮುಕುಂದಭಕ್ತಿ ಸಿಕ್ಕು ಅದರಿಂದ ಶ್ರೀಹರಿಪ್ರಸಾದ ಮತ್ತು ಮುಕ್ತಿ) ನಮ್ಮಂಥವರಿಗಾಗಿಯೇ ಮೀಸಲಾಗಿರುವಾಗ ಭಯವೇಕೆ ? ಈ ಉಪಾಯವನ್ನು ಅಖಂಡ ಗುರುಭಕ್ತಿ ರೂಪವಾದ ಸಾಧನಗಳಿಂದ ಪಡೆಯಲು ಸಾಧ್ಯ. ಗುರುಮಾಹಾತ್ಮ್ಯಸ್ತವನದಿಂದ ಗುರುಭಕ್ತಿಯು ಸಾಧ್ಯವಾಗುವುದರಿಂದ ನಮ್ಮ ಗುರುಗಳಾದ ಶ್ರೀರಾಘವೇಂದ್ರತೀರ್ಥರೆಂಬ ವ್ರತಿಶ್ರೇಷ್ಠರ ಅನಿತರಸಾಧಾರಣವಾದ ಗ್ರಂಥಪ್ರಣಯನಾದಿ ಮಹಾತ್ಮೆಯನ್ನು ಸದಾ ಹೇಳುತ್ತೇವೆ."

ಅಸಿದ್ಧಕಾಯರೂ, ಅಲ್ಪಮತಿಗಳೂ ಆಗಿರುವುದರಿಂದ ತಮಗೆ ಕರ್ಮಯೋಗ ಅಥವಾ ಜ್ಞಾನಯೋಗಗಳೆಂಬ ಮೋಕ್ಷೋಪಾಯಗಳನ್ನು ಸಂಪಾದಿಸಲು ಸಾಧ್ಯವಿಲ್ಲ-ದಾಗಿದೆ. ಅದಕ್ಕಾಗಿ ತಾವು ಗುರುಪ್ರಸಾದರೂಪ ಸುಲಭವಾದ ಮೋಕ್ಷೋಪಾಯವನ್ನು ಅವಲಂಬಿಸಬೇಕಾಗಿದೆ. ಗುರುಪ್ರಸಾದಕ್ಕಾಗಿ ಗುರುಭಕ್ತಿ ಮತ್ತು ಗುರುಭಕ್ತಿಗಾಗಿ ಗುರುಮಾಹಾತ್ಮ್ಯಕಥನ ಬೇಕು. ಆದ್ದರಿಂದ ಶ್ರೀರಾಯರ ಅನಿತರಸಾಧಾರಣ ಗ್ರಂಥಪ್ರಣಯನಾದಿ ಮಹಾತ್ಮೆಯನ್ನು ಹೇಳಲು ತಾವು ಉದ್ಯುಕ್ತರಾಗಿರುವುದಾಗಿ ಶ್ರೀವಾದೀಂದ್ರತೀರ್ಥರು ಹೇಳಿರುವಂತೆ ಈ ಶ್ಲೋಕದ ವ್ಯಾಖ್ಯಾನಗಳಿಂದ ತಿಳಿದು ಬರುತ್ತದೆ. ಇದು ಪರಂಪರಾಗತವಾದ ಶಿಷ್ಟವ್ಯಾಖ್ಯಾನ.

ಶ್ರೀವಾದೀಂದ್ರತೀರ್ಥರು ಕರ್ಮಯೋಗ ಹಾಗೂ ಜ್ಞಾನಯೋಗಗಳ ಅನುಷ್ಠಾನದಲ್ಲಿ ಸಮರ್ಥರಾಗಿದ್ದರೂ ಏನೋ ಎರಡು ಕಾರಣಗಳನ್ನು ಹೇಳಿ ಶಕ್ತನಲ್ಲವೆಂದು ಹೇಳಿದ್ದು ಆತ್ಮಪ್ರಶಂಸಾ ವರ್ಜನೆಗಾಗಿ ಎಂದು ತಿಳಿಯಬೇಕು. ಎಲ್ಲ ರೀತಿಯಿಂದ ಸಮರ್ಥರಾಗಿದ್ದರೂ 'ನ ಶಬ್ದಾಬ್ಧೌ ಗಾಢಾಃ ನ ಚ ನಿಗಮಚರ್ಚಾಸು ಚತುರಾಃ' ಎಂದು ಮುಂತಾಗಿ ಶ್ರೀಜಯತೀರ್ಥರು ಹೇಳಿದಂತೆ ಶ್ರೀವಾದೀಂದ್ರತೀರ್ಥರು ಇಲ್ಲಿ ಹೇಳಿರುವದು ಅವರ ವಿನಯಗುಣದ ದ್ಯೋತಕವೆಂದೂ ತಿಳಿಯಬೇಕು.

ಇದನ್ನು ಪುಷ್ಟೀಕರಿಸಲು ಈ ಶ್ಲೋಕಕ್ಕೆ ಇನ್ನೊಂದು ರೀತಿಯಿಂದ ವ್ಯಾಖ್ಯಾನ ಮಾಡಬಹುದೆಂದು ತೋರುತ್ತದೆ. ಆಗ ಶ್ಲೋಕಾನ್ವಯವು ಕೆಳಗಿನಂತಿರುತ್ತದೆ –

**ಇನ್ನೊಂದು ರೀತಿಯ ಅನ್ವಯಾರ್ಥ :** **ಯಃ** = ಮೋಕ್ಷಪ್ರಾಪ್ತಿಗೋಸ್ಕರ ಯಾವ, **ಕರ್ಮನಾಮಾ ಯೋಗಃ** = ಕರ್ಮಯೋಗವೆಂಬ ಹೆಸರಿನ, ಮೋಕ್ಷಸಾಧನೋ-ಪಾಯವು, **ಚ** = ಮತ್ತು, **ವಿಜ್ಞಾನಸಂಜ್ಞಃ ಯೋಗಃ** = ವಿಜ್ಞಾನಯೋಗವೆಂಬ ಹೆಸರಿನ ಇನ್ನೊಂದು ಮೋಕ್ಷಸಾಧನೋಪಾಯವು, **ಕವಿಭಿಃ** = ಜ್ಞಾನಿಗಳಿಂದ, **ಅಭಿಹಿತಃ** = ತಿಳಿಸಿ ಹೇಳಲ್ಪಟ್ಟಿದೆಯೋ, **ಅನಯೋಃ** = ಈ ಎರಡು ಉಪಾಯಗಳ, **ಆವರ್ಜನೇ ತಾವತ್** = ಸಂಪಾದನೆಯಲ್ಲಂತೂ, **ನಾಸಿದ್ಧಕಾಯಃ** = ದೃಢಕಾಯನಾದ ಮತ್ತು **ತನುಮತಿಃ** = ಕುಶಾಗ್ರಮತಿಯಾದ ಅಥವಾ ಸದಾ ಪರಮಾತ್ಮನ ಚಿಂತನೆಯಲ್ಲೇ ಆಸಕ್ತನಾಗಿರುವ (ಅಥವಾ **ನ ತನುಮತಿಃ** = ಅಲ್ಪಮತಿಯಾಗಿರದ), **ಅಹಂ** = ನಾನು, **ಶಕ್ತಃ** = ಸಮರ್ಥನೇ ಆಗಿರುವೆನು. ಆದರೂ, **ಸ್ಥಿರಫಲವಿಧಯೇ** = ಸ್ಥಿರವಾದ ಮೋಕ್ಷರೂಪ-ಫಲದ ಪ್ರಾಪ್ತಿಗಾಗಿ, **ದೇಶಿಕಸ್ಯ** = ಯಾವ ಗುರುಗಳ, **ಯಶ್ಚ ಪ್ರಸಾದಃ** = ಅನುಗ್ರಹವೆಂಬ ಯಾವ ಪ್ರಸಾದವು, **ಉಪಾಯೈಃ** = ಸಾಧನಗಳಿಂದ, **ಉಪೇಯಃ** = ಅತ್ಯವಶ್ಯವಾಗಿ ದೊರಕಿಸಲ್ಪಡಬೇಕೋ, **ತಸ್ಮೈ** = ಆ ಗುರ್ವನುಗ್ರಹಪ್ರಾಪ್ತಿಗಾಗಿ, **ತಸ್ಯ ರಾಘವೇಂದ್ರವ್ರತೀಂದೋಃ** = ಮಹಾಮಹಿಮರಾದ ಆ ಶ್ರೀರಾಘವೇಂದ್ರಯತಿಚಂದ್ರಮರ, **ಚರಿತಂ** = ಚರಿತ್ರೆಯನ್ನು, **ಅನಿಶಮಪಿ** = ಸರ್ವದಾ, **ಸ್ತುವೀಯ** = ಸ್ತುತಿಸುವೆನು.

**ಅರ್ಥ :** ಮೋಕ್ಷವನ್ನು ಹೊಂದುವುದಕ್ಕಾಗಿ ಕರ್ಮಯೋಗ ಮತ್ತು ಜ್ಞಾನಯೋಗ ಎಂಬ ಯಾವ ಎರಡು ಉಪಾಯಗಳು (ಮಾರ್ಗಗಳು) ಜ್ಞಾನಿಗಳಿಂದ ಹೇಳಲ್ಪಟ್ಟಿವೆಯೋ ಅವುಗಳನ್ನು ಸಂಪಾದಿಸುವಲ್ಲಿ, ಸಿದ್ಧ ಹಾಗೂ ಶುದ್ಧಕಾಯನಾದ ಮತ್ತು ಸದಾ ಪರಮಾತ್ಮನ ಧ್ಯಾನದಲ್ಲಿ ಆಸಕ್ತನಾದ ನಾನು ಸಮರ್ಥನಾಗಿಯೇ ಇದ್ದೇನೆ. ಹಾಗಿದ್ದರೂ ಕೂಡ ಮೋಕ್ಷಪ್ರಾಪ್ತಿಗಾಗಿ ಗುರುಗಳ ಯಾವ ಪ್ರಸಾದವು (ಅನುಗ್ರಹವು) ಅತ್ಯವಶ್ಯವಾಗಿದೆಯೋ ಅಂಥ ಗುರುಪ್ರಸಾದವನ್ನು ಸಂಪಾದಿಸುವುದಕ್ಕಾಗಿ ಆ ಶ್ರೀರಾಘವೇಂದ್ರವ್ರತಿಶ್ರೇಷ್ಠರ ಚರಿತೆಯನ್ನು ಅಂದರೆ ಅನಿತರಸಾಧಾರಣ ಗ್ರಂಥ ಪ್ರಣಯನಾದಿ ಮಹಾತ್ಮೆಯನ್ನು ಯಾವಾಗಲೂ ವರ್ಣಿಸುತ್ತೇನೆ."

ಗುರ್ವನುಗ್ರಹವಿಲ್ಲದವನಿಗೆ ಕರ್ಮಯೋಗ ಅಥವಾ ಜ್ಞಾನಯೋಗವೆಂಬ ಮೋಕ್ಷೋಪಾಯಗಳು ಮೋಕ್ಷಪ್ರಾಪ್ತಿಗೆ ಸಾಧನಗಳಾಗಲಾರವು. ಕರ್ಮಯೋಗ ಜ್ಞಾನಯೋಗಗಳನ್ನು ಸಂಪಾದಿಸಿದವನೂ ಕೂಡ ಗುರ್ವನುಗ್ರಹವನ್ನು ಪಡೆದಾಗಲೇ ಮೋಕ್ಷವನ್ನು ಹೊಂದಬಲ್ಲನು. ಈ ರೀತಿ ಗುರ್ವನುಗ್ರಹದ ಮಹತ್ವವು ಈ ಶ್ಲೋಕದಿಂದ ತಿಳಿದುಬರುವದು.

ಇಲ್ಲಿ **'ಶಕ್ತೋ ನಾಸಿದ್ಧಕಾಯಃ ತನುಮತಿಃ'** ಎಂಬ ಶ್ಲೋಕಭಾಗದ ಅರ್ಥವನ್ನು ಪ್ರಸಿದ್ಧವಾಗಿರುವ ವ್ಯಾಖ್ಯಾನಕ್ಕೆ ವಿಲಕ್ಷಣವಾಗಿ ಹೇಳಲಾಗಿದೆ. ಅಸಿದ್ಧಕಾಯರಿಗೆ ಅಂದರೆ

ಸಿದ್ಧಿ ಇಲ್ಲದವರಿಗೆ ಅಥವಾ ದೇಹ ಶುದ್ಧಿ ಇಲ್ಲದವರಿಗೆ ಅಥವಾ ರೋಗರುಜಿನಗಳಿಂದ ಪೀಡಿತವಾದ ದೇಹವುಳ್ಳವರಿಗೆ ಕರ್ಮಯೋಗದ ಅನುಷ್ಠಾನವು ಸಾಧ್ಯವಾಗುವದಿಲ್ಲ. ಆದರೆ ಶ್ರೀವಾದೀಂದ್ರತೀರ್ಥರು ಜಪತಪಾನುಷ್ಠಾನಾದಿಗಳಿಂದ ಸಿದ್ಧಿಯುಳ್ಳವರೂ, ದೇಹಶುದ್ಧಿಯುಳ್ಳವರೂ ರೋಗಾದ್ಯುಪದ್ರವಗಳಿಲ್ಲದವರೂ ಆಗಿದ್ದಾರೆ. ಅಂದರೆ ಅವರು ಅಸಿದ್ಧಕಾಯರು ಆಗಿಲ್ಲ. ಸಿದ್ಧಕಾಯರೇ ಆಗಿದ್ದಾರೆ (ನ **ಅಸಿದ್ಧಕಾಯಃ = ಸಿದ್ಧಕಾಯಃ ಏವ**). ಆದ್ದರಿಂದ ಅವರು ಕರ್ಮಯೋಗಾನುಷ್ಠಾನದಲ್ಲಿ ಸಮರ್ಥರೇ ಆಗಿದ್ದಾರೆ. ಇನ್ನು, ಅಲ್ಪಮತಿಗಳಾದವರಿಗೆ (**ತನ್ವೀ ಮತಿಃ ಯಸ್ಯ ಸಃ** = ತನುಮತಿಗಳಿಗೆ) ಜ್ಞಾನಯೋಗಾನುಷ್ಠಾನವು ಸಾಧ್ಯವಾಗುವದಿಲ್ಲ. ಆದರೆ ಶ್ರೀವಾದೀಂದ್ರತೀರ್ಥರಾದರೋ 'ವೃಂದಾರಕಗುರುಪ್ರಖ್ಯರು' (**ವಂದಾರುಜನಸಂದೋಹಮಂದಾರತರುಸನ್ನಿಭಂ । ವೃಂದಾರಕ-ಗುರುಪ್ರಖ್ಯಂ ವಂದೇ ವಾದೀಂದ್ರದೇಶಿಕಮ್ ॥** – *ಚರಮಶ್ಲೋಕ*) ಅಂದರೆ ದೇವಗುರುಗಳಾದ ಬೃಹಸ್ಪತ್ಯಾಚಾರ್ಯಕಲ್ಪರೆಂದು ಪ್ರಸಿದ್ಧರಾಗಿದ್ದಾರೆ. ಬೃಹಸ್ಪತ್ಯಾಚಾರ್ಯ-ರೇನು ಅಲ್ಪಮತಿಗಳೇ! ಇಂದ್ರಾದಿ ದೇವತೆಗಳಿಗೇ ಗುರುವಾದ ಅವರ ಬುದ್ಧಿಯ ವೈಶಾಲ್ಯಕ್ಕೆ ಹಾಗೂ ಪ್ರತಿಭೆಯ ಬಗ್ಗೆ ಹೇಳುವುದೇನಿದೆ! ಆದ್ದರಿಂದ ಶ್ರೀವಾದೀಂದ್ರ-ತೀರ್ಥರು ತನುಮತಿಗಳು ಅಂದರೆ ಅಲ್ಪಮತಿಗಳು ಆಗಿಲ್ಲ (**ನ ತನುಮತಿಃ**). ಪ್ರತ್ಯುತ '**ತನು**' ಅಂದರೆ ಪರಮಾತ್ಮನಲ್ಲಿ '**ಮತಿ**' ಬುದ್ಧಿಯುಳ್ಳವರು ಅಂದರೆ ಸದಾ ಬ್ರಹ್ಮಜಿಜ್ಞಾಸೆಯಲ್ಲಿ ಆಸಕ್ತರಾಗಿರುವವರಾಗಿದ್ದಾರೆ. ಆದ್ದರಿಂದಲೇ ಅವರು ಜ್ಞಾನಯೋಗಾ-ನುಷ್ಠಾನದಲ್ಲಿಯೂ ಸಮರ್ಥರೇ ಆಗಿದ್ದಾರೆ.

ಪ್ರಕೃತದಲ್ಲಿ '**ತನುಮತಿ**' ಅಂದರೆ ಪರಮಾತ್ಮನ ಧ್ಯಾನದಲ್ಲಿ ಆಸಕ್ತರು ಎಂದು ಅರ್ಥಮಾಡಲಾಗಿದೆ. ಹೇಗೆಂದರೆ – '**ಸ್ತೋಕಾಲ್ಪಕ್ಷುಲ್ಲಕಾಃ ಸೂಕ್ಷ್ಮಂ ಶ್ಲಕ್ಷ್ಣಂ ದಭ್ರಂ ಕೃಶಂ ತನು ॥೬೧॥** (– ಅಮರಕೋಶ ಕಾಂಡ ೩.) ಎಂಬಲ್ಲಿ 'ತನು' ಶಬ್ದಕ್ಕೆ ಅಲ್ಪ, ಸೂಕ್ಷ್ಮ, ಕೃಶ ಎಂಬ ಅರ್ಥಗಳಿವೆ. ಈ ಶಬ್ದಗಳು ವಿಷ್ಣುವಾಚಕಗಳೆಂದು ವಿಷ್ಣುಸಹಸ್ರನಾಮ ಸ್ತೋತ್ರದಿಂದ ಹಾಗೂ ಶತಪಥಬ್ರಾಹ್ಮಣವಚನದಿಂದ ತಿಳಿದು ಬರುವದು.

**ಸುವ್ರತಃ ಸುಮುಖಃ ಸೂಕ್ಷ್ಮಃ ಸುಘೋಷಃ ಸುಖದಃ ಸುಹೃತ್ ॥೬೨॥**
**ಅಣುರ್ಬೃಹತ್ ಕೃಶಃ ಸ್ಥೂಲೋ ಗುಣಭೃನ್ನಿರ್ಗುಣೋ ಮಹಾನ್ ॥೧೦೩॥**
**ಆತ್ಮಾ ವೈ ತನೂಃ ॥** ***ಶತಪಥ ಬ್ರಾಹ್ಮಣ ೬-೭-೨-೬*** **॥**

'ತನು' ಶಬ್ದ ವಾಚ್ಯನಾದ ವಿಷ್ಣುವಿನಲ್ಲಿ ಮತಿಯುಳ್ಳವರು ಅಂದರೆ ಸದಾ ಶ್ರೀನಾರಾಯಣಧ್ಯಾನಾಸಕ್ತರು ಎಂದು ಇಲ್ಲಿ 'ತನುಮತಿ' ಶಬ್ದಕ್ಕೆ ಅರ್ಥ ಮಾಡಲಾಗಿದೆ. ತನುಮತಿಃ ಅಂದರೆ ಸೂಕ್ಷ್ಮಮತಿಗಳು ಅಂದರೆ ಪ್ರಜ್ಞಾವಂತರು, ಪ್ರತಿಭಾಶಾಲಿಗಳು ಎಂದೂ ಅರ್ಥೈಸಬಹುದು. ಹೀಗೆ ಕರ್ಮಯೋಗ ಮತ್ತು ಜ್ಞಾನಯೋಗಗಳ ಅನುಷ್ಠಾನದಲ್ಲಿ

ಸಮರ್ಥರಾಗಿದ್ದರೂ ಶ್ರೀವಾದೀಂದ್ರತೀರ್ಥರು ಅವುಗಳನ್ನು ಆಶ್ರಯಿಸಲು ಇಷ್ಟಪಡಲಿಲ್ಲ. ಅವರು ಆಶ್ರಯಿಸಿದ ಯೋಗವೇ ಬೇರೆ. ಅದೇ ಭಕ್ತಿಯೋಗ. ಮೋಕ್ಷಸಾಧನಗಳಾದ ಕರ್ಮಯೋಗ, ಜ್ಞಾನಯೋಗಗಳು ಕಷ್ಟಸಾಧ್ಯವಾಗಿರುವದನ್ನೂ ಮತ್ತು ಮೋಕ್ಷಸಾಧನೆಗೆ ಈ ಎರಡು ಯೋಗಗಳಲ್ಲದೇ ಭಕ್ತಿಯೋಗವೆಂಬ ಸುಲಭವೂ ಮತ್ತು ಶ್ರೇಷ್ಠವೂ ಆದ ಇನ್ನೊಂದು ಉಪಾಯವಿರುವದನ್ನೂ ಶ್ರೀವಾದೀಂದ್ರತೀರ್ಥರು ಅರಿತಿದ್ದರು.

ಪರಮ ಶ್ರೇಯಸ್ಸಿಗೆ ಮೂರು ಉಪಾಯಗಳಿರುವುದನ್ನು ಶ್ರೀಕೃಷ್ಣನು ಉದ್ಧವನಿಗೆ ತಿಳಿಸುತ್ತಾ ಶ್ರೀಮದ್ಭಾಗವತದಲ್ಲಿ ಹೇಳುತ್ತಾನೆ –

**ಯೋಗಾಸ್ತ್ರಯೋ ಮಯಾ ಪ್ರೋಕ್ತಾ ನೃಣಾಂ ಶ್ರೇಯೋವಿಧಿತ್ಸಯಾ ।**
**ಜ್ಞಾನಂ ಕರ್ಮ ಚ ಭಕ್ತಿಶ್ಚ ನೋಪಾಯೋಽನ್ಯೋಽಸ್ತಿ ಕುತ್ರಚಿತ್ ॥ ೬ ॥**
**ನಿರ್ವಿಣ್ಣಾನಾಂ ಜ್ಞಾನಯೋಗೋ ನ್ಯಾಸಿನಾಮಿಹ ಕರ್ಮಸು ।**
**ತೇಷ್ವನಿರ್ವಿಣ್ಣಚಿತ್ತಾನಾಂ ಕರ್ಮಯೋಗಸ್ತು ಕಾಮಿನಾಮ್ ॥ ೭ ॥**
**ಯದೃಚ್ಛಯಾ ಮತ್ಕಥಾದೌ ಜಾತಶ್ರದ್ಧಸ್ತು ಯಃ ಪುಮಾನ್ ।**
**ನ ನಿರ್ವಿಣ್ಣೋ ನಾತಿಸಕ್ತೋ ಭಕ್ತಿಯೋಗೋಽಸ್ಯ ಸಿದ್ಧಿದಃ ॥ ೮ ॥**

*– ಭಾಗವತ ೧೧-೨೦.*

— ಮನುಷ್ಯರ ಶ್ರೇಯಸ್ಸಾಧನೆಯಾಗುವುದಕ್ಕಾಗಿ ಕರ್ಮಯೋಗ, ಜ್ಞಾನಯೋಗ ಮತ್ತು ಭಕ್ತಿಯೋಗ ಎಂದು ಮೂರು ಮಾರ್ಗೋಪಾಯಗಳಿವೆ. ಇವುಗಳನ್ನು ಬಿಟ್ಟು ಶ್ರೇಯಸ್ಸಾಧನೆಗೆ ಇನ್ನಾವ ಉಪಾಯವೂ ಇಲ್ಲ. ಕರ್ಮದಿಂದ ಉಂಟಾಗಬೇಕಾದ ಮನಶ್ಶುದ್ಧಿಯನ್ನು ಚೆನ್ನಾಗಿ ಪಡೆದ ಮತ್ತು ಕರ್ಮಫಲದಲ್ಲಿ ಅನಾಸಕ್ತರಾದ ಮನುಷ್ಯರಿಗೆ ಜ್ಞಾನಯೋಗವು, ಕರ್ಮದಿಂದ ಸಾಕಷ್ಟು ಮನಶ್ಶುದ್ಧಿ ಆಗದ ಮನುಜರಿಗೆ ಕರ್ಮಯೋಗವು ಮತ್ತು ಶ್ರೀಶಾನುಗ್ರಹದಿಂದ ಪರಮಾತ್ಮನ ಕಥಾಮೃತಾಸ್ವಾದನದಲ್ಲಿ ವಿಶಿಷ್ಟ ಶ್ರದ್ಧೆ ಹುಟ್ಟಿ, ನಿತ್ಯ ವಿರಕ್ತರಾಗಿರುವ ಮನುಷ್ಯರಿಗೆ ಭಕ್ತಿಯೋಗವು ವಿಧಿಸಲ್ಪಟ್ಟಿದೆ.

ಈ ಮೂರು ಯೋಗಗಳು ಒಂದನ್ನು ಬಿಟ್ಟು ಒಂದು ಇರುವದಿಲ್ಲ. ಪ್ರತಿಯೊಂದರಲ್ಲಿ ಉಳಿದೆರಡು ಯೋಗಗಳು ಸೇರಿಕೊಂಡೇ ಇರುತ್ತವೆ. ಹಾಗಿದ್ದರೂ ಮೂರರ ಗುಂಪಿನಲ್ಲಿ ಯಾವುದು ಉಳಿದೆರಡಕ್ಕಿಂತ ಅಧಿಕವಾಗಿರುವದೋ ಆ ಯೋಗದ ಹೆಸರಿನಿಂದಲೇ ಆ ಮೂರರ ಗುಂಪು ಕರೆಯಲ್ಪಡುತ್ತದೆ.

ಈ ತ್ರಿವಿಧಯೋಗಗಳಲ್ಲಿ ಭಕ್ತಿಯೋಗವೇ ಶ್ರೇಷ್ಠವಾದುದೆಂದು ಶ್ರೀಶುಕಾಚಾರ್ಯರು ತಿಳಿಸುತ್ತಾರೆ –

**ನ ಹ್ಯತೋಽನ್ಯಃ ಶಿವಃ ಪಂಥಾಃ ವಿಶ್ರುತಃ ಸಂಸೃತಾವಿಹ ।**
**ವಾಸುದೇವೇ ಭಗವತಿ ಭಕ್ತಿಯೋಗೋ ಯತೋ ಭವೇತ್ ॥** *– ಭಾಗ ೨-೨-೩೩.*

ಮೋಕ್ಷಸಾಧನಗಳಾದ ಕರ್ಮಯೋಗ, ಜ್ಞಾನಯೋಗ ಹಾಗೂ ಭಕ್ತಿಯೋಗಗಳಲ್ಲಿ ಸುಲಭವೂ ಶ್ರೇಷ್ಠವೂ ಆದ ಭಕ್ತಿಯೋಗವನ್ನು ಬಿಟ್ಟು ಕಷ್ಟಸಾಧ್ಯಗಳಾದ ಕರ್ಮಜ್ಞಾನಯೋಗಗಳನ್ನು ಆಶ್ರಯಿಸುವುದರಲ್ಲಿ ಏನು ಜಾಣ್ಮೆ ಇದೆ ? ಕುಶಾಗ್ರಮತಿ-ಗಳಾದ (ತನುಮತಿ) ಶ್ರೀವಾದೀಂದ್ರತೀರ್ಥರು ಅನುಷ್ಠಾನಕ್ಕೆ ಶ್ರೇಷ್ಠವಾದ ಹಾಗೂ ಸುಲಭವಾದ ಭಕ್ತಿಯೋಗವನ್ನೇ ಆಶ್ರಯಿಸಿದರು. ಶ್ರೀವಾದೀಂದ್ರತೀರ್ಥರಿಗೆ ಗುರುಭಕ್ತಿಯಿಲ್ಲದೇ ಹರಿಭಕ್ತಿಯೋಗವು ಫಲಕಾರಿಯಾಗದೆಂಬುದು ತಿಳಿದಿತ್ತು. ಹಾಗೆ ನೋಡಿದರೆ ಗುರುಭಕ್ತಿ ಇಲ್ಲದೇ ಕರ್ಮಯೋಗ ಹಾಗೂ ಜ್ಞಾನಯೋಗಗಳೂ ಸಿದ್ಧಿಸಲಾರವು ಮತ್ತು ಫಲಕಾರಿಯೂ ಆಗಲಾರವು. ಮೂರೂ ಯೋಗಗಳ ಅನುಷ್ಠಾನಕ್ಕೆ ಗುರುಭಕ್ತಿಯು ಅನಿವಾರ್ಯವಾಗಿದೆ.

ಭಕ್ತಿಯೋಗದಲ್ಲಿ ಹರಿಭಕ್ತಿಸಂಪಾದನೆಗೆ ಗುರುಪ್ರಸಾದವಾಗಬೇಕು. ಗುರು-ಪ್ರಸಾದಕ್ಕೆ ಗುರುಭಕ್ತಿಯು ಅವಶ್ಯ. ಅದಕ್ಕಾಗಿಯೇ "**ಮುಕುಂದಭಕ್ತ್ಯೈ ಗುರುಭಕ್ತಿಜಾಯ್ಯೆ ಸತಾಂ ಪ್ರಸತ್ತ್ಯೈ ಚ ನಿರಂತರಾಯ್ಯೆ । ಗರೀಯಸೀಂ ವಿಶ್ವಗುರೋರ್ವಿಶುದ್ಧಾಂ ವಕ್ಷ್ಯಾಮಿ ವಾಯೋರವತಾರಲೀಲಾಮ್ ॥** – ಸು.ವಿ. ॥" ಎಂಬಲ್ಲಿ ಮೋಕ್ಷಕ್ಕೆ ಅವಶ್ಯವಾದ ಮುಕುಂದಭಕ್ತಿಯು ಗುರುಭಕ್ತಿಯಿಂದ ಪ್ರಾಪ್ತವಾಗುವದು, ಗುರುಭಕ್ತಿಯು ಬರಬೇಕಾದರೆ ಗುರುಗಳ ಮಹಿಮೆಗಳನ್ನು ಹಾಗೂ ಚರಿತ್ರೆಯನ್ನು ತಿಳಿದಿರಬೇಕಾಗುವದೆಂದು ಹೇಳಲಾಗಿದೆ. ಆದ್ದರಿಂದ ಶ್ರೀವಾದೀಂದ್ರತೀರ್ಥರು ಭಕ್ತಿಯೋಗಕ್ಕೆ ಆವಶ್ಯವಾದ ಗುರುಪ್ರಸಾದವನ್ನು ಅಪೇಕ್ಷಿಸುವವರಾಗಿ, ಮೂಲಗುರುಗಳು, ಆದಿಗುರುಗಳು, ಮತ್ತು ಶ್ರೀರಾಯರು ಇವರೇ ಮೊದಲಾದವರ ಅನಿತರ ಸಾಧಾರಣ ಗ್ರಂಥಪ್ರಣಯನ ಇವೇ ಮೊದಲಾದ ಮಾಹಾತ್ಮ್ಯವನ್ನು ತಿಳಿಸುವ ಗುರುಗುಣಸ್ತವನವನ್ನು ಪ್ರಾರಂಭಿಸಿದರು.

ಇದುವರೆಗೆ ೧೨ ನೆಯ ಶ್ಲೋಕದ ವಿಶೇಷಾರ್ಥಗಳನ್ನು ಗಮನಿಸಿದೆವು. ಇನ್ನು ಮುಂದೆ ಈ ಶ್ಲೋಕದಲ್ಲಿ ಬರುವ "**ರಾಘವೇಂದ್ರವ್ರತೀಂದೋಃ**" ಎಂಬ ಪದದ ವಿಶೇಷಾರ್ಥಗಳನ್ನು ನೋಡೋಣ. ರಾಘವೇಂದ್ರವ್ರತೀಂದು ಅಂದರೆ ಶ್ರೀರಾಘವೇಂದ್ರ-ರೆಂಬ ವ್ರತಿಶ್ರೇಷ್ಠರೆಂದೂ ರಾಘವೇಂದ್ರವ್ರತಿಗಳೆಂಬ ಚಂದ್ರನೆಂದೂ ವ್ಯಾಖ್ಯಾನಗಳಲ್ಲಿ ಅರ್ಥಮಾಡಲಾಗಿದೆ. 'ಇಂದು' ಈ ಪದವು ಶ್ರೇಷ್ಠಾರ್ಥ ಗೋಚರವಾಗಿದೆ. 'ಇಂದು' ಇದು ಶ್ರೀಮುಖ್ಯಪ್ರಾಣನ ನಾಮಗಳಲ್ಲಿ ಒಂದೆಂಬುದು ಐತರೇಯ ಉಪನಿಷದ್ಭಾಷ್ಯದಿಂದ ತಿಳಿಯುವದು –

**ಇಷ್ಟಪ್ರದಾನಶೀಲತ್ವಾತ್ ಇಂದುರ್ವಾಯುಃ ಸ ಏವ ಚ । ಸೋಮಃ ಸೌಮ್ಯಸ್ವರೂಪತ್ವಾತ್ ಪವಮಾನಶ್ಚ ಪಾವನಾತ್ ... ॥೩-೨-೪॥**

ಆದ್ದರಿಂದ ಇಂದು ಈ ಪದಕ್ಕೆ ಮುಖ್ಯಪ್ರಾಣ ಎಂದರ್ಥವಾದರೆ "ಶ್ರೀರಾಘವೇಂದ್ರ-ವ್ರತೀಂದೋಃ ಚರಿತಂ ಸ್ತುವೀಯ" ಎಂದಾಗ ಶ್ರೀರಾಘವೇಂದ್ರ ವ್ರತಿಗಳೆಂಬ

ಮುಖ್ಯಪ್ರಾಣನ ಚರಿತೆಯನ್ನು ಹೇಳುವೆನು ಎಂದು ಶ್ರೀವಾದೀಂದ್ರ-ತೀರ್ಥರು ಹೇಳಿದಂತಾಗುವದು. ಇದರಿಂದ ತಿಳಿದು ಬರುವ ವಿಷಯಗಳೆಂದರೆ –

೧. ವಾಯ್ವಾವೇಶಯುತನಾದ ಪ್ರಹ್ಲಾದನೇ ಶ್ರೀರಾಘವೇಂದ್ರರಾಗಿರುವುದು.

೨. ಶ್ರೀರಾಯರಲ್ಲಿ ವಾಯುವಿನ ನಿತ್ಯಸನ್ನಿಧಾನವಿರುವದು.

೩. ಶ್ರೀರಾಯರ ಚರಿತ್ರೆಯನ್ನು ಹೇಳುವುದರಿಂದ ಮುಖ್ಯಪ್ರಾಣನು ಪ್ರಸನ್ನನಾಗಿ ಹರಿಭಕ್ತಿಯನ್ನು ಕೊಟ್ಟು ತನ್ಮೂಲಕ ಸ್ಥಿರಫಲವಾದ ಮೋಕ್ಷವನ್ನು ಅನುಗ್ರಹಿಸುವನು.

೪. ಶ್ರೀರಾಯರಿಗೆ ಮುಖ್ಯಪ್ರಾಣನ ಮೂಲಕ ಮೋಕ್ಷಪ್ರದಾತೃತ್ವವುಂಟು.

ಶ್ರೀಜಯರಾಮಾರ್ಯರು (ಶ್ರೀಧೀರೇಂದ್ರತೀರ್ಥರು) **ಚರಿತಂ** ಪದಕ್ಕೆ **'ಅನಿತರ-ಸಾಧಾರಣಗ್ರಂಥಕರಣಾದಿಮಾಹಾತ್ಮ್ಯಂ'** ಅಂದರೆ ಅನಿತರ ಸಾಧಾರಣ ಗ್ರಂಥರಚನೆ ಇವೇ ಮೊದಲಾದ ಮಾಹಾತ್ಮ್ಯ ಎಂದು ವ್ಯಾಖ್ಯಾನಿಸಿದ್ದರಿಂದ ಶ್ರೀರಾಯರ ಚರಿತ್ರೆಯನ್ನು ಹೇಳುವುದೆಂದರೆ ಅವರಿಂದ ರಚಿತವಾದ ಶ್ರೇಷ್ಠಗ್ರಂಥಗಳ ವರ್ಣನೆ ಇವೇ ಮೊದಲಾದ ಮಾಹಾತ್ಮ್ಯಗಳು ಎಂದು ತಿಳಿದುಬರುವದು. ಶ್ರೀಜಯರಾಮಾರ್ಯರ (ಶ್ರೀಧೀರೇಂದ್ರತೀರ್ಥರ) ವ್ಯಾಖ್ಯಾನದಲ್ಲಿರುವ **ಅನಿತರಸಾಧಾರಣ ಗ್ರಂಥಕರಣಾದಿ ಮಾಹಾತ್ಮ್ಯಂ** ಎಂಬಲ್ಲಿ 'ಆದಿ' ಪದದಿಂದ ಏನೇನನ್ನು ಸಂಗ್ರಹಿಸಬಹುದು ? ಶ್ರೀವಾದೀಂದ್ರತೀರ್ಥರ ಈ ಕೃತಿಗೆ 'ಗುರುಗುಣಸ್ತವನ' ಎಂದಿರುವುದರಿಂದ ಪ್ರಾಚೀನ ಗುರುಗಳ ಮತ್ತು ಶ್ರೀರಾಯರ ಗುಣಸ್ತವನವಾಗುವ ಎಲ್ಲ ವಿಷಯಗಳನ್ನು ಆದಿ ಪದದಿಂದ ಸಂಗ್ರಹಿಸಬಹುದೆಂದು ತೋರುತ್ತದೆ. ಉದಾಹರಣೆಗೆ ಅನಿತರಸಾಧಾರಣ ಗ್ರಂಥಕರಣತ್ವ, ಅನಿತರಸಾಧಾರಣ ದಯಾದಿ ಗುಣಗಳು, ಉತ್ಕರ್ಷಸೂಚಕವಾದ ಅನಿತರಸಾಧಾರಣ ಧರ್ಮಗಳು, ಪವಾಡಗಳು, ಮಹಿಮೆಗಳು ಇತ್ಯಾದಿ.

ಗುರುಗುಣಸ್ತವನದಲ್ಲಿ ಶ್ರೀರಾಯರ ಒಂದೊಂದೇ ಗ್ರಂಥವನ್ನು ಸ್ತುತಿಸುವ ಮೂಲಕ ಅವರ ಗ್ರಂಥಕರಣ ಮಾಹಾತ್ಮ್ಯವನ್ನು ಹೇಳಿದಂತಾಗುವದು. ಅವರ ಪ್ರತಿಭಾ, ಶೌಚ, ದಯಾ, ಶಮ, ದಮ, ಜ್ಞಾನ, ಭಕ್ತಿ, ವೈರಾಗ್ಯಾದಿ ಗುಣಗಳ ವರ್ಣನೆಯೂ ಬರುತ್ತದೆ. ಕೆಲವು ಮಹಿಮೆಗಳ ಪ್ರಕಾಶನವೂ ಆಗುತ್ತದೆ.

**೧೩. ಅವತಾರಿಕಾ :** ಶ್ರೀರಾಘವೇಂದ್ರತೀರ್ಥರ ಮಹಿಮೆಯು ಅಪಾರವಾದ್ದರಿಂದ ಅದನ್ನು ಪೂರ್ಣವಾಗಿ ವರ್ಣಿಸುವುದು ಅಸಾಧ್ಯವೆಂದು ಶಂಕಿಸಿ ಯಥಾಮತಿ, ಯಥಾಶಕ್ತಿ ವರ್ಣಿಸುವುದಾಗಿ ಸಮಾಧಾನಪಡುತ್ತಾರೆ.

**ಏಷ ಶ್ರೀರಾಘವೇಂದ್ರವ್ರತಿವರಚರಿತಾಂಭೋನಿಧಿಃ ಕ್ವಾತಿವೇಲಃ**
**ಕ್ವಾಸೌ ಖದ್ಯೋತಪೋತಪ್ರಮುಷಿತವಿಭವಶ್ಚೇತಸೋ ನಃ ಪ್ರಕಾಶಃ ।**

**ವಂಧ್ಯೈವಾತಃ ಪ್ರತಿಜ್ಞಾ ತದತುಲನಿಖಿಲಾಶ್ಚರ್ಯಚರ್ಯಾಭಿಧಾನೇ**
**ಸ್ಥಾನೇಥಾಪಿ ಕ್ವಚಿತ್ಸ್ಯಾದಿಹ ಪುನರುದಧಿಸ್ನಾನಸಂಕಲ್ಪವತ್ಸಾ** || ೧೩ ||

**ಅನ್ವಯಾರ್ಥ :** ಏಷಃ = ಈ, ಅತಿವೇಲಃ = ಅಪಾರವಾದ, ಶ್ರೀರಾಘವೇಂದ್ರ-ವ್ರತಿವರಚರಿತಾಂಭೋನಿಧಿಃ – ಶ್ರೀರಾಘವೇಂದ್ರ = ಶ್ರೀರಾಘವೇಂದ್ರತೀರ್ಥರೆಂಬ, ವ್ರತಿವರ = ಯತಿಸಾರ್ವಭೌಮರ, ಚರಿತ = ಚರಿತ್ರೆಯೆಂಬ, ಅಂಭೋನಿಧಿಃ = ಸಮುದ್ರವು, ಕ್ವ = ಎಲ್ಲಿ ! **ಖದ್ಯೋತಪೋತಪ್ರಮುಷಿತವಿಭವಃ** – **ಖದ್ಯೋತ** = ದೀಪದಹುಳುಗಳ, **ಪೋತ** = ಮರಿಗಳಿಂದ, **ಪ್ರಮುಷಿತ** = ಅಪಹರಿಸಲ್ಪಟ್ಟ, ವಿಭವಃ = ವೈಭವವುಳ್ಳ, **ಅಸೌ ನಃ ಚೇತಸಃ ಪ್ರಕಾಶಃ** = ಈ ನಮ್ಮ ಅಂತಃಕರಣದ ಪ್ರಕಾಶವು, **ಕ್ವ** = ಎಲ್ಲಿ ! **ಅತಃ** = ಈ ಕಾರಣದಿಂದ, **ತದತುಲನಿಖಿಲಾಶ್ಚರ್ಯಚರ್ಯಾಭಿಧಾನೇ – ತತ್** = ಆ ಶ್ರೀರಾಘವೇಂದ್ರ ಗುರುಸಾರ್ವಭೌಮರ, **ಅತುಲ** = ಅಸದೃಶವಾದ, ನಿಖಿಲ = ಸಕಲ, **ಆಶ್ಚರ್ಯ** = ಆಶ್ಚರ್ಯಜನಕವಾದ, **ಚರ್ಯ** = ಮಹಿಮೆಗಳ (ಚರಿತ್ರೆಯ), **ಅಭಿಧಾನೇ** = ವರ್ಣನೆಯ ವಿಷಯದಲ್ಲಿ, **ಪ್ರತಿಜ್ಞಾ** = ನಮ್ಮ ಪೂರ್ವಶ್ಲೋಕೋಕ್ತ ಪ್ರತಿಜ್ಞೆಯು, ವಂಧ್ಯಾ ಏವ = ವ್ಯರ್ಥವಾದಂತೆಯೇ ಆಯಿತು. **ಅಥಾಪಿ** = ಹಾಗಿದ್ದರೂ ಕೂಡ, **ಉದಧಿಸ್ನಾನಸಂಕಲ್ಪವತ್** – **ಉದಧಿ** = ಸಮುದ್ರದಲ್ಲಿ ಮಾಡುವ, **ಸ್ನಾನ-ಸಂಕಲ್ಪವತ್** = ಸ್ನಾನದ ಸಂಕಲ್ಪದಂತೆ, **ಸಾ** = ಆ ನಮ್ಮ ಪ್ರತಿಜ್ಞೆಯು, **ಕ್ವಚಿತ್ಸ್ಥಾನೇ** = ಯತ್ಕಿಂಚಿತ್ ಚರಿತ್ರಕಥನವಿಷಯದಲ್ಲಾದರೂ, **ಸ್ಯಾತ್** = ಯುಕ್ತವೇ ಆಗುತ್ತದೆ.

**ತಾತ್ಪರ್ಯಾರ್ಥ :** ಶ್ರೀರಾಘವೇಂದ್ರಯತಿಸಾರ್ವಭೌಮರ ಅಪಾರವಾದ ಚರಿತ್ರೆಯೆಲ್ಲಿ ! ಮಿಣುಕುಹುಳದ ಮರಿಯ ಪ್ರಕಾಶದಂತೆ ಅತ್ಯಲ್ಪವಾದ ನನ್ನ ಬುದ್ಧಿಯೆಲ್ಲಿ ! ಇಂಥ ಅಲ್ಪಮತಿಯಾದ ನಾನು ಶ್ರೀರಾಘವೇಂದ್ರವ್ರತಿಶ್ರೇಷ್ಠರ ವಿಸ್ಮಯಕರವಾದ ಅಗಮ್ಯ ಮಹಿಮೆಗಳನ್ನು ವರ್ಣಿಸಲು ಅಸಮರ್ಥನಾಗಿರುವುದರಿಂದ 'ಶ್ರೀರಾಘವೇಂದ್ರ ವ್ರತೀಂದುಗಳ ಎಲ್ಲ ಚರಿತ್ರೆಯನ್ನು ಹೇಳುತ್ತೇನೆ' ಎಂದು ಈ ಮೊದಲು ಪ್ರತಿಜ್ಞೆ ಮಾಡಿದ್ದು ವಿಫಲವಾದಂತಾಯಿತು. ಹಾಗಿದ್ದರೂ ಕೂಡ ಸಮುದ್ರಸ್ನಾನ ಸಂಕಲ್ಪದಂತೆ ಆ ನನ್ನ ಪ್ರತಿಜ್ಞೆಯು ಯುಕ್ತವಾಗಿದೆಯೆಂದೇ ಭಾವಿಸುತ್ತೇನೆ.

**ಗುಣಪ್ರಕಾಶ :** "ಶ್ರೀರಾಯರ ಅಸಾಮಾನ್ಯವಾದ ಗ್ರಂಥಕರಣಾದಿ ಮಾಹಾತ್ಮ್ಯ-ವನ್ನು ವರ್ಣಿಸುತ್ತೇವೆ" ಎಂದು ಪ್ರತಿಜ್ಞೆ ಮಾಡಿದ ಶ್ರೀವಾದೀಂದ್ರತೀರ್ಥರು ಶ್ರೀರಾಯರ ಎಲ್ಲ ಮಹಿಮೆಗಳನ್ನು ತಮ್ಮಿಂದ ವರ್ಣಿಸಲು ಅಸಾಧ್ಯವೆಂದು ಶಂಕಿಸುವ ಮೂಲಕ ಅವರ ಅಪಾರವಾದ ಹಾಗೂ ಅಗಮ್ಯವಾದ ಮಹಿಮೆಯನ್ನು ಮತ್ತು ತಮ್ಮ ವಿನಯವನ್ನು ಪ್ರಕಾಶಪಡಿಸಿದ್ದಾರೆ.

**೧೪. ಅವತಾರಿಕಾ :** ಶ್ರೀರಾಘವೇಂದ್ರತೀರ್ಥರ ತೇಜಸ್ಸು ಅಪಾರವಾಗಿರುವದೆಂದು ತಿಳಿಸುತ್ತಾರೆ.

**ಯದ್ಭಾನೌ ಯತ್ಕೃಶಾನೌ ಯದಮೃತಕಿರಣೇ ಯದ್ಗ್ರಹೇಷೂದಿತೇಷು**
**ಜ್ಯೋತಿರ್ಯತ್ತಾರಕಾಸು ಪ್ರಥಿತಮಣಿಷು ಯದ್ಯಚ್ಚ ಸೌದಾಮಿನೀಷು ।**
**ಸಂಭೂಯೈತತ್ಸಮಸ್ತಂ ತ್ವದಮಿತಹೃದಯಾಕಾಶನಿರ್ಯತ್ಪ್ರಕಾಶೇ**
**ಧೀರಶ್ರೀರಾಘವೇಂದ್ರವ್ರತಿವರ ಭಜತೇ ಹಂತ ಖದ್ಯೋತರೀತಿಮ್ ॥೧೪॥**

**ಅನ್ವಯಾರ್ಥ :** **ಧೀರಶ್ರೀರಾಘವೇಂದ್ರವ್ರತಿವರ** = ಭೋ, ಜ್ಞಾನಿವರ್ಯರಾದ ಶ್ರೀರಾಘವೇಂದ್ರಗುರುಸಾರ್ವಭೌಮರೇ ! **ಭಾನೌ** = ಸೂರ್ಯನಲ್ಲಿ, **ಯತ್ ಜ್ಯೋತಿಃ** = ಯಾವ ಪ್ರಕಾಶವಿದೆಯೋ, **ಕೃಶಾನೌ** = ಅಗ್ನಿಯಲ್ಲಿ, **ಯತ್ ಜ್ಯೋತಿಃ** = ಯಾವ ಪ್ರಕಾಶವಿದೆಯೋ, **ಅಮೃತಕಿರಣೇ** = ಚಂದ್ರನಲ್ಲಿ, **ಯತ್ ಜ್ಯೋತಿಃ** = ಯಾವ ಪ್ರಕಾಶವಿದೆಯೋ, **ಉದಿತೇಷು** = ಉದಯಿಸಿದ ಸಕಲ, **ಗ್ರಹೇಷು** = ಗ್ರಹಗಳಲ್ಲಿ ಮತ್ತು, **ತಾರಕಾಸು** = ನಕ್ಷತ್ರಗಳಲ್ಲಿ, **ಯತ್ ಜ್ಯೋತಿಃ** = ಯಾವ ಪ್ರಕಾಶವಿದೆಯೋ, **ಪ್ರಥಿತಮಣಿಷು – ಪ್ರಥಿತ** = ಪ್ರಸಿದ್ಧವಾದ, **ಮಣಿಷು** = ಮಣಿಗಳಲ್ಲಿ, **ಯತ್ ಜ್ಯೋತಿಃ** = ಯಾವ ಪ್ರಕಾಶವಿದೆಯೋ, **ಸೌದಾಮಿನೀಷು** = ಮಿಂಚುಗಳ ಗೊಂಚಲುಗಳಲ್ಲಿ, **ಯತ್ ಜ್ಯೋತಿಃ** = ಯಾವ ಜ್ಯೋತಿ ಇದೆಯೋ, **ಏತತ್ ಸಮಸ್ತಂ** = ಇದೆಲ್ಲವನ್ನೂ (ಈ ಎಲ್ಲ ಪ್ರಕಾಶವನ್ನೂ), **ಸಂಭೂಯ** = ಒಟ್ಟುಗೂಡಿಸಿದರೂ ಅದು, **ತ್ವದಮಿತ-ಹೃದಯಾಕಾಶನಿರ್ಯತ್ ಪ್ರಕಾಶೇ – ತ್ವತ್** = ನಿಮ್ಮ (ಅಮಿತ = ಅಪರಿಮಿತವಾದ), **ಹೃದಯಾಕಾಶ** = ಹೃದಯಾಕಾಶದೊಳಗಿಂದ, **ನಿರ್ಯತ್** = ಹೊರಹೊಮ್ಮುತ್ತಿರುವ, **ಅಮಿತ ಪ್ರಕಾಶೇ** = ಅಪರಿಮಿತವಾದ ಪ್ರಕಾಶದ ಮುಂದೆ, **ಖದ್ಯೋತರೀತಿಂ – ಖದ್ಯೋತ** = ಮಿಣುಕುದೀಪದ ಹುಳದ, **ರೀತಿಂ** = ಅವಸ್ಥೆಯನ್ನು, **ಭಜತೇ** = ಹೊಂದುತ್ತದೆ. **ಹಂತ** = ಇದು ಆಶ್ಚರ್ಯವು.

**ತಾತ್ಪರ್ಯಾರ್ಥ :** ಪ್ರಾಜ್ಞರಾದ ಶ್ರೀರಾಘವೇಂದ್ರಯತಿಶಿರೋಮಣಿಗಳೇ ! ಸೂರ್ಯ, ಅಗ್ನಿ, ಚಂದ್ರ, ಏಕಕಾಲದಲ್ಲಿ ಉದಯಿಸುತ್ತಿರುವ ಗ್ರಹಗಳು ಹಾಗೂ ಅಸಂಖ್ಯ ನಕ್ಷತ್ರಗಳು, ಪ್ರಸಿದ್ಧವಾದ ಮಣಿಗಳು, ಮಿಂಚಿನ ಗೊಂಚಲುಗಳು ಇವುಗಳಲ್ಲಿ ಯಾವ ಯಾವ ಪ್ರಕಾಶಗಳು ಎಷ್ಟೆಷ್ಟಿರುವವೋ ಅವೆಲ್ಲವುಗಳನ್ನು ಒಟ್ಟುಗೂಡಿಸಿದಾಗ ಆಗುವ ಒಟ್ಟು ಪ್ರಕಾಶವು, ನಿಮ್ಮ ಹೃದಯಾಕಾಶದಿಂದ ಹೊರಹೊಮ್ಮುತ್ತಿರುವ ಅಮಿತ ಪ್ರಕಾಶಪುಂಜದ ಎದುರಿನಲ್ಲಿ ಮಿಣುಕುಹುಳದ ಪ್ರಕಾಶದಂತೆ ಅತ್ಯಲ್ಪವಾಗಿ ತೋರುತ್ತಿದೆ.

**ಗುಣಪ್ರಕಾಶ :** ಪರಮಾತ್ಮನ ಸೃಷ್ಟಿಯಲ್ಲಿ ಪ್ರಕಾಶಕ್ಕೆ ಹೆಸರಾದ ಸೂರ್ಯ, ಅಗ್ನಿ, ಚಂದ್ರ, ಏಕಕಾಲದಲ್ಲಿ ಉದಯಿಸಿದ ಮಂಗಳಾದಿ ಗ್ರಹಗಳು ಹಾಗೂ ಅಸಂಖ್ಯ ನಕ್ಷತ್ರಗಳು, ಪ್ರಖ್ಯಾತ ರತ್ನಾದಿ ಮಣಿಗಳು ಮತ್ತು ಮಿಂಚಿನ ಗೊಂಚಲುಗಳು ಇವೆಲ್ಲವು-ಗಳಲ್ಲಿರುವ ಪ್ರಕಾಶವನ್ನು ಒಟ್ಟುಗೂಡಿಸಿದರೂ ಆ ಪ್ರಕಾಶವು ಶ್ರೀರಾಘವೇಂದ್ರತೀರ್ಥರ

ಹೃದಯಾಕಾಶದಿಂದ ಹೊರಹೊಮ್ಮುತ್ತಿರುವ ತೇಜಸ್ಸಿನ ಮುಂದೆ ಒಂದು ದೀಪದ ಹುಳದ (ಮಿಣುಕು ಹುಳ) ಪ್ರಕಾಶದಂತೆ ಅತ್ಯಲ್ಪವಾಗಿ ಕಾಣಿಸುವದು ಎಂದು ಈ ಶ್ಲೋಕದಲ್ಲಿ ವರ್ಣಿಸುವ ಮೂಲಕ ಶ್ರೀರಾಯರ ಅಮಿತ ತೇಜಸ್ಸು ಎಂಬ ಗುಣದ ಸ್ತವನವನ್ನು ಕಾಣುತ್ತೇವೆ.

ಶ್ರೀಜಯರಾಮಾರ್ಯರು (ಶ್ರೀಧೀರೇಂದ್ರತೀರ್ಥರು) 'ತ್ವದಮಿತಹೃದಯಾಕಾಶ-ನಿರ್ಯತ್ಪ್ರಕಾಶೇ' ಎಂಬಲ್ಲಿ 'ಪ್ರಕಾಶ' ಪದಕ್ಕೆ 'ಪ್ರತಿಭಾಲಕ್ಷಣೇ ಪ್ರಕಾಶೇ' ಅಂದರೆ ಪ್ರತಿಭೆ ಎಂದು ವ್ಯಾಖ್ಯಾನಿಸಿದ್ದಾರೆ. ಸೂರ್ಯಾಗ್ನಿ ಚಂದ್ರಾದಿಗಳ ಒಟ್ಟು ಪ್ರಭೆಯು ಶ್ರೀರಾಯರ ಅಮಿತ ಪ್ರತಿಭೆಯ ಮುಂದೆ ಅತ್ಯಲ್ಪವಾಗಿ ಕಾಣುವುದರಿಂದ ಶ್ರೀರಾಯರ ಅಶ್ರುತಪ್ರತಿಭಾಗುಣದ ಸ್ತವನವೂ ಇಲ್ಲಿದೆಯೆಂದು ತಿಳಿಯಬಹುದು.

ಇಂಥ ಅಮಿತ ತೇಜಸ್ಸು ಮತ್ತು ಅಮಿತ ಪ್ರತಿಭೆಗಳಿರುವುದಕ್ಕೆ ಶ್ರೀರಾಯರ ಹೃದಯದಲ್ಲಿ ಆಕಾಶವಾಚ್ಯನಾದ ಶ್ರೀಹರಿಯು ಸದಾ ತನ್ನ ಸಕಲ ಪರಿವಾರದೊಂದಿಗೆ ವಾಸ ಮಾಡಿರುವುದೇ ಮುಖ್ಯ ಕಾರಣ ಎಂಬುದನ್ನು 'ಹೃದಯಾಕಾಶ' ಎಂಬ ಪದಭಾಗದಿಂದ ಸೂಚಿಸಲಾಗಿದೆ.

**ನರಹರಿ ಕೃಷ್ಣರಾಮ ಸಿರಿ ವೇದವ್ಯಾಸ । ಎರಡೆರಡು ನಾಲ್ಕು ಹರಿಮೂರ್ತಿಗಳು । ಪರಿವಾರ ಸಹಿತವಾಗಿ ಶಿರಿಸಹ ನಿಂದಿಹರು । ಸುರರ ಗುರು ಮಧ್ವಾಚಾರ್ಯರೇ ಮೊದಲಾಗಿ । ತರುವಾಯದಲ್ಲಿನ್ನು ತಾರತಮ್ಯಾನುಸಾರ ಪರಿಪರಿ ಯಿಪ್ಪರು ಹರಿಸೇವೆಗೆ ಇಲ್ಲಿ ॥...** ಎಂದು ಶ್ರೀಗೋಪಾಲದಾಸರು ಶ್ರೀರಾಯರನ್ನು ಸ್ತುತಿಸಿದ್ದಾರೆ.

"**ಓಂ ಆಕಾಶಸ್ತಲ್ಲಿಂಗಾತ್ ಓಂ**" (೧-೧-೭-೨೦), ಮತ್ತು "**ಓಂ ಆಕಾಶೋ ಅರ್ಥಾಂತರತ್ವಾದಿವ್ಯಪದೇಶಾತ್ ಓಂ**" (೧-೩-೧೨-೧೦೪) ಈ ಸೂತ್ರಗಳಿಂದ ಆಕಾಶನಾಮಕನು ಪರಮಾತ್ಮನೇ ಆಗಿದ್ದಾನೆಂದು ತಿಳಿಯುವದು. ಇಂಥ ಪರಮಾತ್ಮನು ಶ್ರೀರಾಯರ ಹೃದಯದಲ್ಲಿ ಸದಾ ವಾಸಮಾಡಿರುವಾಗ ಅಲ್ಲಿಂದ ಹೊರ ಹೊಮ್ಮುತ್ತಿರುವ ತೇಜಸ್ಸಿನ ಮುಂದೆ ಆ ಪರಮಾತ್ಮನಿಂದ ಸೃಷ್ಟವಾದ ಸೂರ್ಯಾಗ್ನಿಚಂದ್ರಾದಿಗಳ ಒಟ್ಟು ತೇಜಸ್ಸು ಅಲ್ಪವಾಗಿರುವುದೇನಚ್ಚರಿ !

ಶ್ರೀರಾಯರು ಇಷ್ಟು ತೇಜಸ್ವಿಗಳು ಹಾಗೂ ಅಪ್ರತಿಮ ಪ್ರತಿಭಾಶಾಲಿಗಳು ಆಗಿರುವುದರಿಂದಲೂ ಮತ್ತು ಇಂಥ ಮಹಾಮಹಿಮರ ಅನುಗ್ರಹದಿಂದ ತಾವು ಅವರ ಪೀಠದಲ್ಲಿ ವಿರಾಜಮಾನರಾಗಿ ಶ್ರೀಮೂಲರಾಮಚಂದ್ರನ ಪೂಜೆಯನ್ನು ಮಾಡುವ ಸೌಭಾಗ್ಯ ಪಡೆದುದರಿಂದಲೂ ಶ್ರೀವಾದೀಂದ್ರತೀರ್ಥರು ಹರ್ಷಿತರಾಗಿದ್ದಾರೆಂದು '**ಹಂತ**' (ಹರ್ಷೇ) ಎಂಬ ಪದದಿಂದ ಗೊತ್ತಾಗುತ್ತದೆ. ಈ ಪದದಿಂದ ಶ್ರೀರಾಯರ ಕೃಪಾ-ಗುಣವೂ ವ್ಯಕ್ತವಾಗುತ್ತದೆ.

೧೫. **ಅವತಾರಿಕಾ :** ಶ್ರೀರಾಘವೇಂದ್ರತೀರ್ಥರ ದೇವಸ್ವಭಾವವನ್ನೂ ಅವರ ಅನಿತರ ಸಾಧಾರಣ ಗ್ರಂಥರಚನಾ ಕೌಶಲವನ್ನೂ ಸ್ತುತಿಸುತ್ತಾರೆ.

**ಚಿತ್ತೇನಾಯುಕ್ತಮರ್ಥಂ ಕಲಯತಿ ಸಹಸಾ ನಾಭಿಧತ್ತೇ ನ ಸದ್ಭಿ-**
**ಸ್ಸಾಕಂ ಮೀಮಾಂಸತೇ ವಾ ನ ಲಿಖತಿ ವಚಸೋದ್ಘಾಟಯತ್ಯಾಶಯಂ ಸ್ವಮ್ ।**
**ಉಕ್ತಂ ನೋ ವಕ್ತಿ ಭೂಯಃ ಕ್ವಚಿದಪಿ ಲಿಖಿತಂ ನೈವ ನಿರ್ಮಾರ್ಷ್ಟಿ ತಸ್ಮಾ-**
**ದಸ್ಮಾಭಿಸ್ಸತ್ಪ್ರಬಂಧಪ್ರಣಯನವಿಷಯೇ ಸ್ತೂಯತೇ ರಾಘವೇಂದ್ರಃ ॥೧೫॥**

**ಅನ್ವಯಾರ್ಥ :** **ರಾಘವೇಂದ್ರಃ** = ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು, **ಚಿತ್ತೇ** = ಮನಸ್ಸಿನಲ್ಲಿಯೂ, **ಅಯುಕ್ತಂ** = ಅಸಮಂಜಸವಾದ, **ಅರ್ಥಂ** = ವಿಷಯವನ್ನು, **ನ ಕಲಯತಿ** = ಚಿಂತಿಸುವದಿಲ್ಲ, **ಸಹಸಾ** = ದುಡುಕಿ ಅಥವಾ ಸಾರಾಸಾರ ವಿಚಾರಿಸದೇ, **ನ ಅಭಿಧತ್ತೇ** = ಯಾವುದೊಂದನ್ನೂ ನುಡಿಯುವದಿಲ್ಲ, **ಸದ್ಭಿಃ ಸಾಕಂ** = ಜ್ಞಾನಿಗಳೊಂದಿಗೆ, **ಅಯುಕ್ತಂ ಅರ್ಥಂ ನ ಮೀಮಾಂಸತೇ** = ಅಯುಕ್ತವಾದ ವಿಷಯವನ್ನು ಕುರಿತು ಚರ್ಚಿಸುವದಿಲ್ಲ. **ಅಯುಕ್ತಂ ಅರ್ಥಂ ನ ಲಿಖತಿ** = ಅಯುಕ್ತವಾದ ಅರ್ಥವನ್ನು ಎಂದಿಗೂ ಬರಿಯುವದಿಲ್ಲ. **ಸ್ವಂ ಆಶಯಂ** = ತಮ್ಮ ಸ್ವಂತ ಅಭಿಪ್ರಾಯವನ್ನು, **ವಚಸಾ ನ ಉದ್ಘಾಟಯತಿ** = ಮಾತಿನಿಂದ ಎಂದಿಗೂ ಪ್ರಕಟಿಸುವದಿಲ್ಲ. **ಉಕ್ತಂ ಅರ್ಥಂ** = ಒಮ್ಮೆ ಹೇಳಿದ್ದನ್ನು, **ಭೂಯಃ** = ಮತ್ತೆ ಮತ್ತೆ, **ನ ವಕ್ತಿ** = ಹೇಳುವದಿಲ್ಲ, **ಲಿಖಿತಂ ಅರ್ಥಂ** = ಒಮ್ಮೆ ಬರೆದದ್ದನ್ನು, **ಕ್ವಚಿತ್ ಅಪಿ** = ಎಲ್ಲಿಯೂ, **ನ ಏವ ನಿರ್ಮಾರ್ಷ್ಟಿ** = ಅಳಿಸುವುದಾಗಲೀ, ತಿದ್ದುವುದಾಗಲೀ ಮಾಡುವದಿಲ್ಲ. **ತಸ್ಮಾತ್** = ಈ ಪ್ರಕಾರ ಗ್ರಂಥರಚನಾಕೌಶಲವಿರುವುದರಿಂದ, **ಸತ್ಪ್ರಬಂಧಪ್ರಣಯನವಿಷಯೇ – ಸತ್** = ಸಮೀಚೀನವಾದ, **ಪ್ರಬಂಧ** = ಗುರುಗುಣಸ್ತವನಾದಿ ಪ್ರಬಂಧಗಳ, **ಪ್ರಣಯನ ವಿಷಯೇ** = ರಚನಾವಿಷಯದಲ್ಲಿ (ರಚನಾವಸರದಲ್ಲಿ), **ಅಸ್ಮಾಭಿಃ** = ನಮ್ಮಿಂದ, **ರಾಘವೇಂದ್ರಃ** = ಶ್ರೀರಾಘವೇಂದ್ರತೀರ್ಥರು, **ಸ್ತೂಯತೇ** = ಸ್ತುತಿಸಲ್ಪಡುತ್ತಾರೆ.

**ತಾತ್ಪರ್ಯಾರ್ಥ :** ಶ್ರೀರಾಘವೇಂದ್ರಗುರುವರ್ಯರು ತಮ್ಮ ಮನದಲ್ಲೂ ಎಂದಿಗೂ ಅಯುಕ್ತವಾದ ಅರ್ಥವನ್ನು ಚಿಂತಿಸುವದಿಲ್ಲ. ದುಡುಕಿ ಏನನ್ನೂ ಹೇಳುವುದಿಲ್ಲ; ಸಜ್ಜನರೊಂದಿಗೆ ವಿತ್ತಂಡವಾದವನ್ನು ಮಾಡುವದಿಲ್ಲ, ಅಯುಕ್ತಾರ್ಥಗಳನ್ನು ತಮ್ಮ ಗ್ರಂಥದಲ್ಲಿ ಬರೆಯುವದಿಲ್ಲ. ತಮ್ಮ ಅಭಿಪ್ರಾಯವನ್ನು ಜೋರಾಗಿ ಮಂಡಿಸಿ ಅದನ್ನು ಒಪ್ಪುವಂತೆ ಇನ್ನೊಬ್ಬರನ್ನು ಆಗ್ರಹಿಸುವುದಿಲ್ಲ, ಒಮ್ಮೆ ಹೇಳಿದುದನ್ನು ಪುನಃ ಪುನಃ ಹೇಳುವುದಿಲ್ಲ. ಒಮ್ಮೆ ಬರೆದುದನ್ನು ಅಳಿಸುವದಿಲ್ಲ. ಇಂಥ ಶ್ರೇಷ್ಠ ಗುಣಗಳಿಂದ ಯುಕ್ತರಾಗಿರುವುದರಿಂದಲೇ ನಾವು ಸತ್ಪ್ರಬಂಧಗಳನ್ನು ರಚಿಸುವ ಸಂದರ್ಭಗಳಲ್ಲಿ ಶ್ರೀರಾಘವೇಂದ್ರಯತಿವರ್ಯರನ್ನು ತಪ್ಪದೇ ಸ್ತುತಿಸುತ್ತೇವೆ.

**ಗುಣಪ್ರಕಾಶ** : ಗುರುಗುಣಸ್ತವನದ ಪ್ರಸ್ತಾವನೆಯಲ್ಲಿ ಈ ಶ್ಲೋಕದ ಅರ್ಥವನ್ನು ವಿವರಿಸಿ ಇಲ್ಲಿರುವ ವಿಶೇಷಣಗಳಿಂದ ವ್ಯಕ್ತವಾಗುವ ಗುರುಗುಣಗಳನ್ನು ನಿರೂಪಿಸಲಾಗಿದೆ. ಇಲ್ಲಿ ಶ್ರೀರಾಯರ ಮನಃಶೌಚ, ವಾಕ್‌ಶುದ್ಧಿ, ಕ್ರಿಯಾಶೌಚ, ವಿನಯಗುಣಗಳನ್ನು ಮತ್ತು ಬಾಹ್ಯಶುದ್ಧಿ ಅಂತಃಶುದ್ಧಿಗಳನ್ನೂ ವರ್ಣಿಸಲಾಗಿದೆ.

ಶ್ರೀವಸುಧೇಂದ್ರತೀರ್ಥರ ವ್ಯಾಖ್ಯಾನದಲ್ಲಿ, ಈ ಶ್ಲೋಕದಲ್ಲಿ ಬರುವ **ತಸ್ಮಾತ್** ಎಂಬ ಪದಕ್ಕೆ **'ಗ್ರಂಥಪ್ರಣಯನಚಾತುರ್ಯೋಪೇತತ್ವಾತ್'** ಎಂದು ವ್ಯಾಖ್ಯಾನಿಸಿದ್ದರಿಂದ ಈ ಶ್ಲೋಕದಿಂದ ಶ್ರೀರಾಯರ 'ಗ್ರಂಥಪ್ರಣಯನ ಚಾತುರ್ಯ' ಎಂಬ ಗುಣವು ವರ್ಣಿತವಾಗಿದೆಯೆಂದು ತಿಳಿಯಬೇಕು.

**'ತಸ್ಮಾತ್ ಅಸ್ಮಾಭಿಃ ಸತ್ಪ್ರಬಂಧಪ್ರಣಯನವಿಷಯೇ ಸ್ತೂಯತೇ ರಾಘವೇಂದ್ರಃ'** – ಗ್ರಂಥರಚನೆ ಮಾಡಲು ಅತ್ಯವಶ್ಯವಾದ ಗುಣಗಳು ಮತ್ತು ಚಾತುರ್ಯಗುಣವು ಶ್ರೀರಾಯರಲ್ಲಿರುವುದರಿಂದ ಅವರ ಶ್ರೇಷ್ಠ ಗ್ರಂಥಗಳೇ ಮುಖ್ಯವಿಷಯವಾಗಿವುಳ್ಳ ಈ ಗುರುಗುಣಸ್ತವನ ವೆಂಬ ನಮ್ಮ ಕೃತಿಯಲ್ಲಿ ಶ್ರೀರಾಘವೇಂದ್ರರು ನಮ್ಮಿಂದ ಸ್ತುತಿಸಲ್ಪಡುತ್ತಾರೆ ಎಂದು ಶ್ರೀವಾದೀಂದ್ರತೀರ್ಥರು ಹೇಳುತ್ತಾರೆ.

'ಗುರುಗುಣಸ್ತವನಂ' ಎಂದರೆ "ಪ್ರಬಂಧಪ್ರಣಯನವಿಷಯಸ್ತವನಂ" ಎಂದು ಶ್ರೀಜಯರಾಮಾರ್ಯರ (ಶ್ರೀಧೀರೇಂದ್ರತೀರ್ಥರ) ವ್ಯಾಖ್ಯಾನದಿಂದ ತಿಳಿಯುತ್ತದೆ. ಅಂದರೆ ಈ 'ಗುರುಗುಣಸ್ತವನ'ದಲ್ಲಿ ಶ್ರೀರಾಯರ ಅನಿತರಸಾಧಾರಣ ಗ್ರಂಥ ಕರ್ತೃತ್ವ ಗುಣವನ್ನು ಅವರಿಂದ ರಚಿತವಾದ ವಿವಿಧಗ್ರಂಥಗಳ ವರ್ಣನೆ ಮಾಡುವ ಮೂಲಕ ಪ್ರಕಾಶಗೊಳಿಸಲಾಗುತ್ತದೆ ಎಂದು ಇವರ ವ್ಯಾಖ್ಯಾನದ ಅಭಿಪ್ರಾಯವಾಗಿದೆ.

**೧೬. ಅವತಾರಿಕಾ** : ಅಣುಮಧ್ವವಿಜಯ (ಪ್ರಮೇಯನವಮಾಲಿಕಾ) ವ್ಯಾಖ್ಯಾಕರಣದ ಮಹಾತ್ಮೆಯನ್ನು ಉತ್ಪ್ರೇಕ್ಷಿಸುತ್ತಾರೆ.

**ಧೀರಶ್ರೀರಾಘವೇಂದ್ರಂ ಕೃತನಿಜವಿಜಯಸ್ರಗ್ಧರಾರ್ಥಪ್ರಕಾಶಂ**
**ದೃಷ್ಟ್ವಾ ಸಂತುಷ್ಟಚೇತಾಃ ದಶಮತಿರಚಿರಾದಭ್ಯಷಿಂಚತ್ಪದೇ ಸ್ವೇ ।**
**ನೂನಂ ವಾಣೀ ತದೀಯಾನನನಲಿನಗತಾ ತತ್ಕೃತಸ್ವಪ್ರಿಯೈಕ-**
**ಪ್ರತ್ಯಾಸಂಗಪ್ರಹೃಷ್ಟಾ ಸ್ವಯಮಪಿ ತದನು ಸ್ವೇ ಪದೇ ಚಾಭ್ಯಷಿಂಚತ್ ॥೧೬॥**

**ಅನ್ವಯಾರ್ಥ** : **ದಶಮತಿಃ** = ದಶಪ್ರಮತಿಗಳಾದ ಶ್ರೀಮನ್ಮಧ್ವಾಚಾರ್ಯರು, **ಕೃತನಿಜವಿಜಯಸ್ರಗ್ಧರಾರ್ಥಪ್ರಕಾಶಂ** – **ಕೃತ** = ಮಾಡಲ್ಪಟ್ಟ, **ನಿಜವಿಜಯ** = ತಮ್ಮ ಮಹಿಮಾಪ್ರಕಾಶಕವಾದ, **ಸ್ರಗ್ಧರಾ** = ಸ್ರಗ್ಧರಾ ವೃತ್ತದಲ್ಲಿರುವ, **ಅರ್ಥಪ್ರಕಾಶಂ** = ಅಣುಮಧ್ವವಿಜಯಗ್ರಂಥದ ಅರ್ಥಬೋಧಕವಾದ ವ್ಯಾಖ್ಯಾನವುಳ್ಳ, **ಧೀರಶ್ರೀರಾಘವೇಂದ್ರಂ**

= ಜ್ಞಾನಿಶ್ರೇಷ್ಠ ಶ್ರೀರಾಘವೇಂದ್ರತೀರ್ಥರನ್ನು, **ದೃಷ್ಟ್ವಾ** = ನೋಡಿ, **ಸಂತುಷ್ಟಚೇತಾಃ** = ಪ್ರಸನ್ನಮನಸ್ಕರಾಗಿ, **ಅಚಿರಾತ್** = ಕೂಡಲೇ, **ಸ್ವೇ ಪದೇ** = (ಶ್ರೀರಾಘವೇಂದ್ರತೀರ್ಥರನ್ನು) ತಮ್ಮ ಪೀಠದಲ್ಲಿ, **ಅಭ್ಯಷಿಂಚತ್** = ಪಟ್ಟಾಭಿಷಿಕ್ತರನ್ನಾಗಿ ಮಾಡಿದರು. **ತದೀಯಾನನನಲಿನಗತಾ – ತದೀಯ** = ಆ ಶ್ರೀರಾಘವೇಂದ್ರಗುರುಗಳ, **ಆನನನಲಿನ** = ಮುಖಕಮಲದಲ್ಲಿ, **ರತಾ** = ಸನ್ನಿಹಿತಳಾಗಿದ್ದ, **ವಾಣೀ** = ಸರಸ್ವತೀದೇವಿಯು / ಭಾರತೀದೇವಿಯು, **ತತ್ಕೃತಸ್ವಪ್ರಿಯೈಕಪ್ರತ್ಯಾಸಂಗಪ್ರಹೃಷ್ಟಾ – ತತ್ಕೃತ** = ಆ ಶ್ರೀರಾಘವೇಂದ್ರತೀರ್ಥರಿಂದ ಮಾಡಿಸಲ್ಪಟ್ಟ, **ಸ್ವ** = ತನ್ನ, **ಪ್ರಿಯ** = ಪ್ರಿಯತಮನಾದ (ಪತಿಯಾದ), ವಾಯುದೇವನೊಂದಿಗಿನ, **ಏಕ** = ಮುಖ್ಯವಾದ, **ಪ್ರತ್ಯಾಸಂಗ** = ಸಂಗಮದಿಂದ, **ಪ್ರಹೃಷ್ಟಾ** = ಬಹು ಸಂತುಷ್ಟಳಾಗಿ, **ತದನು** = ಶ್ರೀಮದಾಚಾರ್ಯರು ಶ್ರೀರಾಘವೇಂದ್ರತೀರ್ಥರನ್ನು ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತರನ್ನಾಗಿ ಮಾಡಿದೊಡನೆಯೇ, **ಸ್ವಯಂ ಅಪಿ** = ತಾನೂ ಕೂಡ, **ಸ್ವೇ ಪದೇ** = (ಅವರನ್ನು) ತನ್ನ ವಿದ್ಯಾಸಾಮ್ರಾಜ್ಯದಲ್ಲಿ, **ನೂನಂ ಅಭ್ಯಷಿಂಚತ್** = ಅಭಿಷಿಕ್ತರನ್ನಾಗಿ ಮಾಡಿದಳು.

**ತಾತ್ಪರ್ಯಾರ್ಥ** : ಶ್ರೀರಾಘವೇಂದ್ರವರ್ಯರು ಸ್ರಗ್ಧರಾವೃತ್ತದಲ್ಲಿರುವ ಅಣುಮಧ್ವವಿಜಯಕ್ಕೆ ವ್ಯಾಖ್ಯಾನವನ್ನು ಬರೆದಿರುವುದನ್ನು ನೋಡಿ ಅತಿ ಹರ್ಷಿತರಾದ ಶ್ರೀಮದಾಚಾರ್ಯರು ಅವರನ್ನು ತಮ್ಮ ವೇದಾಂತಸಾಮ್ರಾಜ್ಯದ ಸಿಂಹಾಸನದಲ್ಲಿ ಪಟ್ಟಾಭಿಷೇಕ ಮಾಡಿದರು. ಶ್ರೀರಾಘವೇಂದ್ರಾರ್ಯರ ಮುಖಕಮಲದಲ್ಲಿ ವಿರಾಜಮಾನಳಾದ ಸರಸ್ವತಿಯು, ಅಣುಮಧ್ವವಿಜಯವ್ಯಾಖ್ಯಾನದಿಂದ ತನಗೆ ತನ್ನ ಪತಿಯೊಂದಿಗೆ (ಪ್ರತಿಪಾದ್ಯ ಪ್ರತಿಪಾದಕಭಾವ) ಸಂಬಂಧ ಉಂಟಾಗುವಂತೆ ಮಾಡಿದ್ದರಿಂದ ಅತಿ ಸಂತುಷ್ಟಳಾಗಿ ಕೂಡಲೇ ಶ್ರೀರಾಘವೇಂದ್ರರನ್ನು ತನ್ನ ಸ್ಥಾನವಾದ ವಿದ್ಯಾಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತರಾಗುವಂತೆ ಮಾಡಿದಳು.

**ಗುಣಪ್ರಕಾಶ** : ಶ್ರೀನಾರಾಯಣಪಂಡಿತಾಚಾರ್ಯರು ಶ್ರೀಮದಾಚಾರ್ಯರ ಚರಿತ್ರೆಯನ್ನು ತಿಳಿಸುವ ಸುಮಧ್ವವಿಜಯವೆಂಬ ೧೬ ಸರ್ಗಗಳ ಒಂದು ಮಹಾಕಾವ್ಯವನ್ನು ರಚಿಸಿದರು. ನಿತ್ಯಪಾರಾಯಣಕ್ಕೆ ಅದರಲ್ಲೂ ದ್ವಾದಶೀ ದಿನದಂದು ಪಾರಾಯಣಕ್ಕೆ ಅನುಕೂಲವಾಗಲೆಂದು ಸುಮಧ್ವವಿಜಯದ ಒಂದೊಂದು ಸರ್ಗದ ವಿಷಯವನ್ನು ಎರಡೆರಡೇ ಶ್ಲೋಕಗಳಲ್ಲಿ ತಿಳಿಸುವ 'ಅಣುಮಧ್ವವಿಜಯ' ಎಂಬ ಇನ್ನೊಂದು ಗ್ರಂಥವನ್ನು ರಚಿಸಿದರು. ಶ್ರೀರಾಯರು ಈ ಚಿಕ್ಕ ಗ್ರಂಥಕ್ಕೆ ವ್ಯಾಖ್ಯಾನವನ್ನು ಬರೆದರು. ವ್ಯಾಖ್ಯಾನವನ್ನು ಬರೆದುದರ ಫಲವಾಗಿ ಶ್ರೀಮದಾಚಾರ್ಯರು ಮತ್ತು ಸರಸ್ವತೀದೇವಿಯರು ಸಂತುಷ್ಟರಾಗಿ ಅವರನ್ನು ವೇದಾಂತಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತರನ್ನಾಗಿ ಮಾಡಿ ಅನುಗ್ರಹಿಸಿದರು. ಇಷ್ಟು ವಿಷಯವು ಈ ಶ್ಲೋಕಾಭಿಪ್ರಾಯವಾಗಿದೆ.

ಇದರಿಂದ ಶ್ರೀನಾರಾಯಣಪಂಡಿತರ 'ಅಣುಮಧ್ವವಿಜಯ' ಮತ್ತು ಶ್ರೀರಾಯರ ಅಣುಮಧ್ವವಿಜಯ ವ್ಯಾಖ್ಯಾನಗಳು ಎಷ್ಟು ಮಹಿಮೋಪೇತವಾಗಿವೆಯೆಂಬುದು ಗೊತ್ತಾಗುತ್ತದೆ. 'ಅಣುಮಧ್ವವಿಜಯ' ಗ್ರಂಥದ ಕರ್ತೃಗಳಾದ ಶ್ರೀನಾರಾಯಣ ಪಂಡಿತಾಚಾರ್ಯರ ಶ್ರೇಷ್ಠತೆಯ ವರ್ಣನೆಯೂ ಇಲ್ಲಿರುವದು. 'ಧೀರಶ್ರೀರಾಘವೇಂದ್ರಂ' ಎನ್ನುವ ಪದದಲ್ಲಿ ಶ್ರೀರಾಯರ ಜ್ಞಾನ ಹಾಗೂ ಕಾಂತಿಗಳ ಮತ್ತು ಜ್ಞಾನ ಭಕ್ತಿವೈರಾಗ್ಯಾದಿಗಳೆಂಬ ಸಂಪತ್ತಿನ ಸ್ತವನವೂ ಉಕ್ತವಾಗಿದೆ.

**ವಿಶೇಷ ವಿಚಾರ :** ಈ ಶ್ಲೋಕದಲ್ಲಿ ತೋರುವ ಒಂದು ಚರ್ಚಾಸ್ಪದ ವಿಷಯವನ್ನು ಕುರಿತು ಈ ಕೆಳಗೆ ವಿವೇಚಿಸಲಾಗಿದೆ –

೧. ಅಣುಮಧ್ವವಿಜಯಕ್ಕೆ ಶ್ರೀರಾಯರು ಆಶ್ರಮಪೂರ್ವದಲ್ಲಿ ವೆಂಕಟನಾಥಾರ್ಯ-ರಾಗಿದ್ದಾಗ ವ್ಯಾಖ್ಯಾನವನ್ನು ಬರೆದಿರುವರೆಂದು ಪ್ರತೀತಿ ಇದೆ. ಆದರೆ ಈ ಶ್ಲೋಕದ 'ಕೃತನಿಜವಿಜಯಸ್ರಗ್ಧರಾರ್ಥಪ್ರಕಾಶಂ ಧೀರಶ್ರೀರಾಘವೇಂದ್ರಂ' ಎಂಬಲ್ಲಿ ವ್ಯಾಖ್ಯಾನ-ವನ್ನು ಬರೆದವರು ಶ್ರೀರಾಘವೇಂದ್ರರು ಎಂದು ಅರ್ಥವಾಗುತ್ತದೆ.

೨. **ನೂನಂ ವಾಣೀ ತದೀಯಾನನನಲಿನಗತಾ** = ಶ್ರೀರಾಘವೇಂದ್ರರ ಮುಖಕಮಲ-ದಲ್ಲಿ ವಿರಾಜಮಾನಳಾದ ಸರಸ್ವತಿಯು ಅಂದರೆ ಸರಸ್ವತಿಯು ಶ್ರೀರಾಘವೇಂದ್ರರ ಮುಖದಲ್ಲಿ ಸನ್ನಿಹಿತಳಾಗಿದ್ದಾಳೆ ಎಂದು ತಿಳಿಯುವದು. ಶ್ರೀರಾಘವೇಂದ್ರವಿಜಯದಲ್ಲಿ ಇದೇ ಸರಸ್ವತಿಯು,

**"ಶ್ರೀರಾಮಾರ್ಚಾ ಪೂಜ್ಯತೇ ಯೇನ ತಸ್ಮಿನ್ನ್ಯಾಸಂ ಯನ್ಮೇಽಕಲ್ಪಯದ್ವ್ಯಾಸದೇವಃ ।**
**ಕರ್ಮಂದೀಂದ್ರೈರೇವ ಪೂಜಾಪಿ ಕ್ಲೃಪ್ತಾ ತಸ್ಮಾತ್ತ್ಸಾಹಂ ತೇಷು ನಿತ್ಯಂ ವಸಾಮಿ ||೬-೫೩||**
**ವಿಧ್ಯಾಯತ್ತಂ ತೇ ಯತಿತ್ವಂ ನ ಶಕ್ಯಂ ತ್ಯಕ್ತುಂ ಪ್ರಾಪ್ತಂ ತ್ವದ್ವಶತ್ವಂ ಮಮಾಪಿ ||೬-೬೫||**

– ಯಾರು ಶ್ರೀಮೂಲರಾಮಚಂದ್ರನನ್ನು ಪೂಜಿಸುವರೋ ಅವರಲ್ಲೇ ವಾಸ ಮಾಡಬೇಕೆಂದು ಶ್ರೀವೇದವ್ಯಾಸರು ನನಗೆ ಆಜ್ಞಾಪಿಸಿದ್ದಾರೆ. ಸನ್ಯಾಸಿಗಳಾದವರೇ ಶ್ರೀರಾಮಚಂದ್ರನ ಪೂಜೆ ಮಾಡಬೇಕೆಂಬುದೂ ನಿಶ್ಚಿತವಾಗಿದೆ. ಆದ್ದರಿಂದ ನಾನು ಶ್ರೀಮೂಲರಾಮಚಂದ್ರನ ಪೂಜೆ ಮಾಡುವ ಸನ್ಯಾಸಿಗಳಲ್ಲೇ ನಿತ್ಯ ಸನ್ನಿಹಿತಳಾಗಿರುವೆನು. ಸನ್ಯಾಸಿಯಾಗುವದು ನಿನ್ನ ಹಣೆಬರಹದಲ್ಲಿ ಬರೆದಿದ್ದು ನಿನ್ನ ವಶದಲ್ಲಿರುವದು ನನ್ನ ಹಣೆಬರಹವಾಗಿದೆ." ಎಂದು ಮುಂತಾಗಿ ವೆಂಕಟನಾಥಾರ್ಯರಿಗೆ ಹೇಳುತ್ತಾಳೆ. ಸರಸ್ವತಿಯು ಉಪದೇಶದ ಅನಂತರ ಅವರು ಶ್ರೀಸುಧೀಂದ್ರತೀರ್ಥರಿಂದ ತುರೀಯಾಶ್ರಮ-ವನ್ನು ಸ್ವೀಕರಿಸಿ 'ಶ್ರೀರಾಘವೇಂದ್ರ' ಎಂಬ ನಾಮಧೇಯವುಳ್ಳವರಾಗುತ್ತಾರೆ. ಈ ಪ್ರಸಂಗದಿಂದ ಆಶ್ರಮ ಸ್ವೀಕಾರಾನಂತರವೇ ಸರಸ್ವತಿಯು ಅವರ ಮುಖಕಮಲದಲ್ಲಿ ಸನ್ನಿಹಿತಳಾಗಿದ್ದಾಳೆಂದು ಭಾವಿಸಬೇಕಾಗುತ್ತದೆ (ವಾಣೀ ತದೀಯಾನನನಲಿನಗತಾ).

ಇದನ್ನೆಲ್ಲ ಗಮನಿಸಿದರೆ ಆಶ್ರಮಸ್ವೀಕರಿಸಿದ ನಂತರ ಸ್ವಲ್ಪೇ ದಿನಗಳಲ್ಲಿ ಶ್ರೀರಾಘವೇಂದ್ರತೀರ್ಥರು ಅಣುಮಧ್ವವಿಜಯಕ್ಕೆ ವ್ಯಾಖ್ಯಾನ ಬರೆದಿರಬಹುದೆಂದು ತೋರುತ್ತದೆ. ಈ ವ್ಯಾಖ್ಯಾನದಿಂದ ಶ್ರೀಮದಾಚಾರ್ಯರು ಮತ್ತು ಸರಸ್ವತಿಯರಿಬ್ಬರೂ ಪ್ರಸನ್ನರಾಗಿ ತಮ್ಮ ಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತರನ್ನಾಗಿ ಮಾಡಿದರು ಎಂದು ಹೇಳಲು ಬರುವದು. ಹಾಗಿದ್ದರೆ ಶ್ರೀಸುಧೀಂದ್ರತೀರ್ಥರಿಂದ ಆಶ್ರಮ ಸ್ವೀಕರಿಸಿ "ಮಂತ್ರೈಃ ಪೂತೈರ್ವಾರಿಜಾದ್ಯೈಃ ..... **ಸೋಽಭಿಷಿಚ್ಯ ಪ್ರಾಜ್ಞಂ ವಿದ್ಯಾರಾಜ್ಯರಾಜಂ ವಿತೇನೇ ||**" – *ರಾ.ವಿ. ೬-೭೩* ಎಂದು ಅಭಿಷಿಕ್ತರಾದಾಗ ಪಟ್ಟಾಭಿಷಿಕ್ತರಾಗಿರಲಿಲ್ಲವೇ ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಇದಕ್ಕೆ ಸಮಾಧಾನವಿಷ್ಟೆ –

**"ಜಾನೀಹಿ ತ್ವಂ ವೆಂಕಟಾರ್ಯ ತ್ವದಾರ್ಯೇ ವಾಸೋ ಯನ್ಮೇ ವತ್ಸರದ್ವಂದ್ವಮೇವ || ರಾ.ವಿ. ೬-೫೨ ||**

ಹೇ ವೆಂಕಟಾರ್ಯ ! ನಿಮ್ಮ ಗುರುಗಳಾದ ಶ್ರೀಸುಧೀಂದ್ರತೀರ್ಥರಲ್ಲಿ ನಾನು ಇನ್ನು ಕೇವಲ ಎರಡು ವರ್ಷಗಳವರೆಗೆ ಮಾತ್ರ ಇರುವೆನು." ಎಂದು ಹೇಳುವಾಗ ಸರಸ್ವತಿಯು ಶ್ರೀಸುಧೀಂದ್ರರ ಆಯುಃಶೇಷವನ್ನೂ ತಿಳಿಸುತ್ತಾಳೆ. ಆಶ್ರಮ ಸ್ವೀಕಾರಾನಂತರ ಗುರುಪ್ರೀತಿಗಾಗಿ ಶ್ರೀರಾಘವೇಂದ್ರರು ಅಣುಮಧ್ವವಿಜಯಕ್ಕೆ ವ್ಯಾಖ್ಯಾವ ಬರೆದಿರಬಹುದು. ಮುಂದೆ ಕೆಲವು ದಿನಗಳ ನಂತರ ಶ್ರೀಪದ್ಮನಾಭತೀರ್ಥರು, ಶ್ರೀಕವೀಂದ್ರರು, ಶ್ರೀವಾಗೀಶತೀರ್ಥರು, ಶ್ರೀವ್ಯಾಸರಾಜರೇ ಮೊದಲಾದ ಮಹನೀಯರ ಸನ್ನಿಧಿಯಲ್ಲಿ ಶ್ರೀಸುಧೀಂದ್ರತೀರ್ಥರು ವೃಂದಾವನಸ್ಥರಾದ ಮೇಲೆ ಶ್ರೀರಾಘವೇಂದ್ರರು ಪೂರ್ಣಪ್ರಮಾಣದ ಸಂಸ್ಥಾನಾಧಿಪತಿಗಳಾಗಬೇಕಾಯಿತು. ಈ ಎಲ್ಲ ವಿಷಯವನ್ನು ಮನದಲ್ಲಿಟ್ಟುಕೊಂಡು 'ಶ್ರೀಮದಾಚಾರ್ಯರು ಹಾಗೂ ಸರಸ್ವತಿಯರು ಶ್ರೀರಾಘವೇಂದ್ರರ ಅಣುಮಧ್ವವಿಜಯದ ವ್ಯಾಖ್ಯಾನದಿಂದ ಪ್ರೀತರಾಗಿ ಅವರನ್ನು ಪೂರ್ಣ ಪ್ರಮಾಣದಲ್ಲಿ ಮಹಾಸಂಸ್ಥಾನಾಧಿಪತಿಗಳನ್ನಾಗಿಯೂ ವಿದ್ಯಾಸಾಮ್ರಾಜ್ಯದ ಅಧಿಪತಿಗಳನ್ನಾಗಿಯೂ ಮಾಡಿದರು' ಎಂದು ಶ್ರೀವಾದೀಂದ್ರರು ಕಾವ್ಯಮಯವಾಗಿ ವರ್ಣಿಸಿರುವರೆಂದು ತಿಳಿದರೆ ತಪ್ಪಾಗಲಿಕ್ಕಿಲ್ಲ. ವ್ಯಾಖ್ಯಾನಗಳಿಂದಲೂ ಇದೇ ಅರ್ಥವು ಸ್ಪಷ್ಟವಾಗುತ್ತದೆ. **ದಶಮತಿಃ ಧೀರಶ್ರೀರಾಘವೇಂದ್ರಂ ಸ್ವೇ ಪದೇ ಅಭ್ಯಷಿಂಚತ್** – ಎಂಬುದಕ್ಕೆ ಶ್ರೀಜಯರಾಮಾರ್ಯರು (ಶ್ರೀಧೀರೇಂದ್ರತೀರ್ಥರು) ಶ್ರೀಮಧ್ವಾಚಾರ್ಯಃ **ಧೀರಶ್ರೀರಾಘವೇಂದ್ರಂ ಆಸ್ಥಾನಾಧಿಪತ್ಯೇ ಅಭಿಷೇಚನಂ ಕೃತವಾನ್** ಎಂದೂ ಶ್ರೀವಸುಧೇಂದ್ರತೀರ್ಥರು **ಶ್ರೀಮೂಲರಾಮವೇದವ್ಯಾಸಾರ್ಚನಾದಿರೂಪಸ್ವಕೀಯಸಾಮ್ರಾಜ್ಯಪದೇ ಶ್ರೀರಾಘವೇಂದ್ರಂ ಅಭ್ಯಷಿಕ್ತಮಕರೋತ್** ಎಂದೂ ವ್ಯಾಖ್ಯಾನಿಸಿದ್ದಾರೆ. ಶ್ರೀಸುಧೀಂದ್ರರು ಬೃಂದಾವನಸ್ಥರಾದ ನಂತರ ಶ್ರೀರಾಘವೇಂದ್ರರಿಗೆ ಪೂರ್ಣಪ್ರಮಾಣದ ಸಾಮ್ರಾಜ್ಯಾಧಿಪತ್ಯ ಸಿಕ್ಕಿತು ಮತ್ತು ಶ್ರೀಮೂಲರಾಮ

ವೇದವ್ಯಾಸರ ಪೂಜಾದಿಗಳನ್ನು ಸ್ವತಂತ್ರವಾಗಿ ನಿರ್ವಹಿಸಲು ಸಾಧ್ಯವಾಯಿತೆಂದು ಈ ವ್ಯಾಖ್ಯಾನಗಳಿಂದ ತಿಳಿದು ಬರುವದು.

ಅಣುಮಧ್ವವಿಜಯ (ಪ್ರಮೇಯ ನವಮಾಲಿಕಾ) ವ್ಯಾಖ್ಯಾನದ ಮಂಗಳಾಚರಣೆಯು ಹೀಗಿದೆ –

**ಇಂದಿರಾಪತಿಮಾನಮ್ಯ ಪೂರ್ಣಬೋಧಾನ್ ಗುರೂನಪಿ ।**
**ವ್ಯಾಖ್ಯಾಸ್ಯಾಮಿ ಯಥಾಬೋಧಂ ಪ್ರಮೇಯನವಮಾಲಿಕಾಮ್ ॥**

ಶ್ರೀರಾಯರು ತಮ್ಮ ಗ್ರಂಥಗಳಲ್ಲಿ ಇಂದಿರಾಪತಿಯನ್ನು ನಮಸ್ಕರಿಸಿದ ಕೆಲವು ಮಂಗಳಾಚರಣ ಶ್ಲೋಕಗಳನ್ನು ಕೆಳಗೆ ಕೊಡಲಾಗಿದೆ –

೧. **ಇಂದಿರಾರಮಣಂ ನತ್ವಾ ಪೂರ್ಣಬೋಧಾದಿಕಾನ್ ಗುರೂನ್ ।**
**ವಿವೃಣೋಮಿ ಯಥಾಬೋಧಂ ಕಥಾಲಕ್ಷಣಪಂಚಿಕಾಮ್ ॥**

*– ಕಥಾಲಕ್ಷಣಟೀಕಾ ಟಿಪ್ಪಣೀ ಭಾವದೀಪ.*

೨. **ಜಗಜ್ಜನ್ಮಸ್ಥೇಮಲಯನಿಯಮಾ ಯದಪಾಂಗತಃ ।**
**ತಂ ವಂದೇ ಪರಮಾನಂದಮಿಂದಿರಾಮಂದಿರೋರಸಮ್ ॥**

*– ತತ್ತ್ವೋದ್ಯೋತಟೀಕಾ ಭಾವದೀಪಃ*

೩. **ಅಮಂದಾನಂದಸಂದೋಹದೇಹಾಯೇಂದೀವರತ್ವಿಷೇ ।**
**ಇಂದಿರಾಸ್ಯಾಬ್ಜಪೀಯೂಷಜುಷೇ ಕಂಸದ್ವಿಷೇ ನಮಃ ॥**

*– ವಾದಾವಲೀ ಭಾವದೀಪ.*

೪. **ಯತ್ಪಾದಪದ್ಮೇ ಸಂಸ್ಮೃತ್ಯ ಲೋಕೋಽವದ್ಯಾನ್ಯವದ್ಯತಿ ।**
**ತಂ ವಂದೇ ಪರಮಾತ್ಮಾನಮಿಂದಿರಾಮಂದಿರೋರಸಮ್ ॥**

*– ತತ್ತ್ವಪ್ರಕಾಶಿಕಾ ಭಾವದೀಪ. ಅ.೨.*

**ಯದ್‌ಭ್ರೂಜೃಂಭೇಣ ವಿಶ್ವಸ್ಯ ಸ್ಥಿತ್ಯುತ್ಪತ್ತ್ಯಾದಿಕಂ ಭವೇತ್ ।**
**ತಸ್ಯ ಶ್ರೀಪದ್ಮನಾಭಸ್ಯ ಪಾದಪದ್ಮಂ ಸಮಾಶ್ರಯೇ ॥** ಎಂದು ಅಣುಮಧ್ವವಿಜಯ ವ್ಯಾಖ್ಯಾನದ ಅಂತಿಮ ಶ್ಲೋಕವನ್ನು ಹೋಲುವ ಯದ್‌ತದ್ ಸಂಬಂಧರೂಪವಾದ ಶ್ಲೋಕಗಳು ಶ್ರೀರಾಯರ ಕೆಲವು ಕೃತಿಗಳ ಅಂತಿಮದಲ್ಲಿ ಕಂಡುಬರುತ್ತವೆ.

ಈ ರೀತಿ ಆದಿ ಶ್ಲೋಕಗಳನ್ನು ಗಮನಿಸಿದಾಗ ಇಂದಿರಾಪತಿಯನ್ನು ನಮಿಸುವದು ಅನೇಕ ಕಡೆ ಕಂಡುಬಂದಿದೆ. ಅಂತ್ಯದ ಶ್ಲೋಕಗಳಲ್ಲೂ ಹೋಲಿಕೆ ಕೆಲವೆಡೆ ಇದೆ. ಈ ಕಾರಣದಿಂದಲೂ ಈ ವ್ಯಾಖ್ಯಾನವು ಆಶ್ರಮಾನಂತರ ರಚಿಸಲ್ಪಟ್ಟಿರಬೇಕೆಂದು ತಿಳಿಯಬಹುದು.

ಆದರೆ ವ್ಯಾಖ್ಯಾನದ ಕೊನೆಗೆ 'ಇತಿ ಶ್ರೀಮತ್ಕವಿಕುಲತಿಲಕತ್ರಿವಿಕ್ರಮಪಂಡಿತಾ-ಚಾರ್ಯಸುತ ನಾರಾಯಣಪಂಡಿತಾಚಾರ್ಯವಿರಚಿತ ಪ್ರಮೇಯನವಮಾಲಿಕಾಯಾಃ **"ಮಹಾಭಾಷ್ಯವೆಂಕಟಭಟ್ಟಕೃತಾ"** ಗೂಢಭಾವಪ್ರಕಾಶಿಕಾಖ್ಯಾ ವ್ಯಾಖ್ಯಾ ಸಮಾಪ್ತಾ ||' ಎಂದಿದೆ. ಇದನ್ನು ನೋಡಿದಾಗ ಈ ವ್ಯಾಖ್ಯಾನವನ್ನು ಪೂರ್ವಾಶ್ರಮದಲ್ಲೇ ಬರೆದಿರಬಹುದೆಂದು ಕಾಣುವದು.

ಗುರುಗುಣಸ್ತವನದಲ್ಲಿಯ ಶ್ಲೋಕದಿಂದ ಅಣುಮಧ್ವವಿಜಯವ್ಯಾಖ್ಯಾನವು ಆಶ್ರಮಾನಂತರ ಶ್ರೀರಾಘವೇಂದ್ರರಿಂದ ರಚಿಸಲ್ಪಟ್ಟಿರಬಹುದೆಂದೂ ಮುಕ್ತಾಯದ ವಾಕ್ಯದಿಂದ ಆಶ್ರಮಪೂರ್ವದಲ್ಲಿ ಶ್ರೀವೆಂಕಟಾರ್ಯರಿಂದ ರಚಿಸಲ್ಪಟ್ಟಿರುವದೆಂದೂ ತೋರುತ್ತದೆ. ಈ ರೀತಿಯ ಎರಡು ಕೋಟಿಗಳು ಉಪಸ್ಥಿತವಾಗಿರುವದರಿಂದ ಸಂಶಯೋ-ದ್ಭಾವನೆಗೆ ಅವಕಾಶವಿದ್ದು ಬಲ್ಲವರು ಈ ವಿಷಯದಲ್ಲಿ ದಾಖಲೆಗಳೊಂದಿಗೆ ಇದಮಿತ್ಥಂ ಎಂದು ನಿರ್ಧರಿಸಬೇಕೆಂದು ಪ್ರಾರ್ಥಿಸುತ್ತೇನೆ. ಇದೇನು ಅಂಥ ದೊಡ್ಡ ವಿಷಯವಾಗಿರ-ದಿದ್ದರೂ ಜಿಜ್ಞಾಸಾ ಕುತೂಹಲದೊಂದಿಗೆ ಈ ಮೇಲಿನ ಚರ್ಚೆಯನ್ನು ಮಾಡಲಾಗಿದೆ.

೧೭. **ಅವತಾರಿಕಾ** : ವಾದಾವಲೀಗ್ರಂಥವ್ಯಾಖ್ಯಾನದ ಮಾಹಾತ್ಮ್ಯವನ್ನು ವರ್ಣಿಸುತ್ತಾರೆ.

**ಗ್ರಂಥೋ ವಾದಾವಲೀ(ಲಿಃ) ದ್ರಾಗಭಜತ ವಿದಿತೋ ದುರ್ಮತಾರಣ್ಯದಾಹಾ-**
**ದಾಪೂರ್ವಾರ್ಧಪ್ರತೀಪಕ್ರಮಪರಿಪಠಿತಸ್ವಾಭಿಧಾಗೋಚರತ್ವಮ್ ।**
**ತಸ್ಯ ಶ್ರೀರಾಘವೇಂದ್ರವ್ರತಿವರ ಭವತೋ ವಾಯುವಂಶಪ್ರಸೂತೇ-**
**ರೇತಹ್ಯುದ್ದೀಪನಂ ಯತ್ತದುಚಿತಮಿತಿ ಮೇ ಮಾನಸೀವೃತ್ತಿರಿಂಧೇ || ೧೭ ||**

**ಅನ್ವಯಾರ್ಥ** : **ವಿದಿತಃ** = ಪ್ರಸಿದ್ಧವಾದ, **ವಾದಾವಲೀ ಗ್ರಂಥಃ** = ವಾದಾವಲೀ ಎಂಬ ಶ್ರೀಜಯತೀರ್ಥಕೃತ ಗ್ರಂಥವು, **ದುರ್ಮತಾರಣ್ಯದಾಹಾತ್ – ದುರ್ಮತ** = ದುರ್ಮತಗಳೆಂಬ, **ಅರಣ್ಯ** = ಅರಣ್ಯವನ್ನು, **ದಾಹಾತ್** = ಸುಟ್ಟು ಭಸ್ಮ ಮಾಡಿರು-ವುದರಿಂದ, **ದ್ರಾಕ್** = ಕೂಡಲೇ, **ಆಪೂರ್ವಾರ್ಧಪ್ರತೀಪಕ್ರಮಪರಿಪಠಿತಸ್ವಾಭಿಧಾ-ಗೋಚರತ್ವಂ – ಆಪೂರ್ವಾರ್ಧ** = 'ವಾದಾವಲೀ' ಎಂಬ ಸಂಪೂರ್ಣ ಹೆಸರಿನೊಳಗೆ ಪೂರ್ವಾರ್ಧದವರೆಗೆ, ಅಂದರೆ 'ವಾದಾ'ದ ವರೆಗೆ, **ಪ್ರತೀಪಕ್ರಮ** = ವಿಪರೀತ ಕ್ರಮದಿಂದ, **ಪರಿಪಠಿತ** = ಹೇಳಲ್ಪಟ್ಟ, ಅಂದರೆ 'ದಾವಾ' ಎಂದಾದ, **ಸ್ವಾಭಿಧಾ** = ತನ್ನ ಹೆಸರಿನ, **ಗೋಚರತ್ವಂ** = ವಿಷಯತ್ವವನ್ನು, **ಅಭಜತ** = ಹೊಂದಿತು. (ಅಂದರೆ ವಾದಾವಲಿಯು ದಾವಾವಲಿ ಎಂದಾಯಿತು). **ಶ್ರೀರಾಘವೇಂದ್ರವ್ರತಿವರ** = ಶ್ರೀರಾಘವೇಂದ್ರ-ಯತಿವರ್ಯರೇ ! **ವಾಯುವಂಶಪ್ರಸೂತೇಃ – ವಾಯುವಂಶ** = ವಾಯ್ವವತಾರಿ

ಶ್ರೀಮದಾಚಾರ್ಯರ ವಂಶದಲ್ಲಿ, **ಪ್ರಸೂತೇಃ** = ಜನ್ಮವೆತ್ತಿರುವ, **ಭವತಃ** = ನಿಮ್ಮ ದೆಶೆಯಿಂದ, **ಏತರ್ಹಿ** = ಈಗ, **ಯತ್ ಉದ್ದೀಪನಂ** = ಯಾವ ದಾವಾವಲಿಯ ಉದ್ದೀಪನವು ಉಂಟಾಗಿರುವದೋ ಮತ್ತು ವಾದಾವಲಿಯ ಪ್ರಕಾಶವುಂಟಾಗಿರುವದೋ, **ತತ್** = ಅದು, **ಉಚಿತಂ ಇತಿ** = ಯೋಗ್ಯವೇ ಆಗಿರುವದೆಂದು, **ಮೇ** = ನನ್ನ, **ಮಾನಸೀ ವೃತ್ತಿಃ** = ಮನಃಸಂಬಂಧಿಯಾದ ಪ್ರತಿಭೆಯು, **ಇಂಧೇ** = ಪ್ರವರ್ತಿಸುತ್ತದೆ. (ತಿಳಿಸುತ್ತದೆ.) (ನಾನು ತಿಳಿಯುತ್ತೇನೆ.)

**ತಾತ್ಪರ್ಯಾರ್ಥ** : ಭೋ ಶ್ರೀರಾಘವೇಂದ್ರವ್ರತಿವರರೇ ! ಪ್ರಸಿದ್ಧವಾದ 'ವಾದಾವಲೀ' ಎಂಬ ಶ್ರೀಜಯತೀರ್ಥವಿರಚಿತ ಗ್ರಂಥವು ದುರ್ಮತಗಳೆಂಬ ಅರಣ್ಯಗಳನ್ನು ಸುಡುವ ನಿಮಿತ್ತದಿಂದ (ದುರ್ಮತಗಳನ್ನು ಖಂಡಿಸುವ ಮೂಲಕ) ವಾದಾವಲೀ ಶಬ್ದದ ಪೂರ್ವಾರ್ಧವಾದ 'ವಾದಾ'ವನ್ನು ವ್ಯತ್ಕ್ರಮದಿಂದ ಪಠಿಸಿದಾಗ ದಾವಾ ಎಂದಾಗಿ ದಾವಾವಲೀ ಎಂದಾಯಿತು. ಹೀಗೆ ವಾದಾವಲಿಯು ದಾವಾವಲಿಯಾಗಿ ದುರ್ಮತಾರಣ್ಯಗಳನ್ನು ಸುಡುತ್ತಿರುವಾಗ ಈ ದಾವಾವಲಿಯು ಇನ್ನೂ ಹೆಚ್ಚಾಗಿ ಪ್ರಜ್ವಲಿಸುವಂತೆ ಮಾಡುವುದಕ್ಕಾಗಿ ವಾಯುವಂಶ ಪ್ರಸೂತರಾದ ನೀವು ವಾದಾವಲಿಗೆ ವ್ಯಾಖ್ಯಾನ ಮಾಡಿರುವುದೇನಿದೆಯೋ ಅದು ಯುಕ್ತವೇಂದೇ ಭಾವಿಸುತ್ತೇನೆ.

ಶ್ರೀಜಯತೀರ್ಥರ ವಾದಾವಲೀ ಗ್ರಂಥವು ಶ್ರೀರಾಯರ ವ್ಯಾಖ್ಯಾನದ ನಂತರ ಇನ್ನೂ ಹೆಚ್ಚು ಪ್ರಸಿದ್ಧವಾಗಿ ದುರ್ಮತಗಳನ್ನು ಖಂಡಿಸುವಲ್ಲಿ ವಿದ್ವಾಂಸರಿಗೆ ಹೆಚ್ಚು ಅನುಕೂಲವಾಯಿತು ಎಂದು ಭಾವ.

**ಗುಣಪ್ರಕಾಶ** : ಈ ಶ್ಲೋಕದಲ್ಲಿ ಶ್ರೀಟೀಕಾಕೃತ್ಪಾದರಿಂದ ರಚಿತವಾದ 'ವಾದಾವಲೀ' ಎಂಬ ಗ್ರಂಥವನ್ನು ವರ್ಣಿಸುವ ಮೂಲಕ ಶ್ರೀಟೀಕಾಕೃತ್ಪಾದರ ಗ್ರಂಥರಚನಾ ಕೌಶಲವನ್ನು ಹಾಗೂ ಅವರ ಮಹಿಮೆಯನ್ನು ಮತ್ತು ಈ ವಾದಾವಲೀ ಗ್ರಂಥದ ವ್ಯಾಖ್ಯಾನವಾದ ಭಾವದೀಪಿಕಾವನ್ನು ವರ್ಣಿಸುವ ಮೂಲಕ ವ್ಯಾಖ್ಯಾನ ಕರ್ತೃಗಳಾದ ಶ್ರೀರಾಯರ ಮಹಿಮೆ ಹಾಗೂ ಅವರ ಗ್ರಂಥರಚನಾಚಾತುರ್ಯವನ್ನೂ ವರ್ಣಿಸಲಾಗಿದೆ.

ವಾಯುವಂಶ ಪ್ರಸೂತರಾದ ಶ್ರೀರಾಯರು ಶ್ರೀಜಯತೀರ್ಥರ ವಾದಾವಲೀ ಗ್ರಂಥಕ್ಕೆ ವ್ಯಾಖ್ಯಾನ ಬರೆದದ್ದರಿಂದಲೇ ಅದರಲ್ಲಿರುವ ಗೂಢಾರ್ಥಗಳು ಪ್ರಕಾಶಕ್ಕೆ ಬರುವಂತಾದವು. ಅನಂತರವೇ ಈ ವಾದಾವಲೀ ಗ್ರಂಥದ ಅಧ್ಯಯನದಿಂದ ಪಂಡಿತರು, ದುರ್ಮತಗಳನ್ನು ಖಂಡಿಸಲು ಹೆಚ್ಚು ಸಮರ್ಥರಾದರು. ಈ ರೀತಿ 'ವಾದಾವಲಿ'ಯು ದುರ್ಮತ-ಗಳೆಂಬ ಅರಣ್ಯವನ್ನು ದಹಿಸುವ ದಾವಾಗ್ನಿಯಂತಿದ್ದರೂ, ವಾಯುವಂಶಪ್ರಸೂತರಾದ ಶ್ರೀರಾಯರು ಅದಕ್ಕೆ ವ್ಯಾಖ್ಯಾನವೆಂಬ ಗಾಳಿಯನ್ನು ಹಾಕಿದಾಗಲೇ ಅದು ಇನ್ನೂ ಜೋರಾಗಿ ಉದ್ದೀಪನಗೊಂಡಿತು. ಇದರಿಂದ ಶ್ರೀರಾಯರ ವ್ಯಾಖ್ಯಾನ ಕೌಶಲವು ವ್ಯಕ್ತವಾಗುತ್ತದೆ.

'ವಾಯುವಂಶಪ್ರಸೂತೇಃ' ಎಂಬ ವಿಶೇಷಣದಿಂದ ಶ್ರೀರಾಯರು ಶ್ರೀಮದಾಚಾರ್ಯರ ಸತ್ಪರಂಪರೆಯಲ್ಲಿ ಬಂದವರೆಂಬ ಸಾಮಾನ್ಯ ಅರ್ಥದೊಂದಿಗೆ ಅವರು ವಾಯುವಿನಿಂದ ಸಮಾವಿಷ್ಟನಾದ ಪ್ರಹ್ಲಾದನ ತೃತೀಯಾವತಾರಿಗಳೆಂಬ ಸೂಚನೆಯು ಕಂಡುಬರುತ್ತದೆ.

ಅಗ್ನಿ-ವಾಯುಗಳಿಗೆ ಸದಾ ಸ್ನೇಹವಿದೆ. ಅಗ್ನಿಯಂತಿದ್ದ 'ವಾದಾವಲೀ' ಅಂದರೆ ಶ್ರೀಜಯತೀರ್ಥರು ಮತ್ತು ವಾಯುವಿನಂತಿದ್ದ 'ವಾದಾವಲೀ ವ್ಯಾಖ್ಯಾನ'ವೆಂದರೆ ಶ್ರೀರಾಯರು. ಇವರಲ್ಲಿ ಅವಿಚ್ಛಿನ್ನವಾದ ಸ್ನೇಹವಿರುವುದನ್ನು ಇಲ್ಲಿ ಸೂಚಿಸಲಾಗಿದೆ. 'ರೂಪಮನ್ಯದಿವ ಧನ್ಯಮಾತ್ಮನಃ' ಎಂಬಂತೆ ವಾದಾವಲೀ ಎಂದರೆ ಶ್ರೀಜಯತೀರ್ಥರೆಂದೂ ವಾದಾವಲೀವ್ಯಾಖ್ಯಾನ ಭಾವದೀಪಿಕಾ ಎಂದರೆ ಶ್ರೀರಾಯರೆಂದೂ ಭಾವಿಸಿ ಇಲ್ಲಿ ಅರ್ಥ ಬರೆದಿದ್ದೇವೆ. ಶ್ರೀರಾಯರ ವ್ಯಾಖ್ಯಾನಗಳ ಸಹಾಯವಿಲ್ಲದೇ ಶ್ರೀಜಯತೀರ್ಥರ ಯಾವುದೇ ಗ್ರಂಥದ ಅರ್ಥಜ್ಞಾನವಾಗದು ಮತ್ತು ಅಲ್ಲಿರುವ ಗೂಢಾರ್ಥಗಳು ಪ್ರಕಾಶಕ್ಕೆ ಬರಲಾರವು ಎಂಬ ರಹಸ್ಯ ನಿರ್ದೇಶವೂ ಈ ಶ್ಲೋಕದಲ್ಲಿರುವುದು ಕಂಡುಬರುವದು.

೧೮. **ಅವತಾರಿಕಾ :** ಶ್ರೀವ್ಯಾಸರಾಜರ ತಾತ್ಪರ್ಯಚಂದ್ರಿಕೆಗೆ ಚಂದ್ರಿಕಾ-ಪ್ರಕಾಶವೆಂಬ ವ್ಯಾಖ್ಯಾನವನ್ನು ಬರೆದ ಶ್ರೀರಾಯರ ಮಾಹಾತ್ಮ್ಯವನ್ನು ವರ್ಣಿಸುತ್ತಾರೆ.

**ವಂದಾರುಪ್ರಾಣಿಚೇತಶ್ಶ್ರಿತತಿಮಿರಪರೀಭಾವಕೌಶಲ್ಯಭಾಜಃ**
**ತೇಜಸ್ತೇ ರಾಘವೇಂದ್ರ ವ್ರತಿವರ ಕಿಮಿತಿ ಶ್ರೀಮತೋ ವರ್ಣಯಾಮಃ ।**
**ಯೇನೈಷಾ ಚಂದ್ರಿಕಾಽಪಿ ತ್ರಿಭುವನವಿಶದಾ ಸತ್ಪಥೋದಂಚಿತಶ್ರೀಃ**
**ಲೇಭೇ ಸರ್ವಜ್ಞಮೌಲಿಪ್ರಕಟಿತವಿಭವಾ ತ್ವತ್ತ ಏವ ಪ್ರಕಾಶಮ್** ॥ ೧೮ ॥

**ಅನ್ವಯಾರ್ಥ :** ರಾಘವೇಂದ್ರ ವ್ರತಿವರ = ಭೋ ಶ್ರೀರಾಘವೇಂದ್ರಗುರು-ವರ್ಯರೇ ! **ಯೇನ** = ಯಾವ ಸೂರ್ಯನಿಂದ (ತೇಜಸ್ಸಿನಿಂದ), **ತ್ರಿಭುವನವಿಶದಾ** = ತ್ರಿಲೋಕಗಳಲ್ಲಿಯೂ ಅತಿಶುಭ್ರವೆಂದು ಖ್ಯಾತವಾದ, (ಬೆಳದಿಂಗಳು) **ಸತ್ಪಥೋದಂಚಿತಶ್ರೀಃ ಸತ್ಪಥ** = ನಕ್ಷತ್ರ ಮಾರ್ಗದಲ್ಲಿ, **ಉದಂಚಿತ** = ಹೊರಹೊಮ್ಮುತ್ತಿರುವ, **ಶ್ರೀಃ** = ಕಾಂತಿಯುಳ್ಳ ಮತ್ತು **ಸರ್ವಜ್ಞಮೌಲಿಪ್ರಕಟಿತವಿಭವಾ** – **ಸರ್ವಜ್ಞ** = ಸರ್ವಜ್ಞರಾದ ರುದ್ರದೇವರ, **ಮೌಲಿ** = ಶಿರಸ್ಸಿನಲ್ಲಿ, **ಪ್ರಕಟಿತ** = ಪ್ರಕಾಶಿತವಾದ, **ವಿಭವಾ** = ಧಾವಳ್ಯವುಳ್ಳ, **ಚಂದ್ರಿಕಾ** = ಚಂದ್ರನ ಬೆಳದಿಂಗಳು, **ಪ್ರಕಾಶಂ** = ಪ್ರಕಾಶವನ್ನು, **ಲೇಭೇ** = ಪಡೆದಿರುವದೋ, **ಶ್ರೀಮತಃ** = ಕಾಂತಿಸಂಪನ್ನರಾದ, **ವಂದಾರುಪ್ರಾಣಿಚೇತಃ-ಶ್ರಿತತಿಮಿರಪರೀಭಾವಕೌಶಲ್ಯ(ಪಾಂಡಿತ್ಯ)ಭಾಜಃ** – **ವಂದಾರು** = (ನಿಮಗೆ) ಶರಣುಬಂದ, **ಪ್ರಾಣಿ** = ಜನರ, **ಚೇತಃಶ್ರಿತ** = ಹೃದಯದಲ್ಲಿರುವ, **ತಿಮಿರ** = ಅಜ್ಞಾನಾಂಧಕಾರವನ್ನು **ಪರೀಭಾವ** = ಹೊಡೆದೋಡಿಸುವ, **ಕೌಶಲ್ಯಭಾಜಃ** = ಕೌಶಲ್ಯ(ಪಾಂಡಿತ್ಯ)ವನ್ನು ಅಥವಾ ಸಾಮರ್ಥ್ಯವನ್ನು ಪಡೆದಿರುವ, **ತೇ** = ನಿಮ್ಮ, (ಹೃದಯಗುಹೆಯಲ್ಲಿರುವ)

**ತೇಜಃ** = ಅಂತಹ ಜ್ಞಾನಾನಂದಾತ್ಮಕನಾದ ಸೂರ್ಯನನ್ನು, **ಕಿಮಿತಿ** = ಏನೆಂದು ? **ವರ್ಣಯಾಮಃ** = ವರ್ಣಿಸಬಲ್ಲೆವು ! ಇದರಂತೆಯೇ, **ತ್ರಿಭುವನವಿಶದಾ** = ಮೂರ್ಲೋಕಗಳಲ್ಲಿಯೂ ಪ್ರಖ್ಯಾತವಾದ, **ಸತ್ಪಥೋದಂಚಿತಶ್ರೀಃ** – **ಸತ್ಪಥ** = ಜ್ಞಾನಿಗಳ ದೃಷ್ಟಿಪಥದಲ್ಲಿ, **ಉದಂಚಿತ** = ಉತ್ಕರ್ಷ ಪಡೆದ, **ಶ್ರೀಃ** = ಕಾಂತಿಯುಳ್ಳ (ಅಂದರೆ ಜ್ಞಾನಿವರ್ಗದವರಿಂದ ಚೆನ್ನಾಗಿ ಪ್ರಶಂಸಿಸಲ್ಪಟ್ಟ ಮಹಿಮೆಯುಳ್ಳ), **ಸರ್ವಜ್ಞಮೌಲಿಪ್ರಕಟಿತವಿಭವಾ** – **ಸರ್ವಜ್ಞ** = ಸರ್ವಜ್ಞರಾದ ಶ್ರೀವಿಜಯೀಂದ್ರತೀರ್ಥರೇ ಮೊದಲಾದವರಿಗೆ, **ಮೌಲಿ** = ಶಿಖರಪ್ರಾಯರಾಗಿದ್ದ (ಪೂಜ್ಯರಾಗಿದ್ದ), ಶ್ರೀವ್ಯಾಸರಾಜರಿಂದ, **ಪ್ರಕಟಿತ** = ಪ್ರಕಾಶಗೊಳಿಸಲ್ಪಟ್ಟ, **ವಿಭವಾ** = ಹಿರಿಮೆಯುಳ್ಳ ಅಥವಾ **ಸರ್ವಜ್ಞಮೌಲಿ** = ಶ್ರೀವಿಜಯೀಂದ್ರತೀರ್ಥರೇ ಮೊದಲಾದ ಜ್ಞಾನಿಶ್ರೇಷ್ಠರಿಂದ, **ಪ್ರಕಟಿತ** = ಲೋಕದಲ್ಲಿ ಪ್ರಕಾಶಗೊಳಿಸಲ್ಪಟ್ಟ, **ವಿಭವಾ** = ಹಿರಿಮೆಯುಳ್ಳ (ಮಾಹಾತ್ಮ್ಯವುಳ್ಳ), **ಏಷಾ ಚಂದ್ರಿಕಾ ಅಪಿ** = ಈ ತಾತ್ಪರ್ಯಚಂದ್ರಿಕಾ ಎಂಬ ಗ್ರಂಥವೂ ಕೂಡ, **ತ್ವತ್ತ ಏವ** = ನಿಮ್ಮಿಂದಲೇ, **ಪ್ರಕಾಶಂ ಲೇಭೇ** = 'ಚಂದ್ರಿಕಾ ಪ್ರಕಾಶ' ಎಂಬ ವ್ಯಾಖ್ಯಾನವನ್ನು ಪಡೆದು ಲೋಕದಲ್ಲಿ ಇನ್ನೂ ಹೆಚ್ಚು ಪ್ರಕಾಶಕ್ಕೆ ಬಂದಿತು. **ತೇ ತೇಜಃ ಕಿಮಿತಿ ವರ್ಣಯಾಮಃ** = ಇಂಥ ಮಹಿಮೋಪೇತರಾದ ನಿಮ್ಮ ಜ್ಞಾನ ಸೂರ್ಯನ ತೇಜಸ್ಸನ್ನು ಎಷ್ಟೆಂದು ವರ್ಣಿಸೋಣ !

**ತಾತ್ಪರ್ಯಾರ್ಥ** : ಭೋ ಶ್ರೀರಾಘವೇಂದ್ರವ್ರತಿವರರೇ ! ನಮನಶೀಲರಾದ (ಆಶ್ರಿತಜನರ) ಜನರ ಹೃದಯದಲ್ಲಿರುವ ಅಜ್ಞಾನಾಂಧಕಾರವನ್ನು ನಿವಾರಿಸುವಲ್ಲಿ ಕೌಶಲ್ಯವನ್ನು ಪಡೆದಿರುವ ಹಾಗೂ ಕಾಂತಿಸಂಪನ್ನರಾದ ನಿಮ್ಮ ತೇಜಃಪ್ರಭಾವವನ್ನು ಏನೆಂದು ವರ್ಣಿಸೋಣ !

ತ್ರಿಲೋಕಗಳಲ್ಲಿ ಅತಿ ಶುಭ್ರವೆಂದು ಪ್ರಸಿದ್ಧವಾಗಿರುವ, ನಕ್ಷತ್ರಮಾರ್ಗದಲ್ಲಿ ಹೊರಹೊಮ್ಮುತ್ತಿರುವ ಶೋಭೆಯುಳ್ಳ ಮತ್ತು ಸರ್ವಜ್ಞರಾದ ಶ್ರೀರುದ್ರದೇವರ ಶಿರಸ್ಸಿನಲ್ಲಿ ಪ್ರಕಾಶಿಸುತ್ತಿರುವ ಚಂದ್ರನ ಚಂದ್ರಿಕೆ(ಬೆಳದಿಂಗಳು)ಯಂತೆ ಶ್ರೀವ್ಯಾಸರಾಜವಿರಚಿತ ತಾತ್ಪರ್ಯ ಚಂದ್ರಿಕಾಗ್ರಂಥವು ಶೋಭಿಸುತ್ತಿದೆ. ಈ ಚಂದ್ರಿಕಾಗ್ರಂಥವೂ ಕೂಡ ತ್ರಿಭುವನಗಳಲ್ಲಿ ಪ್ರಸಿದ್ಧವಾಗಿ, ಸಜ್ಜನರಿಂದ (ಸುಜ್ಞಾನಿಗಳಿಂದ) ಅತ್ಯಂತಮಾನ್ಯವಾಗಿ, ಶ್ರೀವಿಜಯೀಂದ್ರತೀರ್ಥರೇ ಮೊದಲಾದವರಿಗಿಂತ ಶ್ರೇಷ್ಠರಾದ ಶ್ರೀವ್ಯಾಸರಾಜರಿಂದ ಪ್ರಕಾಶಿತವಾದ ಮಾಹಾತ್ಮ್ಯವುಳ್ಳದ್ದಾಗಿ (ಜ್ಞಾನಿಶ್ರೇಷ್ಠರಾದ ಶ್ರೀವಿಜಯೀಂದ್ರತೀರ್ಥರೇ ಮೊದಲಾದವರಿಂದ ಪಾಠಪ್ರವಚನಗಳ ಮೂಲಕ ಪ್ರಕಾಶಿತವಾದ ಮಾಹಾತ್ಮ್ಯವುಳ್ಳದ್ದಾಗಿ) ಶೋಭಿಸುತ್ತಿದೆ. ಇಂಥ ತಾತ್ಪರ್ಯಚಂದ್ರಿಕಾ ಗ್ರಂಥಕ್ಕೆ ನೀವು 'ಚಂದ್ರಿಕಾಪ್ರಕಾಶ'ವೆಂಬ ವ್ಯಾಖ್ಯಾನವನ್ನು ಬರೆದ ನಂತರವಂತೂ ಆ ಗ್ರಂಥವು ಜಗತ್ತಿನಲ್ಲಿ ಇನ್ನೂ ಹೆಚ್ಚಾಗಿ ಪ್ರಸಾರಗೊಂಡು ಪ್ರಸಿದ್ಧಿಗೆ ಬಂದಿತು.

**ಗುಣಪ್ರಕಾಶ :** ತಮ್ಮನ್ನು ಆಶ್ರಯಿಸಿದವರ ಹೃದಯದಲ್ಲಿದ್ದ ಅಜ್ಞಾನಾಂಧಕಾರ-ವನ್ನು ಓಡಿಸುವ ಸಾಮರ್ಥ್ಯವುಳ್ಳ ಶ್ರೀರಾಯರ ಜ್ಞಾನಾಖ್ಯ ತೇಜಸ್ಸನ್ನು ವರ್ಣಿಸಲು ಯಾರಿಗೆ ಸಾಧ್ಯ ! ಇಂಥ ತೇಜಸ್ಸಿನಿಂದ ಯುಕ್ತರಾಗಿದ್ದರಿಂದಲೇ ಶ್ರೀರಾಯರು ಶ್ರೀವ್ಯಾಸರಾಜರ ತಾತ್ಪರ್ಯಚಂದ್ರಿಕಾ ಗ್ರಂಥಕ್ಕೆ ಚಂದ್ರಿಕಾಪ್ರಕಾಶವೆಂಬ ವ್ಯಾಖ್ಯಾನವನ್ನು ಬರೆದು ಅದು ಜಗತ್ತಿನಲ್ಲಿ ಪ್ರಕಾಶಕ್ಕೆ ಬರುವಂತೆ ಮಾಡಿದರು. **ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ।** – *ಗೀತಾ ೧೫-೧೨* ಎಂಬ ಗೀತೋಕ್ತಿಯಂತೆ ಚಂದ್ರನ ತೇಜೋರೂಪವಾದ ಬೆಳದಿಂಗಳು ಪರಮಾತ್ಮನಿಂದಲೇ ಪ್ರಾಪ್ತವಾಗಿರುತ್ತದೆ. ತೇಜೋಮಯನಾದ ಜ್ಯೋತಿಶ್ಶಬ್ದವಾಚ್ಯನಾದ ಶ್ರೀಹರಿಯು ಶ್ರೀರಾಘವೇಂದ್ರತೀರ್ಥರ ಹೃದಯದಲ್ಲಿ ಸದಾ ಸನ್ನಿಹಿತನಾಗಿರುವುದು ೧೪ನೆಯ ಶ್ಲೋಕದಿಂದ ಸ್ಪಷ್ಟವಾಗಿದೆ. ಆದ್ದರಿಂದ ಶ್ರೀರಾಯರ ತೇಜಸ್ಸು ಚಂದ್ರಿಕೆಗೇ ಪ್ರಕಾಶ-ವನ್ನು ಕೊಡುವುದು ಅಚ್ಚರಿಯೇನಲ್ಲ.

ಶ್ರೀವ್ಯಾಸರಾಜರೆಂಬ ಚಂದ್ರನಿಂದ 'ತಾತ್ಪರ್ಯಚಂದ್ರಿಕಾ' ಎಂಬ ಗ್ರಂಥವು ರಚಿಸಲ್ಪಟ್ಟಿದ್ದಿತು. ಇದು ಗಹನಗ್ರಂಥ. ವ್ಯಾಖ್ಯಾನವಿಲ್ಲದೇ ಅರ್ಥವಾಗುತ್ತಿರಲಿಲ್ಲ. ಶ್ರೀರಾಯರು ಇದಕ್ಕೆ 'ಚಂದ್ರಿಕಾಪ್ರಕಾಶ' ಎಂಬ ಗ್ರಂಥವನ್ನು ರಚಿಸಿದಾಗಿನಿಂದ ಮೂಲಗ್ರಂಥವು ಎಲ್ಲರಿಗೂ ತಿಳಿಯುವಂತಾಯಿತು.

ಹುಣ್ಣಿಮೆಯ ಬೆಳದಿಂಗಳು ಹೊರಗಿನ ಕತ್ತಲೆಯನ್ನು ಕಳೆಯಲು ಸಮರ್ಥವಾದರೆ ಶ್ರೀರಾಯರ ಜ್ಞಾನಾಖ್ಯ ತೇಜಸ್ಸು ಹೃದಯದೊಳಗಿರುವ ಅಜ್ಞಾನವೆಂಬ ಅಂಧಕಾರವನ್ನು ಕಳೆಯಲು ಸಮರ್ಥವಾಗಿದೆ. ಈ ಶ್ಲೋಕದಲ್ಲಿ ಶ್ರೀರಾಯರ ಜ್ಞಾನಗುಣದ ಸ್ತವನವಿದೆ. ಮತ್ತು ಚಂದ್ರಿಕಾಪ್ರಕಾಶವೆಂಬ ಗ್ರಂಥರಚನೆಯ ಕೌಶಲದ ವರ್ಣನೆಯೂ ಇದೆ. ತಮ್ಮ ಗ್ರಂಥದಲ್ಲಿರುವ ರಹಸ್ಯಾರ್ಥಗಳನ್ನು ಪ್ರಕಟಗೊಳಿಸಲು ಶ್ರೀವ್ಯಾಸರಾಜರೇ ಮತ್ತೆ ಶ್ರೀರಾಘವೇಂದ್ರರಾಗಿ ಅವತರಿಸಿರುವರೆಂಬ ಸೂಚ್ಯಾರ್ಥವು ತೋರುತ್ತದೆ.

**"ವಂದಾರುಪ್ರಾಣಿಚೇತಃಶ್ರಿತತಿಮಿರಪರೀಭಾವಕೌಶಲ್ಯಭಾಜಃ"** ಎಂಬ ವಿಶೇಷಣ-ದಿಂದ ಶ್ರೀರಾಯರು ತಮ್ಮ ಸೇವಕಜನರ ಆಧಿದೈವಿಕ ಹಾಗೂ ಆಧಿಭೌತಿಕ ದುಃಖಗಳನ್ನಷ್ಟೇ ಅಲ್ಲ ಆಧ್ಯಾತ್ಮಿಕ ದುಃಖಕ್ಕೆ ಕಾರಣವಾಗುವ ಅಜ್ಞಾನವನ್ನೂ ನಿವಾರಿಸುವರು ಎಂದು ತಿಳಿಯುವದು. ಇದಲ್ಲದೇ ತಮ್ಮ ಪ್ರಕಾಶಮಾನವಾದ ಜ್ಞಾನಾಖ್ಯದೀಪದಿಂದ (ಜ್ಞಾನೋಪದೇಶಗಳಿಂದ) ಸೇವಕ ಜನರ ಅಜ್ಞಾನವನ್ನು ಕಳೆದು, ಅಜ್ಞಾನದಿಂದ ಉಂಟಾಗಿರುವ ಸುಖದುಃಖಾದಿ ಕ್ಲೇಶರೂಪ ಬಂಧವನ್ನೇ ಕಳೆಯುವ ಸಾಮರ್ಥ್ಯವುಳ್ಳವರಾಗಿದ್ದಾರೆ.

**ತೇಷಾಮೇವಾನುಕಂಪಾರ್ಥಂ ಅಹಮಜ್ಞಾನಜಂ ತಮಃ । ನಾಶಯಾಮ್ಯಾತ್ಮ-ಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥** – *ಗೀತಾ ೧೦-೧೧* ಎಂಬ ಗೀತಾಶ್ಲೋಕಕ್ಕೆ

ಗೀತಾಸಂಗ್ರಹದಲ್ಲಿ ಅರ್ಥವನ್ನು ಬರೆಯುತ್ತ ಶ್ರೀರಾಯರು ಹೇಳುತ್ತಾರೆ – **ಅಹಮಜ್ಞಾನಜಂ ತೇಷಾಂ ತಮಃ ಸುಖದುಃಖಾದಿಕ್ಲೇಶರೂಪಬಂಧಂ ಭಾಸ್ವತಾ ವಿರೋಧಿನಾಶನದಕ್ಷತಯಾ ಪ್ರಕಾಶಮಾನೇನ ಜ್ಞಾನಾಖ್ಯದೀಪೇನ ಆತ್ಮಭಾವಸ್ಥಃ ತದೀಯಚಿತ್ತವೃತ್ತಿಸ್ಥಃ ಸನ್ ನಾಶಯಾಮೀತಿ ।** – ನನ್ನನ್ನು ಆಶ್ರಯಿಸಿ ಯಾರು ಸದಾ ಭಜಿಸುವರೋ ಅವರ ಮನಸ್ಸಿನಲ್ಲಿದ್ದುಕೊಂಡು ಅತ್ಯಂತ ಪ್ರಕಾಶಮಾನವಾದ ಜ್ಞಾನಾಖ್ಯದೀಪದಿಂದ ಅವರ ಅಜ್ಞಾನವನ್ನು ಕಳೆಯುವ ಮೂಲಕ ಅಜ್ಞಾನದಿಂದ ಉಂಟಾಗುವ ಸುಖದುಃಖಾದಿ ಕ್ಲೇಶರೂಪ ಸಂಸಾರ ಬಂಧವನ್ನೇ ಕಳೆದು ಅನುಗ್ರಹಿಸುವೆನೆಂದು ಶ್ರೀಕೃಷ್ಣನು ಹೇಳಿದ್ದಾನೆ. ಇದರಂತೆಯೇ ಶ್ರೀಹರಿವಾಯುಗಳ ವಿಶೇಷ ಸನ್ನಿಧಾನ ಹಾಗೂ ಅನುಗ್ರಹವುಳ್ಳವರಾದ ಶ್ರೀರಾಯರೂ ಕೂಡ ಸಂಸಾರಬಂಧವನ್ನೇ ಕಳೆಯುವ ಮೂಲಕ ಮೋಕ್ಷಪ್ರದಾತರಾಗಿದ್ದಾರೆಂದು ಅವರ ಮೋಕ್ಷಪ್ರದಾತೃತ್ವರೂಪ ಗುಣಸ್ತವನವೂ ಇಲ್ಲಿ ಸೂಚಿತವಾಗಿದೆ.

ತಾತ್ಪರ್ಯಚಂದ್ರಿಕಾ ಗ್ರಂಥದ ವಿಶೇಷಣಗಳಾದ ತ್ರಿಭುವನವಿಶದಾ = ಮೂರ್ಲೋಕಗಳಲ್ಲಿಯೂ ಪ್ರಸಿದ್ಧವಾದ, **ಸತ್ಪಥೋದಂಚಿತಶ್ರೀಃ** = ಸುಜ್ಞಾನಿಗಳಿಂದ ಮಾನ್ಯವಾದ ಮತ್ತು **ಸರ್ವಜ್ಞಮೌಲಿಪ್ರಕಟಿತವಿಭವಾ** = ಸರ್ವಜ್ಞರಾದ ಶ್ರೀವಿಜಯೀಂದ್ರ-ತೀರ್ಥರೇ ಮೊದಲಾದವರಿಂದ ಪಾಠಪ್ರವಚನ ವ್ಯಾಖ್ಯಾನಗಳಿಂದ ಪ್ರಸಾರಗೊಳಿಸಲ್ಪಟ್ಟ, ಎಂಬ ಮೂರು ವಿಶೇಷಣಗಳು ಚಂದ್ರಿಕಾ ಗ್ರಂಥದ ಮಹತ್ವವನ್ನು ತಿಳಿಸುತ್ತವೆ. ಇಂಥ ಶ್ರೇಷ್ಠಗ್ರಂಥವನ್ನು ರಚಿಸಿರುವವರು ಶ್ರೀವ್ಯಾಸರಾಜರು ಎಂದು ಶ್ರೀವ್ಯಾಸರಾಜಗುರುಗಳ ಗುಣಸ್ತವನವೂ ಇಲ್ಲಿದೆ.

ಚಂದ್ರನು ಸೂರ್ಯನ ಕಿರಣಗಳಿಂದ ಪ್ರಕಾಶಿಸುವನೆಂಬ ವೈಜ್ಞಾನಿಕ ವಿಚಾರವೂ ಇಲ್ಲಿ ಕಂಡುಬರುತ್ತದೆ.

**೧೯. ಅವತಾರಿಕಾ** : ಶ್ರೀಜಯತೀರ್ಥರ ಶ್ರೀಮನ್ನ್ಯಾಯಸುಧಾ ಗ್ರಂಥಕ್ಕೆ ಪರಿಮಳವೆಂಬ ಶ್ರೇಷ್ಠಟಿಪ್ಪಣೀಗ್ರಂಥವನ್ನು ಬರೆದವರೆಂದು ಶ್ರೀರಾಯರ ಮಹಿಮೆ-ಯನ್ನು ಸ್ತುತಿಸುತ್ತಾರೆ.

**ಧೀರಶ್ರೀರಾಘವೇಂದ್ರ ತ್ವದತುಲರಸನಾರಂಗನೃತ್ಯತ್ಸ್ವಯಂಭೂ-**
**ಯೋಷಾಧಮ್ಮಿಲ್ಲಭಾರಶ್ಲಥಕುಸುಮತತೀಸ್ತ್ವದ್ಗಿರಸ್ಸಂಗಿರಾಮಃ ।**
**ಯಾಭಿಸ್ಸಂಮಿಶ್ರಿತಾಭಿರ್ನಿರವಧಿವಸುಧಾ ವಿಶ್ರುತಾ ಸಾ ಸುಧಾಪಿ**
**ಕ್ಷೋಣೀಗೀರ್ವಾಣಗಮ್ಯಂ ಪರಿಮಲಮತುಲಂ ಸಾಂಪ್ರತಂ ಸಂಪ್ರಪೇದೇ ॥೧೯॥**

**ಅನ್ವಯಾರ್ಥ** : **ಧೀರಶ್ರೀರಾಘವೇಂದ್ರ** = ಜ್ಞಾನಿವರ್ಯರಾದ ಶ್ರೀರಾಘವೇಂದ್ರ-ಗುರುಸಾರ್ವಭೌಮರೇ ! **ಸಂಮಿಶ್ರಿತಾಭಿಃ** = ವ್ಯಾಖ್ಯಾನಮೂಲಕ ಸಮ್ಮಿಶ್ರಿತವಾದ,

**ಯಾಭಿಃ** = ಯಾವ ನಿಮ್ಮ ವಾಕ್ಯರೂಪ ವಚನಗಳಿಂದ, **ನಿರವಧಿ ವಸುಧಾವಿಶ್ರುತಾ** – **ನಿರವಧಿ** = ಒಂದು ಸೀಮೆ ಇಲ್ಲದಂತೆ, **ವಸುಧಾ** = ಭೂಲೋಕದಲ್ಲಿ ಸರ್ವತ್ರ, **ವಿಶ್ರುತಾ** = ಪ್ರಸಿದ್ಧವಾದ, **ಸುಧಾಽಪಿ** = ಶ್ರೀಜಯತೀರ್ಥರ ಶ್ರೀಮನ್ನ್ಯಾಯಸುಧಾ ಗ್ರಂಥವೂ ಕೂಡ, **ಸಾಂಪ್ರತಂ** = ಈಗ, **ಕ್ಷೋಣೀಗೀರ್ವಾಣಗಮ್ಯಂ** – **ಕ್ಷೋಣೀ** = ಭೂ, **ಗೀರ್ವಾಣ** = ಸುರರಿಂದ, **ಗಮ್ಯಂ** = ಗಮ್ಯವಾದ, **ಅಮಲಂ** = ಕಂಪಾದ (**ಅತುಲಂ** = ಅಸದೃಶವಾದ), **ಪರಿಮಲಂ** = ಸುವಾಸನೆಯನ್ನು (ಪರಿಮಲಾಖ್ಯ ಟಿಪ್ಪಣಿಯನ್ನು), **ಸಂಪ್ರಪೇದೇ** = ಹೊಂದಿತೋ, ಅಂತಹ **ತ್ವದ್ಗಿರಃ** = ನಿಮ್ಮ ವಚನಗಳನ್ನು, **ತ್ವದತುಲರಸನಾರಂಗನೃತ್ಯತ್ಸ್ವಯಂಭೂಯೋಷಾಧಮ್ಮಿಲ್ಲಭಾರಶ್ಲಥಕುಸುಮತತೀಃ** – **ತ್ವತ್** = ನಿಮ್ಮ, **ಅತುಲ** = ಅನುಪಮವಾದ, **ರಸನಾ** = ನಾಲಿಗೆಯೆಂಬ, **ರಂಗ** = ರಂಗಮಂಚದ ಮೇಲೆ, **ನೃತ್ಯತ್** = ನರ್ತಿಸುತ್ತಿರುವ, **ಸ್ವಯಂಭೂಯೋಷಾ** = ಬ್ರಹ್ಮದೇವರ ಪತ್ನಿಯಾದ ಸರಸ್ವತಿದೇವಿಯ, **ಧಮ್ಮಿಲ್ಲಭಾರ** = ಮುಡಿಯಿಂದ, **ಶ್ಲಥ** = ಉದುರಿ ಕೆಳಗೆ ಬಿದ್ದ, **ಕುಸುಮತತೀಃ** = ಬಿಡಿಹೂವುಗಳ ಸಮೂಹವೆಂದೇ, **ಸಂಗಿರಾಮಃ** = ಹೇಳುತ್ತೇವೆ.

**ತಾತ್ಪರ್ಯಾರ್ಥ** : ಭೋ ಧೀರಶ್ರೀರಾಘವೇಂದ್ರರೇ ! ನಿಮ್ಮ ವಚನಗಳೆಂದರೆ, ನಿಮ್ಮ ಅಸದೃಶವಾದ ನಾಲಿಗೆಯೆಂಬ ರಂಗಮಂಚದ ಮೇಲೆ ನರ್ತಿಸುತ್ತಿರುವ ಬ್ರಹ್ಮದೇವಪತ್ನಿಯಾದ ಸರಸ್ವತಿಯ ಕೇಶಭಾರದಿಂದ ಕಳಚಿ ಕೆಳಗೆ ಬಿದ್ದ ಕಂಪಾದ ಹೂವುಗಳ ಸಮೂಹವೆಂದೇ ತಿಳಿಯುತ್ತೇವೆ. ಕಂಪಾದ ಹೂವುಗಳಂತಿರುವ ನಿಮ್ಮ ವಚನರೂಪವಾದ 'ಪರಿಮಲ' ಗ್ರಂಥವು ಅಖಂಡ ಭೂಮಂಡಲದಲ್ಲಿ ಪ್ರಸಿದ್ಧವಾದ 'ಸುಧಾ' ಗ್ರಂಥದೊಂದಿಗೆ ವ್ಯಾಖ್ಯಾನ-ವ್ಯಾಖ್ಯೇಯ ಭಾವದಿಂದ ಸಂಬಂಧಿಸಿದಾಗ ಭೂಸುರರಾದ ಬ್ರಾಹ್ಮಣವಿದ್ವಾಂಸರಿಗೆ ಆ ಸುಧಾಗ್ರಂಥವು ಸುಲಭವಾಗಿ ತಿಳಿಯುವಂತಾಗಿ ಇನ್ನೂ ಹೆಚ್ಚು ಪ್ರಸಿದ್ಧಿಗೆ ಬಂದಿತು.

ದೇವಲೋಕದ ಅಮೃತದಂತಿರುವ ಶ್ರೀಸುಧಾಖ್ಯಗ್ರಂಥವು ಸುಗಂಧದಂತಿರುವ ಪರಿಮಲಾಖ್ಯ ವ್ಯಾಖ್ಯಾನದಿಂದ ಕೂಡಿದಾಗ ಜಗತ್ತಿನಲ್ಲಿ ಹೆಚ್ಚು ಹೆಚ್ಚು ವಿದ್ವಾಂಸರು ಅದರ ಅಧ್ಯಯನ-ಅಧ್ಯಾಪನಾದಿಗಳನ್ನು ಮಾಡಲು ಸಮರ್ಥರಾದರು. ಈ ರೀತಿ ಶ್ರೀಜಯತೀರ್ಥರ ಸುಧಾಗ್ರಂಥವು ಶ್ರೀರಾಯರ ಪರಿಮಲ ವ್ಯಾಖ್ಯಾನದಿಂದ ಜಗತ್ತಿನಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದಿತು.

**ಗುಣಪ್ರಕಾಶ** : ಶ್ರೀರಾಯರ ವಚನಗಳ (ಲಿಖಿತ ಮತ್ತು ಮೌಖಿಕ) ಮತ್ತು ಶ್ರೀಜಯತೀರ್ಥರ ಶ್ರೀಮನ್ನ್ಯಾಯಸುಧಾಕ್ಕೆ ಶ್ರೀರಾಯರು ಬರೆದ ಪರಿಮಳವೆಂಬ ಟಿಪ್ಪಣಿ ಗ್ರಂಥದ ಹಿರಿಮೆಯನ್ನು ಈ ಶ್ಲೋಕದಲ್ಲಿ ಹೇಳಲಾಗಿದೆ.

ಶ್ರೀರಾಯರ ವಚನಗಳು, ಅವರ ನಾಲಿಗೆ ಎಂಬ ರಂಗಮಂಚದ ಮೇಲೆ ನರ್ತನ ಮಾಡುತ್ತಿರುವ ಸರಸ್ವತಿಯ ಮುಡಿಯಿಂದ ಉದುರಿ ಬಿದ್ದ ಕಂಪಾದ ಹೂವುಗಳಂತಿವೆ. ಶ್ರೀರಾಯರ ವಚನಗಳು ಕೋಮಲ ಪುಷ್ಪಗಳಂತೆ ಸೌಮ್ಯವಾಗಿದ್ದು ಸುಗಂಧಯುತ-ವಾಗಿವೆ. ಇಂಥ ವಚನಗಳಿಂದ ಶ್ರೀಸುಧಾಗ್ರಂಥಕ್ಕೆ ಪರಿಮಳ ಎಂಬ ವ್ಯಾಖ್ಯಾನವನ್ನು ಬರೆದದ್ದರಿಂದ ಭುವಿಯಲ್ಲಿ ಪ್ರಸಿದ್ಧವಾಗಿದ್ದ ಆ ಸುಧಾಗ್ರಂಥವು ಎಲ್ಲ ಪಂಡಿತರಿಗೂ ಸುಲಭವಾಗಿ ಹಾಗೂ ಸ್ಪಷ್ಟವಾಗಿ ತಿಳಿಯುವಂತಾಯಿತು.

ಶ್ರೀಮನ್ನ್ಯಾಯಸುಧಾಗ್ರಂಥವು ಶ್ರೀಮದಾಚಾರ್ಯರ ಅನುವ್ಯಾಖ್ಯಾನಕ್ಕೆ ಶ್ರೀಜಯತೀರ್ಥರು ಬರೆದ ವಿಸ್ತಾರವಾದ ಟೀಕಾಗ್ರಂಥವೆಂದೂ ದ್ವೈತವಾಙ್ಮಯದ ಮೇರುಕೃತಿಯೆಂದೂ ಎಲ್ಲೆಡೆ ಪ್ರಸಿದ್ಧವಾಗಿದ್ದಿತು. ಆದರೆ ಭೂಸುರರಿಗೆ ಸುರಲೋಕ-ದಲ್ಲಿರುವ ಸುಧೆಯನ್ನು ಆಸ್ವಾದಿಸಲು ಸಾಧ್ಯವಾಗದಿರುವಂತೆ, ಈ ಗ್ರಂಥವನ್ನು ಆಸ್ವಾದಿಸಲು ಅಂದರೆ ಇದರ ಅಧ್ಯಯನ-ಅಧ್ಯಾಪನೆಗಳನ್ನು ಮಾಡಲು ಎಲ್ಲ ಪಂಡಿತರಿಗೂ ಸಾಧ್ಯವಾಗುತ್ತಿರಲಿಲ್ಲ. ಏಕೆಂದರೆ ಶ್ರೀಟೀಕಾಕೃತ್ಪಾದರ ವಿಷಯಪ್ರತಿಪಾದನೆಯ ಕೌಶಲ ಹಾಗೂ ಗಂಭೀರವಾದ ಶೈಲಿಗಳಿಂದ, ವ್ಯಾಖ್ಯಾನ (ಸುಧಾ) ಹಾಗೂ ವ್ಯಾಖ್ಯೇಯ (ಅನುವ್ಯಾಖ್ಯಾನ) ಗ್ರಂಥಗಳು ಸುಲಭವಾಗಿ ಅರ್ಥವಾಗುತ್ತಿರಲಿಲ್ಲ. ಈ ನ್ಯಾಯಸುಧೆ-ಯನ್ನು ಪಾನ ಮಾಡಬೇಕೆಂದು ಎಲ್ಲ ಪಂಡಿತರೂ ಹಾತೊರೆಯುತ್ತಿದ್ದರು. ಆದರೆ ಅಸಹಾಯಕರಾಗಿದ್ದರು. ಇಂದ್ರಾಂಶರಾದ ಶ್ರೀಜಯತೀರ್ಥರು ದೇವಲೋಕದಿಂದ ಶ್ರೀಮನ್ನ್ಯಾಯಸುಧಾ ಗ್ರಂಥದ ರೂಪದಲ್ಲಿ ಸುಧೆಯನ್ನೇನೋ ಧರೆಗೆ ತಂದರು. ಆದರೆ ಎಷ್ಟೋ ಪಂಡಿತರಿಗೆ ಈ ಅಮೃತವಿದ್ದದ್ದೇ ಗೊತ್ತಾಗಲಿಲ್ಲ. ಅಮೃತವು ಸುಗಂಧಯುತವಾಗಿದ್ದರೆ ಮಾತ್ರ ಆ ಸುವಾಸನೆಯು ಪಸರಿಸಿ ನಾಸಿಕಕ್ಕೆ ಬಡಿದಾಗ ಮನುಷ್ಯನು ಸುವಾಸನೆ ಎಲ್ಲಿಂದ ಬರುತ್ತಿದೆ ಎಂದು ಶೋಧಿಸುತ್ತ ಸುವಾಸನೆಯ ಉಗಮ ಸ್ಥಳಕ್ಕೆ ಹೋಗಿ ಅಲ್ಲಿರುವ ಅಮೃತವನ್ನು ಪಡೆಯಲು ಸಮರ್ಥನಾಗುತ್ತಾನೆ. ಪ್ರಕೃತ ಶ್ರೀಸುಧಾಗ್ರಂಥವು ಎಲ್ಲ ಪಂಡಿತರಿಗೂ ಸಿಗುವಂತಾಗಿ ತಿಳಿಯುವಂತಾಗಲು ಅದನ್ನು ಸುಗಂಧಯುತವಾಗಿ ಮಾಡುವದೆಂತು ? ಮತ್ತು ಆ ಸುಗಂಧವು ಎಲ್ಲೆಡೆ ಪಸರಿಸುವದೆಂತು ? ಎಂದು ಪರಮಕರುಣಾಳುಗಳಾದ ಶ್ರೀರಾಯರು ಈ ಬಗ್ಗೆ ಬಹಳ ಆಲೋಚಿಸಿ ಕೊನೆಗೆ ತಾವು ಶ್ರೀಮನ್ನ್ಯಾಯಸುಧಾ ಗ್ರಂಥಕ್ಕೆ ವ್ಯಾಖ್ಯಾನ ಬರೆಯುವ ಮೂಲಕ ಅದನ್ನು ಒಳ್ಳೆಯ ಸುರಭಿಯುತವನ್ನಾಗಿ ಮಾಡಬಹುದೆಂದು ನಿರ್ಧರಿಸಿದರು. ಅದಕ್ಕಾಗಿಯೇ ಅವರು ಶ್ರೀನ್ಯಾಯಸುಧಾಕ್ಕೆ 'ಪರಿಮಲ' ಎಂಬ ಟಿಪ್ಪಣಿಯನ್ನು ರಚಿಸಿದರು. 'ಪರಿಮಲ' ಎಂಬ ಹೆಸರಿನ ಟಿಪ್ಪಣಿಗ್ರಂಥವನ್ನು ಬರೆಯುವುದರಿಂದ ಶ್ರೀನ್ಯಾಯಸುಧೆಯು ಹೇಗೆ ಸುಗಂಧಿತವಾಯಿತು ? ಅರ್ಥಾತ್ ಎಲ್ಲ ಪಂಡಿತರ ಚೇತೋಹಾರಿಯಾಯಿತು ? **"ಗ್ರಂಥಕರಣಸ್ಯ ವಾಕ್‌ಚೇತೋವ್ಯಾಪಾರರೂಪತ್ವಾತ್"**

ಎಂಬಂತೆ ಗ್ರಂಥರಚನೆಯು ವಚನ ಮತ್ತು ಮನಸ್ಸು ಕೂಡಿ ಆದ ಒಂದು ವ್ಯಾಪಾರ. ಶ್ರೀರಾಯರಲ್ಲಿ ವಾಯುದೇವರೊಂದಿಗೆ ಸಕಲವಾಙ್ಮನೋದೇವತೆಯಾದ ಸರಸ್ವತಿಯು ನಿತ್ಯ ಸನ್ನಿಧಾನವಿದೆ. ಇವಳ ಕಂಪಾದ ಮುಡಿಹೂವುಗಳಂತಿರುವ ಶ್ರೀರಾಯರ ವಚನಗಳು ಆಕರ್ಷಕವಾಗಿದ್ದುದರಿಂದ ಅವರ 'ಪರಿಮಳ' ಎಂಬ ವ್ಯಾಖ್ಯಾನವು ಸುಧೆಗೆ ಸುಗಂಧವನ್ನು ತಂದುಕೊಟ್ಟಿತೆಂದು ತಿಳಿಯಬಹುದು. "ಪರಿಮಲತೇ ಸುಗಂಧಿಪಾರ್ಥಿವಕಣಾನ್ ಧರತೀತಿ ಪರಿಮಲಃ" ಎಂಬ ನಿರ್ವಚನದಂತೆ ಶ್ರೀರಾಯರ ಕಂಪಾದ ನುಡಿಗಳಿಂದ ಪರಿಮಳ ಗ್ರಂಥಕ್ಕೂ ಪರಿಮಲತ್ವವು (ಚೇತೋಹಾರಿತ್ವವು) ಬಂದಿತು. ಈ ರೀತಿ 'ಪರಿಮಳ'ವು ತಾನು ಸುಗಂಧಯುತವಾಗಿರುವುದಲ್ಲದೇ ಸುಧಾಗ್ರಂಥವನ್ನೂ ಪರಿಮಲಯುಕ್ತವನ್ನಾಗಿ ಮಾಡಿತು. ಪರಿಮಲಯುತವಾದ ಶ್ರೀಸುಧೆಯನ್ನು ಶ್ರೀರಾಯರು ಪಾಠಪ್ರವಚನಗಳ ಮೂಲಕ ಎಲ್ಲೆಡೆ ಪ್ರಸಾರ ಮಾಡಿದರು. ಈ ರೀತಿ ಇಂದ್ರಾಂಶರಾದ ಶ್ರೀಜಯತೀರ್ಥರು ಸುರಲೋಕದಿಂದ ತಂದ ಸುಧೆಯನ್ನು ಪರಿಮಲಯುತವಾಗಿ ಮಾಡಿ ಆ ಪರಿಮಲವು ಎಲ್ಲೆಡೆ ಗಾಳಿಯಿಂದ ಪಸರಿಸಿದಂತೆ ಪ್ರಚಾರ ಮಾಡಿದ ವಾಯ್ವಾವೇಶಯುತರಾದ ಶ್ರೀರಾಯರು ಹೇಳುತ್ತಾರೆ –

**"ಯೇ ತು ಸುಧಾಪಾನಕಾಮುಕಾ ರಸಿಕಾ ಬುಧಾಃ |**
**ಆಘ್ರಾಯೇಮಂ ಪರಿಮಲಂ ಸೇವಂತಾಂ ತೇ ಸುಧಾಮಿಮಾಮ್ ||**

— ಸುಧಾಪಾನ ಮಾಡಲು ಉತ್ಕಂಠಿತರಾದ, ರಸಿಕರಾದ ಜ್ಞಾನಿಗಳೇ ! ನಾವು ರಚಿಸಿದ ಈ ಪರಿಮಲ(ಗ್ರಂಥ)ವನ್ನು ಆಘ್ರಾಣಿಸಿ ಈ ಸುಧಾವನ್ನು ಆಸ್ವಾದಿಸಿರಿ" ಎಂದು. ಪರಿಮಳವನ್ನು ಇಟ್ಟುಕೊಂಡು ಸುಧಾಗ್ರಂಥವನ್ನು ಅಧ್ಯಯನ ಮಾಡಿದರೆ ಅದರೊಳಗಿನ ಎಲ್ಲ ವಿಷಯಗಳು ಸುಲಭವಾಗಿ ತಿಳಿದು ಅಮೃತಪಾನ ಮಾಡಿದಷ್ಟು ಆನಂದವಾಗುವದು.

ಪರಿಮಳವು ಇಷ್ಟು ಹಿರಿಮೆಯುಳ್ಳ ಗ್ರಂಥವಾಗಿದೆ ಮತ್ತು ಇಂಥ ಶ್ರೇಷ್ಠಗ್ರಂಥವನ್ನು ರಚಿಸಿದವರು ಶ್ರೀರಾಯರು ಎಂದು ಗ್ರಂಥದ ಮತ್ತು ಗ್ರಂಥಕರ್ತೃಗಳ ಗುಣಸ್ತವನವು ಈ ಶ್ಲೋಕದಲ್ಲಿ ಕಂಡುಬರುತ್ತದೆ.

'ಪರಿಮಳ'ವೆಂಬ ಅತಿಶ್ರೇಷ್ಠ ಗ್ರಂಥದ ಕರ್ತೃಗಳು ಶ್ರೀರಾಯರು ಎಂದು ಗ್ರಂಥಕರ್ತೃತ್ವೇನ ಗುರುಗುಣಸ್ತವನ ಮಾಡುವುದರೊಂದಿಗೆ ಇನ್ನೊಂದು ಗುರುಗುಣ-ಸ್ತವನವನ್ನು ಈ ಶ್ಲೋಕದಲ್ಲಿ ಗುರುತಿಸಬಹುದು. ಅದು ಯಾವುದೆಂದರೆ –

ಶ್ರೀರಾಯರ 'ನಾಲಿಗೆ' ಎಂಬ ರಂಗಮಂಚದ ಮೇಲೆ ಸರಸ್ವತಿಯು ನಟನ ಮಾಡುತ್ತಿರುವಳು ಎಂದು ಹೇಳಿರುವುದರಿಂದ ಶ್ರೀರಾಯರಲ್ಲಿ ಸದಾ ಸರಸ್ವತಿಯ ಸನ್ನಿಧಾನವಿರುವದೆಂದು ಗೊತ್ತಾಗುವದು. ಸಕಲವಚನಚೇತೋ ದೇವತೆಗಳಾದ ಸರಸ್ವತೀ ಭಾರತೀಯರು ಶ್ರೀರಾಯರಲ್ಲಿ ಇರುವುದಕ್ಕೆ ಅವರ ಪತಿಗಳಾದ ಬ್ರಹ್ಮ ಮತ್ತು

ವಾಯುದೇವರು ಶ್ರೀರಾಯರಲ್ಲಿ ನಿತ್ಯವಾಸ ಮಾಡಿರುವುದೇ ಕಾರಣವಾಗಿದೆ. ಪತಿವ್ರತಾ-ಸ್ತ್ರೀಯರು ತಮ್ಮ ಪತಿಯನ್ನು ಬಿಟ್ಟಿರಲಾರರಷ್ಟೇ! ಮತ್ತು ಇತರರ ಎದುರಿನಲ್ಲಿ ನರ್ತನಾದಿಗಳನ್ನು ಮಾಡಲಾರರಷ್ಟೇ! ಈ ಯುಕ್ತಿಗಳಿಂದ ಶ್ರೀರಾಯರು ವಾಯ್ವಾವೇಶಯುತ-ನಾದ ಪ್ರಹ್ಲಾದನ ಅವತಾರವಾಗಿದ್ದು ಈ ಅವತಾರದಲ್ಲಿಯೂ ವಾಯುದೇವನ ನಿತ್ಯ ಆವೇಶವುಳ್ಳವರಾಗಿದ್ದಾರೆಂಬ ಗುರುಸ್ತವನವು ಇಲ್ಲಿ ಸೂಚಿತವಾಗುತ್ತದೆ.

**೨೦. ಅವತಾರಿಕಾ :** ತತ್ತ್ವಪ್ರಕಾಶಿಕಾ – ಭಾವದೀಪಕರ್ತೃತ್ವೇನ ಶ್ರೀರಾಯರ ಮಹಿಮೆಯನ್ನು ಸ್ತುತಿಸುತ್ತಾರೆ.

**ಪ್ರಾಯಃ ಪ್ರಾಗನ್ಯದೀಯಾತನುತರವಿವೃತಿಗ್ರಂಥವಾಸೋವಿಹೀನಾ**
**ಹ್ರೀಣಾ ನಾದರ್ಶಿ ಧೀರೈರಪಿ ಕಿಲ ಯುವತಿರ್ಭಾಷ್ಯಟೀಕಾಭಿಧಾನಾ ।**
**ಅದ್ಯ ಶ್ರೀರಾಘವೇಂದ್ರವ್ರತಿಕೃತವಿವೃತಿಪ್ರೌಢಕೌಶೇಯರತ್ನಂ (ವಾಸಃ)**
**ಸ್ವೇಹಾಯುಕ್ತಂ ವಸಾನಾ ವಿಹರತಿ ಸುಧಿಯಾಮಗ್ರತಃ ಸ್ವೈರಿಣೀವ ॥ ೨೦ ॥**
**(ಸ್ವಾಭಿಪ್ರೇತಂ ವಸಾನಾ ವಿಹರತಿ ಸುಧಿಯಾಮಗ್ರತಃ ಸ್ವೈರಿಣೀವ) ॥ ೨೦ ॥**

**ಅನ್ವಯಾರ್ಥ :** **ಭಾಷ್ಯಟೀಕಾಭಿಧಾನಾ** = ಸೂತ್ರಭಾಷ್ಯದ ಟೀಕೆಯಾದ 'ತತ್ತ್ವಪ್ರಕಾಶಿಕಾ' ಎಂಬ ಹೆಸರಿನ, **ಯುವತಿಃ** = ಯುವತಿಯು, **ಪ್ರಾಕ್** = ಈ ಮೊದಲು (ಅಂದರೆ ಶ್ರೀರಾಯರು ತತ್ತ್ವಪ್ರಕಾಶಿಕಾಕ್ಕೆ ಭಾವದೀಪವೆಂಬ ವ್ಯಾಖ್ಯಾನವನ್ನು ಬರೆಯುವ ಮೊದಲು), **ಅನ್ಯದೀಯಾತನುತರವಿವೃತಿಗ್ರಂಥವಾಸೋವಿಹೀನಾ** – **ಅನ್ಯದೀಯ** = ಬೇರೆಯವರು ರಚಿಸಿದ, **ಅತನುತರ** = ದೊಡ್ಡದಾದ (ಅಥವಾ ದಪ್ಪದಾದ ಅಥವಾ ಮೈತುಂಬ ಸಾಲುವಂಥ), **ವಿವೃತಿಗ್ರಂಥ** = ವ್ಯಾಖ್ಯಾನಗ್ರಂಥಗಳೆಂಬ, **ವಾಸೋವಿಹೀನಾ** = ವಸ್ತ್ರಗಳಿಲ್ಲದವಳಾಗಿ, **ಚ ಹ್ರೀಣಾ** = ಮತ್ತು ಇದರಿಂದ ಲಜ್ಜಾನ್ವಿತಳಾಗಿ, **ಪ್ರಾಯಃ** = ಪ್ರಾಯಶಃ, **ಧೀರೈಃ ಅಪಿ** = ವಿದ್ವಾಂಸರಿಂದಲೂ ಕೂಡ, **ನ ಅದರ್ಶಿ ಕಿಲ** = ನೋಡಲ್ಪಡಲಿಲ್ಲ ಅಂದರೆ ಯುವತಿಯು ಅವರ ದೃಷ್ಟಿಗೆ ಕೂಡ ಬೀಳಲಿಲ್ಲ. **ಅದ್ಯ** = ಆದರೆ ಇಂದು, **ಸ್ವೇಹಾಯುಕ್ತಂ – ಸ್ವ** = ತನ್ನ **ಈಹಾ** = ಇಚ್ಛೆಗೆ **ಯುಕ್ತಂ** = ಅನುಕೂಲವಾದ (**ಸ್ವಾಭಿಪ್ರೇತಂ** = ತನಗೆ ಇಷ್ಟವಾದ), **ಶ್ರೀರಾಘವೇಂದ್ರ-ವ್ರತಿಕೃತವಿವೃತಿಪ್ರೌಢಕೌಶೇಯರತ್ನಂ (ವಾಸಃ) – ಶ್ರೀರಾಘವೇಂದ್ರವ್ರತಿ** = ಶ್ರೀರಾಘವೇಂದ್ರ-ತೀರ್ಥಯತಿಗಳಿಂದ, **ಕೃತ** = ರಚಿಸಲ್ಪಟ್ಟ, **ವಿವೃತಿ** = ವ್ಯಾಖ್ಯಾನವೆಂಬ, **ಪ್ರೌಢ** = ಶ್ರೇಷ್ಠವಾದ ಅಥವಾ ದೀರ್ಘವಾದ, **ಕೌಶೇಯರತ್ನಂ** = ರೇಶಿಮೆ ವಸ್ತ್ರವನ್ನು (**ಕೌಶೇಯವಾಸಃ** = ಪೀತಾಂಬರವನ್ನು), **ವಸಾನಾ** = ಉಟ್ಟುಕೊಂಡವಳಾಗಿ, **ಸುಧಿಯಾಂ ಅಗ್ರತಃ** = ಪಂಡಿತರ ಎದುರಿನಲ್ಲಿ, **ಸ್ವೈರಿಣೀ ಇವ** = ಸ್ವಚ್ಛಂದವೃತ್ತಿಯ ಸ್ತ್ರೀಯಂತೆ ನಿರ್ಭಯದಿಂದ (ಧೈರ್ಯದಿಂದ), **ವಿಹರತಿ** = ವಿಹರಿಸುತ್ತಾಳೆ.

**ತಾತ್ಪರ್ಯಾರ್ಥ :** ಬ್ರಹ್ಮಸೂತ್ರಭಾಷ್ಯಕ್ಕೆ ಶ್ರೀಜಯತೀರ್ಥವಿರಚಿತ ಟೀಕಾಗ್ರಂಥವಾದ ತತ್ತ್ವಪ್ರಕಾಶಿಕಾ ಎಂಬ ಯುವತಿಯು, ಬೇರೆಯವರು ರಚಿಸಿದ ವ್ಯಾಖ್ಯಾನ ರೂಪವಾದ ಗ್ರಂಥವೆಂಬ ಬಟ್ಟೆಯಿಂದ ತನ್ನ ಮೈ ಪೂರ್ತಿ ಮುಚ್ಚದಂತಾಗಲು ನಾಚಿ ವಿದ್ವಾಂಸರ ಕಣ್ಣಿಗೆ ಬೀಳದೇ ಅಡಗಿ ಕುಳಿತಿದ್ದಳು. ಆದರೆ ಶ್ರೀರಾಘವೇಂದ್ರವ್ರತಿಗಳು ತತ್ತ್ವಪ್ರಕಾಶಿಕಾಖ್ಯ ಯುವತಿಗೆ ಭಾವದೀಪವೆಂಬ ವ್ಯಾಖ್ಯಾನರೂಪವಾದ ಶ್ರೇಷ್ಠ ಪೀತಾಂಬರವನ್ನು ಉಡಿಸಲಾಗಿ ಅವಳು ಸ್ವಚ್ಛಂದ ಸ್ತ್ರೀಯಂತೆ ಎಲ್ಲ ವಿದ್ವಾಂಸರ ಎದುರಿನಲ್ಲಿ ಧೈರ್ಯದಿಂದ ಅಡ್ಡಾಡತೊಡಗಿದಳು.

ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯಕ್ಕೆ ಶ್ರೀಜಯತೀರ್ಥರು ತತ್ತ್ವಪ್ರಕಾಶಿಕಾ ಎಂಬ ಟೀಕಾಗ್ರಂಥವನ್ನು ರಚಿಸಿದರು. ತತ್ತ್ವಪ್ರಕಾಶಿಕಾಕ್ಕೆ ಅನೇಕ ಮಹನೀಯರು ವ್ಯಾಖ್ಯಾನಗಳನ್ನು ರಚಿಸಿದ್ದರೂ ಅವುಗಳಿಂದ ಬ್ರಹ್ಮಸೂತ್ರಭಾಷ್ಯ ಹಾಗೂ ತತ್ತ್ವಪ್ರಕಾಶಿಕಾ ಗ್ರಂಥಗಳ ಸಕಲ ಭಾವವನ್ನು ಚೆನ್ನಾಗಿ ತಿಳಿದುಕೊಳ್ಳಲು ಸುಧಾದಿ ವ್ಯಾಖ್ಯಾಕರ್ತೃಗಳಾದ ಪಂಡಿತರಿಂದಲೂ ಸಾಧ್ಯವಾಗಿರಲಿಲ್ಲ. ಶ್ರೀರಾಘವೇಂದ್ರತೀರ್ಥರು ತತ್ತ್ವಪ್ರಕಾಶಿಕಾಕ್ಕೆ 'ಭಾವದೀಪ'ವೆಂಬ ವಿಸ್ತಾರವಾದ ಟಿಪ್ಪಣಿಯನ್ನು ರಚಿಸಿದಾಗಿನಿಂದ ಎಲ್ಲ ಪಂಡಿತರು ಶ್ರೀಟೀಕಾರಾಯರ ಹಾಗೂ ಶ್ರೀಮದಾಚಾರ್ಯರ ಭಾವವನ್ನು ಚೆನ್ನಾಗಿ ತಿಳಿದುಕೊಳ್ಳಲು ಸಮರ್ಥರಾದರು. ಹೀಗೆ ತತ್ತ್ವಪ್ರಕಾಶಿಕಾ ಗ್ರಂಥವು ಶ್ರೀರಾಯರ ವ್ಯಾಖ್ಯಾನದ ನಂತರ ಹೆಚ್ಚು ಪ್ರಸಿದ್ಧಿಗೆ ಬಂದಿತು ಎಂಬುದು ಈ ಶ್ಲೋಕದ ಭಾವವಾಗಿದೆ.

**ಗುಣಪ್ರಕಾಶ :** ತತ್ತ್ವಪ್ರಕಾಶಿಕಾ-ಭಾವದೀಪವೆಂಬ ಶ್ರೀರಾಯರ ಕೃತಿಯ ಹಿರಿಮೆಯನ್ನು ಸ್ತುತಿಸುವ ಮೂಲಕ ಗುರುಗುಣಸ್ತವನವನ್ನು ಮಾಡಿದ್ದು ಇಲ್ಲಿ ಕಂಡುಬರುತ್ತದೆ. ಶ್ರೀವೇದವ್ಯಾಸರ ಬ್ರಹ್ಮಸೂತ್ರಗಳಿಗೆ ಶ್ರೀಮದಾಚಾರ್ಯರು ಬ್ರಹ್ಮಸೂತ್ರಭಾಷ್ಯವನ್ನು ಬರೆದರು. ಈ ಭಾಷ್ಯಾರ್ಥವನ್ನು ತಿಳಿಸಲು ಶ್ರೀಜಯತೀರ್ಥರು ಬರೆದ ಟೀಕಾಗ್ರಂಥವು 'ತತ್ತ್ವಪ್ರಕಾಶಿಕಾ' ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ತತ್ತ್ವಪ್ರಕಾಶಿಕಾ ಗ್ರಂಥವು ಬಹ್ವರ್ಥಗರ್ಭಿತವಾಗಿದ್ದರಿಂದ ಅದನ್ನು ವಿವರಿಸಲು ವ್ಯಾಖ್ಯಾನಗ್ರಂಥಗಳ ಅವಶ್ಯಕತೆಯಿದ್ದಿತು. ಅದಕ್ಕಾಗಿ ಅನೇಕರು ವ್ಯಾಖ್ಯಾನಗಳನ್ನು ಬರೆದರೂ ಅವೆಲ್ಲ ಬಹು ಸಂಕ್ಷಿಪ್ತವಾಗಿದ್ದವು ಅಥವಾ ವಿಸ್ತಾರವಾಗಿದ್ದರೂ ಅಸ್ಪಷ್ಟವಾಗಿದ್ದವು. ಹೀಗಾಗಿ ಈ ವ್ಯಾಖ್ಯಾನಗಳಿಂದ ಸುಧಾದಿ ವ್ಯಾಖ್ಯಾಕರ್ತೃಗಳಾದ ಪಂಡಿತರಿಂದಲೂ ಶ್ರೀಜಯತೀರ್ಥರ ಭಾವವನ್ನು ಸ್ಪಷ್ಟವಾಗಿ ತಿಳಿದುಕೊಳ್ಳಲು ಸಾಧ್ಯವಾಗಿರಲಿಲ್ಲ. ಇದನ್ನು ನೋಡಿ ಪರಮಕರುಣಾಳುಗಳಾದ ಶ್ರೀರಾಯರು ತತ್ತ್ವಪ್ರಕಾಶಿಕಾಕ್ಕೆ ಅತ್ಯಂತ ವಿಸ್ತೃತವಾದ ಭಾವದೀಪವೆಂಬ ವ್ಯಾಖ್ಯಾನವನ್ನು ಬರೆದು ಶ್ರೀಜಯತೀರ್ಥರ ಭಾವವು ಎಲ್ಲ ಪಂಡಿತರಿಗೂ ಸರಿಯಾಗಿ ಅರ್ಥವಾಗುವಂತೆ

ಕರುಣಿಸಿದರು. 'ಭಾವದೀಪ'ದ ರಚನೆಯಾದಂದಿನಿಂದ ತತ್ತ್ವಪ್ರಕಾಶಿಕಾ ಗ್ರಂಥದ ಅಧ್ಯಯನ-ಅಧ್ಯಾಪನೆಗಳು ಎಲ್ಲೆಡೆ ನಡೆಯುವಂತಾಗಿ ಪಂಡಿತರಿಗೂ, ವಿದ್ಯಾರ್ಥಿಗಳಿಗೂ ಬ್ರಹ್ಮಸೂತ್ರಗಳು, ಸೂತ್ರಭಾಷ್ಯ ಮತ್ತು ತತ್ತ್ವಪ್ರಕಾಶಿಕಾ ಗ್ರಂಥಗಳಲ್ಲಿರುವ ಅಮೃತವನ್ನು ಆಸ್ವಾದನೆ ಮಾಡುವಂತಾಯಿತು. ಭಾವದೀಪದಿಂದ ತತ್ತ್ವಗಳ ಪ್ರಕಾಶವು ಎಲ್ಲೆಡೆ ಪಸರಿಸಿ ಅಜ್ಞಾನಾಂಧಕಾರವು ದೂರಾಯಿತು. **(ತತ್ತ್ವಪ್ರಕಾಶಿಕಾಭಾವದೀಪಂ ಕುರ್ಯಾಂ ಯಥಾಮತಿ ।)**

ಇಲ್ಲಿ ತತ್ತ್ವಪ್ರಕಾಶಿಕೆಯನ್ನು ಸುಂದರ ತರುಣಿಯೆಂದೂ, ಭಾವದೀಪವನ್ನು ಉತ್ತಮಪೀತಾಂಬರವೆಂದೂ ಸ್ವಾರಸ್ಯವಾಗಿ ವರ್ಣಿಸಿದ್ದು ಕಂಡುಬರುತ್ತದೆ. ಭಾವದೀಪದ ರಚನೆಗಿಂತ ಮೊದಲಿದ್ದ ಸಂಕ್ಷಿಪ್ತ ವ್ಯಾಖ್ಯಾನಗಳೆಂಬ ಅತಿ ಚಿಕ್ಕದಾದ ಸೀರೆಯನ್ನು ಉಟ್ಟುಕೊಂಡರೂ ಮೈತುಂಬ ಬಟ್ಟೆ ಇಲ್ಲದಂತಾಗಿದ್ದರಿಂದ 'ತತ್ತ್ವಪ್ರಕಾಶಿಕಾ' ಸುಂದರ ತರುಣಿಯು ಪ್ರಕಾಶಕ್ಕೆ ಬರುತ್ತಿರಲಿಲ್ಲ. ಶ್ರೀರಾಯರ ಭಾವದೀಪವೆಂಬ ಪೀತಾಂಬರವು ಸಿಕ್ಕನಂತರ ಅದನ್ನುಟ್ಟುಕೊಂಡು ತತ್ತ್ವಪ್ರಕಾಶಿಕಾ ತರುಣಿಯು ಬೆಡಗು ಬಿನ್ನಾಣಗಳಿಂದ ಎಲ್ಲೆಡೆ ಸಂಚರಿಸತೊಡಗಿದಳು.

**ನೂತನೈರುದಿತಾ ಯೇ ತು ದೋಷಾಸ್ತೇಷಾಮಲಗ್ನತಾಮ್ । ಸಂಪ್ರದರ್ಶಯಿತುಂ ಜಾತಃ ಪ್ರಸನ್ನಾಃ ಸಂತು ಸಜ್ಜನಾಃ ॥** – ಇತ್ತೀಚಿನ ಕೆಲವರು ತತ್ತ್ವಪ್ರಕಾಶಿಕಾ ಗ್ರಂಥದಲ್ಲಿ ಕೆಲವು ದೋಷಗಳಿವೆಯೆಂದು ಅಪಲಾಪಿಸುತ್ತಿದ್ದಾರೆ. ಅವುಗಳನ್ನು ನಿರಾಕರಿಸುವುದಕ್ಕಾಗಿ ಈ ಭಾವದೀಪವನ್ನು ರಚಿಸುತ್ತಿರುವುದಾಗಿ ಶ್ರೀರಾಯರು ಹೇಳಿರುವುದನ್ನು ನೋಡಿದರೆ ಅವರು ತತ್ತ್ವಪ್ರಕಾಶಿಕಾ ಗ್ರಂಥದ ಅಪಾರ್ಥವಾಗುವದನ್ನು ಅಥವಾ ಸ್ಪಷ್ಟಭಾವವು ತಿಳಿಯದಿರುವುದನ್ನು ಹೋಗಲಾಡಿಸಿ ವಸ್ತ್ರಾಪಹರಣದಲ್ಲಿ ಶ್ರೀಕೃಷ್ಣನು ದ್ರೌಪದಿಯನ್ನು ರಕ್ಷಿಸಿದಂತೆ ತತ್ತ್ವಪ್ರಕಾಶಿಕಾ ಎಂಬ ಸುಂದರ ಸ್ತ್ರೀಯ ಮರ್ಯಾದೆಯನ್ನು ಕಾಪಾಡಿದರು ಎಂದು ತಿಳಿಯುವದು.

ಮೈತುಂಬ ವಸ್ತ್ರಗಳಿಲ್ಲದೇ ಸ್ತ್ರೀಯರು ಹೊರಗೆ ಅಡ್ಡಾಡಬಾರದು ಎಂಬ ನೀತಿಯನ್ನು ಶ್ರೀವಾದೀಂದ್ರತೀರ್ಥರು ಇಲ್ಲಿಯ ವರ್ಣನೆಯಿಂದ ತಿಳಿಸುತ್ತಿದ್ದಾರೆ.

**೨೧. ಅವತಾರಿಕಾ :** ನ್ಯಾಯಮುಕ್ತಾವಲಿ ಎಂಬ ಗ್ರಂಥದ ಕರ್ತೃಗಳೆಂದು ಶ್ರೀರಾಯರ ಮಹಿಮೆಯನ್ನು ವರ್ಣಿಸುತ್ತಾರೆ.

**ಗ್ರಂಥೋಽಯಂ ನ್ಯಾಯಮುಕ್ತಾವಲಿರಿತಿ ಭವತಾ ರಾಘವೇಂದ್ರ ಪ್ರಣೀತೋ**
**ನೂನಂ ಮುಕ್ತಾವಲಿರ್ಯತ್ಪೃಥಮುಪಚಿತಾದುದ್ಧೃತಸ್ತಂತ್ರಸಿಂಧೋಃ ।**
**ಪ್ರೋತಶ್ಚ ಧ್ಯಾನತಂತೌ ತದನು ತವ ಗುಣಪ್ರೌಢಿಮಾಂಶಂಸತಾಂ ನಃ**
**ಕಂಠೇಷು ಪ್ರೇಮಭೂಮ್ನಾ ಬಹುಮತಿವಿಧಯೇ ವಾಧುನಾ ಸನ್ನಧಾಯಿ ॥೨೧॥**

**ಅನ್ವಯಾರ್ಥ** : **ರಾಘವೇಂದ್ರ** = ಭೋ ಶ್ರೀರಾಘವೇಂದ್ರಗುರುಸಾರ್ವಭೌಮರೇ ! **ಭವತಾ** = ನಿಮ್ಮಿಂದ, **ಪ್ರಣೀತಃ** = ರಚಿಸಲ್ಪಟ್ಟ, **ನ್ಯಾಯಮುಕ್ತಾವಲಿಃ ಇತಿ** = ನ್ಯಾಯಮುಕ್ತಾವಲಿ ಎಂಬ, **ಅಯಂ ಗ್ರಂಥಃ** = ಈ ಗ್ರಂಥವು ಏನಿದೆಯೋ ಅದು, **ನೂನಂ** = ನಿಶ್ಚಯವಾಗಿಯೂ, **ಮುಕ್ತಾವಲಿಃ** = ಮುತ್ತಿನ ಹಾರವೇ ಆಗಿದೆ. **ಯತ್ ಅಯಂ ಗ್ರಂಥಃ** = ಏಕೆಂದರೆ ಈ ಗ್ರಂಥವು, **ಉಪಚಿತಾತ್** = ಅಭಿವೃದ್ಧವಾದ, **ತಂತ್ರಸಿಂಧೋಃ** = ಸಿದ್ಧಾಂತವೆಂಬ ಸಮುದ್ರದೊಳಗಿಂದ, **ಪ್ರಥಮಂ** = ಮೊದಲು, **ಉದ್ಧೃತಃ** = ಎತ್ತಲ್ಪಟ್ಟು, **ತದನು** = ಅನಂತರ, **ಧ್ಯಾನತಂತೌ** = ನಿಮ್ಮ ವಿಚಾರಧಾರೆ ಎಂಬ ಧ್ಯಾನತಂತುವಿನಲ್ಲಿ, **ಪ್ರೋತಃ** = ಪೋಣಿಸಲ್ಪಟ್ಟು, **ತವ ಗುಣಪ್ರೌಢಿಂ** = ನಿಮ್ಮ ಗುಣಗಳ ಹಿರಿಮೆಯನ್ನು, **ಆಶಂಸತಾಂ ನಃ** = ಸ್ತುತಿಸುವ ನಮ್ಮ, **ಕಂಠೇಷು** = ಕೊರಳುಗಳಲ್ಲಿ (ಕಂಠಗಳಲ್ಲಿ), **ಅಧುನಾ** = ಈಗ, **ಭವತಾ** = ನಿಮ್ಮಿಂದ, **ಬಹುಮತಿವಿಧಯೇ ವಾ** = ಬಹುಮಾನ ಕೊಡುವದಕ್ಕೋಸ್ಕರವೋ ಎಂಬಂತೆ (ನಮ್ಮ ಜ್ಞಾನಾಭಿವೃದ್ಧಿಗಾಗಿ), **ಪ್ರೇಮಭೂಮ್ನಾ** = ಪ್ರೇಮಾತಿಶಯದಿಂದ, **ಸನ್ನ್ಯಧಾಯಿ** = ಹಾಕಲ್ಪಟ್ಟಿರುತ್ತದೆ, **ಅತಃ ಅಯಂ ಗ್ರಂಥಃ ಮುಕ್ತಾವಲಿಃ ನೂನಂ** = ಆದ್ದರಿಂದ ಈ ಗ್ರಂಥವು ನಿಜವಾಗಿಯೂ ಮುತ್ತಿನ ಹಾರವೇ ಆಗಿದೆ.

**ತಾತ್ಪರ್ಯಾರ್ಥ** : ಭೋ ಶ್ರೀರಾಘವೇಂದ್ರಗುರುಸಾರ್ವಭೌಮರೇ ! ನಿಮ್ಮಿಂದ ವಿರಚಿತವಾದ 'ನ್ಯಾಯಮುಕ್ತಾವಲಿ' ಎಂಬ ಗ್ರಂಥವು ನಿಜವಾಗಿಯೂ ಮುತ್ತಿನಹಾರವೇ ಆಗಿದೆ. ಏಕೆಂದರೆ ಅಭಿವೃದ್ಧವಾದ ಸಮುದ್ರದೊಳಗಿಂದ ಮೇಲೆತ್ತಿ ತಂದ ಮುತ್ತುಗಳನ್ನು ದಾರದಲ್ಲಿ ಪೋಣಿಸಿ ಮಾಡಿದ ಮುತ್ತಿನಹಾರವನ್ನು ತನ್ನ ಗುಣಪ್ರಶಂಸೆ ಮಾಡುವ ವಿದ್ವಾಂಸರ ಕೊರಳಲ್ಲಿ ರಾಜನು ಸಂತೋಷದಿಂದ ಬಹುಮಾನರೂಪವಾಗಿ ಹಾಕುವಂತೆ, ಸಿದ್ಧಾಂತಸಮುದ್ರದೊಳಗಿಂದ ಆರಿಸಿ ತಂದು ಧ್ಯಾನ ತಂತು ಅಂದರೆ ನಿಮ್ಮ ವಿಚಾರವೆಂಬ ದಾರದಲ್ಲಿ ಪೋಣಿಸಿ (ಎಲ್ಲವನ್ನು ಚೆನ್ನಾಗಿ ವಿಮರ್ಶಿಸಿ) ಮಾಡಿದ 'ನ್ಯಾಯಮುಕ್ತಾವಲಿ'ಯು, ನಿಮ್ಮ ಅಗಣ್ಯ ಗುಣಗಳನ್ನು ಹಾಗೂ ಅಗಮ್ಯ ಮಹಿಮೆಗಳನ್ನು ಯಥಾಶಕ್ತಿ ವರ್ಣಿಸುವ ನಮ್ಮಂಥವರ ಕಂಠಗಳಲ್ಲಿ ಪ್ರೇಮಾತಿಶಯದಿಂದ ಬಹುಮಾನ ರೂಪವಾಗಿ ನಿಮ್ಮಿಂದ ಹಾಕಲ್ಪಟ್ಟಿರುತ್ತದೆ.

**ಗುಣಪ್ರಕಾಶ** : ಶ್ರೀರಾಯರು 'ನ್ಯಾಯಮುಕ್ತಾವಳಿ' ಎಂಬ ಶ್ರೇಷ್ಠ ಗ್ರಂಥದ ಕರ್ತೃಗಳು ಎಂದು ಈ ಶ್ಲೋಕದಲ್ಲಿ ಅವರ ಗುಣಗಾನ ಮಾಡಲಾಗಿದೆ. ಸಿದ್ಧಾಂತವೆಂಬ ಸಾಗರದಾಳದಿಂದ ಮೇಲೆತ್ತಿ ಚೆನ್ನಾಗಿ ವಿಮರ್ಶೆಮಾಡಿ ನಂತರ ಧ್ಯಾನತಂತುವಿನಲ್ಲಿ ಪೋಣಿಸಿದ ಅಧಿಕರಣಗಳೆಂಬ ಮುತ್ತುಗಳ ಹಾರವೇ ಈ ನ್ಯಾಯಮುಕ್ತಾವಳೀ ಗ್ರಂಥವು. ತಮ್ಮ ಗುಣಗಾನ ಮಾಡುವವರಲ್ಲಿ ಪ್ರಸನ್ನರಾದ ಶ್ರೀರಾಯರು ಅವರಿಗೆ ಬಹುಜ್ಞಾನ

ಪ್ರಾಪ್ತವಾಗಲೆಂದು (= ಬಹುಮತಿವಿಧಯೇ) ಈ ನ್ಯಾಯಮುಕ್ತಾವಳಿಯನ್ನು ಅವರ ಕಂಠದಲ್ಲಿ ಹಾಕಿದಂತಿದೆ ಎಂದು ವರ್ಣನೆ ಬರುತ್ತದೆ.

ಈ ನ್ಯಾಯಮುಕ್ತಾವಳೀ ಗ್ರಂಥದ ಅಧ್ಯಯನದಿಂದ ಬ್ರಹ್ಮಸೂತ್ರಾಧಿಕರಣಗಳ ಪರಸ್ಪರ ಸಂಬಂಧ ಮತ್ತು ಆ ಆ ಅಧಿಕರಣಗತವಾದ ಸೂತ್ರಗಳ ಪರಸ್ಪರ ಸಂಬಂಧ, ವಿಷಯವಾಕ್ಯ ಸಂಗ್ರಹ, ಅಧಿಕರಣ ಪೂರ್ವಪಕ್ಷ ಸಿದ್ಧಾಂತ, ಮತ್ತು ಆ ಅಧಿಕರಣದ ನ್ಯಾಯಸಂಗ್ರಹ ಮುಂತಾದವುಗಳ ಜ್ಞಾನವು ಸ್ಫುಟವಾಗುವದು. ಇದರಿಂದ ಈ ಗ್ರಂಥದ ಉಪಯುಕ್ತತೆ ಹಾಗೂ ಹಿರಿಮೆಯ ಅರಿವಾಗುವದು.

ಈ ರೀತಿ, ಈ ನ್ಯಾಯಮುಕ್ತಾವಳೀ ಗ್ರಂಥವು ವಿದ್ವಾಂಸರ ಕಂಠದಲ್ಲಿರುವ ಮುತ್ತಿನಹಾರದಂತಿರುವದೆಂಬುದನ್ನು ಶ್ರೀರಾಯರು ತಮ್ಮ ಈ ಗ್ರಂಥದಲ್ಲಿ ಇನ್ನೊಂದು ಬಗೆಯಾಗಿ ಹೇಳುತ್ತಾರೆ –

**ಪ್ರಣಮ್ಯ ರಮಣಂ ಲಕ್ಷ್ಮ್ಯಾಃ ಪೂರ್ಣಬೋಧಗುರೂನಪಿ ।**
**ನ್ಯಾಯಮುಕ್ತಾವಳಿಂ ಕುರ್ಮೋ ವಿದುಷಾಂ ಕಂಠಭೂಷಣಮ್ ॥** ಎಂದು ಶ್ರೀರಾಯರು ಗ್ರಂಥಪ್ರಾರಂಭದಲ್ಲಿ ಮಂಗಳಾಚರಣೆಯನ್ನು ಮಾಡುತ್ತಾರೆ.

**ಭವತಾ ಪ್ರಣೀತಃ ನ್ಯಾಯಮುಕ್ತಾವಲಿಃ ತವ ಗುಣಪ್ರೌಢಿಂ ಆಶಂಸತಾಂ ನಃ ಕಂಠೇಷು ಪ್ರೇಮಭೂಮ್ನಾ ಬಹುಮತಿವಿಧಯೇ ಅಧುನಾ ಸಂನ್ಯಧಾಯಿ ॥** — "ಗುರು-ಸಾರ್ವಭೌಮರೇ ! ನಿಮ್ಮಿಂದ ರಚಿಸಲ್ಪಟ್ಟ ನ್ಯಾಯಮುಕ್ತಾವಲೀ ಎಂಬ ಗ್ರಂಥಹಾರವು ನಿಮ್ಮ ಗುಣಗಾನ ಮಾಡುತ್ತಿರುವ ನಮ್ಮ ಕಂಠಗಳಲ್ಲಿ ಪ್ರೇಮಾತಿಶಯದಿಂದ ಬಹುಮಾನ ಪುರಸ್ಸರವಾಗಿ ಹಾಕಲ್ಪಟ್ಟಿತು" ಎಂದು ವರ್ಣಿಸುವಾಗ '**ಅಪರೋಕ್ಷ್ಯೇ ಗುರುಸ್ತುತ್ಯಃ**' ಎಂದು ಹೇಳಿದಂತೆ ಗುರುಗಳನ್ನು ಎದುರಿಗೇ ಸ್ತೋತ್ರಮಾಡುವುದು ದೋಷವಲ್ಲ. ಈ ಸ್ತೋತ್ರದಿಂದ ಗುರುಗಳು ಪ್ರಸನ್ನರಾಗಿ ಬಹುಜ್ಞಾನ ಪ್ರಾಪ್ತಿಯಾಗು-ವಂತೆ ಅನುಗ್ರಹಿಸುತ್ತಾರೆ ಎಂಬ ತತ್ತ್ವವು ಈ ಶ್ಲೋಕದಲ್ಲಿ ಸೂಚಿತವಾಗಿದೆ.

**೨೨. ಅವತಾರಿಕಾ :** ಶ್ರೀಮದಾಚಾರ್ಯರ ಅಣುಭಾಷ್ಯಕ್ಕೆ ಬರೆದ ತತ್ತ್ವಮಂಜರೀ ಎಂಬ ಟೀಕಾಗ್ರಂಥದ ರಚನೆಯಲ್ಲಿ ಶ್ರೀರಾಯರು ತೋರಿದ ಕೌಶಲವನ್ನು ವರ್ಣಿಸುತ್ತಾರೆ.

**ಹಂತಾನಂತೋಣುಭಾಷ್ಯೇ ವಿಲಸತಿ ಭಗವತ್ಪಾದಸಂವರ್ಣಿತೋಽರ್ಥಃ**
**ಸತ್ಯಂ ಪ್ರತ್ಯೇತು ಲೋಕಃ ಕಥಮಿದಮಧುನಾ ತಸ್ಯ ಟೀಕಾಂ ವಿನಾ ತೇ ।**
**ಧೀರಶ್ರೀರಾಘವೇಂದ್ರವ್ರತಿವರ ನಿವಸದ್ವಿಶ್ವಮಾಸ್ಯಾಂತರಾಲೇ**
**ಸ್ತೋಕೇ ತೋಕಸ್ಯ ಶೌರೇರತಿಭೃಶಕುಪಿತಾಂ ತತ್ತ್ವಸೂಮಂತರೇವ ॥ ೨೨ ॥**

**ಅನ್ವಯಾರ್ಥ :** ಧೀರ ಶ್ರೀರಾಘವೇಂದ್ರ = ಪ್ರಾಜ್ಞರಾದ ಶ್ರೀರಾಘವೇಂದ್ರ-ಗುರುವರ್ಯರೇ ! ಅಣುಭಾಷ್ಯೇ = ಅಣುಭಾಷ್ಯವೆಂಬ ಚಿಕ್ಕ ಗ್ರಂಥದಲ್ಲಿ, ಭಗವತ್ಪಾದ-

**ಸಂವರ್ಣಿತಃ** = ಶ್ರೀಮದಾನಂದತೀರ್ಥ ಭಗವತ್ಪಾದರಿಂದ ಹೇಳಲ್ಪಟ್ಟ, **ಅನಂತಃ ಅರ್ಥಃ** = ಅಪರಿಮಿತವಾದ ಅರ್ಥವು, **ವಿಲಸತಿ** = ಶೋಭಿಸುತ್ತದೆ (ಅಡಕವಾಗಿರುತ್ತದೆ), **ಸತ್ಯಂ** = ಎಂಬುದು ಸತ್ಯವು ಮತ್ತು **ಹಂತ** = ಇದು ಅತ್ಯಾಶ್ಚರ್ಯವು. ಹಾಗಿದ್ದರೂ **ಇದಂ** = ಅನಂತಾರ್ಥವಿರುವ ಈ ವಿಷಯವನ್ನು, **ತೋಕಸ್ಯ** = ಬಾಲಕನಾದ, **ಶೌರೇಃ** = ಶ್ರೀಕೃಷ್ಣನ, **ಸ್ತೋಕೇ** = ಪುಟ್ಟದಾದ, **ಆಸ್ಯಾಂತರಾಲೇ** = ಬಾಯಿಯೊಳಗೆ, **ನಿವಸತ್** = ಇರುವ, **ವಿಶ್ವಂ** = ಬ್ರಹ್ಮಾಂಡವನ್ನು (ಅಥವಾ ಎಲ್ಲವನ್ನು), **ಅತಿಭೃಶಕುಪಿತಾಂ** – **ಅತಿಭೃಶ** = ಬಹಳವಾಗಿ, **ಕುಪಿತಾಂ** = ಕ್ರುದ್ಧಳಾದ, **ತತ್ಪ್ರಸೂಂ** – **ತತ್** = ಆ ಬಾಲಕನ **ಪ್ರಸೂಂ** = ಜನನಿಯಾದ ಯಶೋದೆಯನ್ನು, **ಅಂತರಾ ಇವ** = ಹೊರತುಪಡಿಸಿ ಇತರ ಜನರು ತಿಳಿಯದಿರುವಂತೆ, **ಅಯಂ ಲೋಕಃ** = ಈ ಲೋಕದ ಜನರು, (ಅಣುಭಾಷ್ಯಕ್ಕೆ ಬರೆದಿರುವ), **ತೇ** = ನಿಮ್ಮ, **ಟೀಕಾಂ ವಿನಾ** = ಟೀಕೆಯನ್ನು ನೋಡದೇ (ಟೀಕೆಯಾದ ತತ್ತ್ವಮಂಜರಿಯ ಸಹಾಯವಿಲ್ಲದೇ), **ಕಥಂ ಪ್ರತ್ಯೇತು** = ತಿಳಿಯಲು ಹೇಗೆ ಸಾಧ್ಯ ?

**ತಾತ್ಪರ್ಯಾರ್ಥ** : ಭೋ ಧೀರಶ್ರೀರಾಘವೇಂದ್ರವ್ರತಿವರರೇ ! ಅಣುಭಾಷ್ಯವೆಂಬ ಚಿಕ್ಕ ಗ್ರಂಥದಲ್ಲಿ ಶ್ರೀಮದಾಚಾರ್ಯರಿಂದ ಅಪರಿಮಿತವಾದ ಅರ್ಥವು ಹೇಳಲ್ಪಟ್ಟಿದೆ. ಅಣುಭಾಷ್ಯಕ್ಕೆ ನಿಮ್ಮ 'ತತ್ತ್ವಮಂಜರೀ' ಎಂಬ ಟೀಕೆಯ ಸಹಾಯವಿಲ್ಲದೇ ಅಣುಭಾಷ್ಯದೊಳಗಿರುವ ವಿಪುಲವಾದ ಅರ್ಥಗಳನ್ನು ಜನರು ಹೇಗೆ ಯಥಾವತ್ತಾಗಿ ತಿಳಿಯಲು ಸಮರ್ಥರಾದಾರು ? ಶೂರಕುಲಸಂಜಾತನಾದ ಬಾಲಗೋಪಾಲಕೃಷ್ಣನ ಪುಟ್ಟದಾದ ಬಾಯಿಯೊಳಗೆ ಚತುರ್ದಶ ಭುವನಗಳಿರುವುದನ್ನು ಹೆಚ್ಚು ಕುಪಿತಳಾಗಿದ್ದ ಬಾಲಕನ ತಾಯಿಯಾದ ಯಶೋದಾದೇವಿಯ ಹೊರತಾದ ಲೋಕದ ಸಾಮಾನ್ಯ ಜನರು ಅರಿಯಬಲ್ಲರೇ ! ಇಲ್ಲ. (ಅದರಂತೆ ಅಣುಭಾಷ್ಯದೊಳಗಿರುವ ವಿಪುಲವಾದ ಅರ್ಥಗಳನ್ನು ನಿಮ್ಮ ಹೊರತಾಗಿ ಬೇರೆಯವರು ತಿಳಿಯಲು ಸಮರ್ಥರಲ್ಲ ಮತ್ತು ಆ ಅರ್ಥಗಳಲ್ಲಿಯ ಕೆಲವನ್ನು ನೀವು ತತ್ತ್ವಮಂಜರಿಯಲ್ಲಿ ಪ್ರಕಟಪಡಿಸಿದ್ದೀರಿ. ತತ್ತ್ವಮಂಜರಿಯ ಸಹಾಯವಿಲ್ಲದೇ ಅಣುಭಾಷ್ಯದ ಆ ಕೆಲವು ಅರ್ಥಗಳನ್ನಾದರೂ ತಿಳಿಯಲು ಸಾಧ್ಯವಿಲ್ಲ.)

**ಗುಣಪ್ರಕಾಶ** : ಶ್ರೀಮದಾಚಾರ್ಯರಿಂದ ರಚಿತವಾದ ಅಣುಭಾಷ್ಯವೆಂಬುದು ಅತಿ ಚಿಕ್ಕದಾದರೂ ಬಹ್ವರ್ಥಗರ್ಭಿತವಾದ ಗ್ರಂಥವು. ಪುಟ್ಟ ಬಾಲಕ ಶ್ರೀಕೃಷ್ಣನ ಚಿಕ್ಕದಾದ ಬಾಯಿಯಲ್ಲಿ ಬ್ರಹ್ಮಾಂಡವೇ ಅಡಗಿರುವುದನ್ನು ಯಶೋದಾ ದೇವಿಯು ಮಾತ್ರ ಕಂಡಳು ಆದರೆ ಇತರ ಜನರಲ್ಲ. ಯಶೋದೆಯ ಮೂಲಕ ಎಲ್ಲ ಜನರೂ ಶ್ರೀಕೃಷ್ಣನ ಮುಖದಲ್ಲಿ ಬ್ರಹ್ಮಾಂಡವೇ ಇರುವುದನ್ನು ತಿಳಿದರು. ಅದರಂತೆ ಈ ಚಿಕ್ಕದಾದ ಅಣುಭಾಷ್ಯಗ್ರಂಥದಲ್ಲಿ ಅನಂತಾರ್ಥಗಳಿರುವುದನ್ನು ಶ್ರೀರಾಯರು ಮಾತ್ರ ಮನಗಂಡರು. ಪರಮ ಕಾರುಣಿಕರಾದ ಗುರುಸಾರ್ವಭೌಮರು ತಾವು ಕಂಡ

ಅನಂತಾರ್ಥಗಳನ್ನು ಇತರ ವಿದ್ವನ್ಮಂಡಲಿಗೂ ತಿಳಿಸಬೇಕೆಂದು ಕೃಪೆಯಿಂದ ಅಣುಭಾಷ್ಯಕ್ಕೆ 'ತತ್ತ್ವಮಂಜರೀ' ಎಂಬ ಟೀಕೆಯನ್ನು ಬರೆದು ಪ್ರಕಟಗೊಳಿಸಿದರು. ಹೀಗೆ ಶ್ರೀರಾಯರ ಮೂಲಕವಾಗಿ ಎಲ್ಲ ವಿದ್ವಾಂಸರು ಚಿಕ್ಕದಾದ ಅಣುಭಾಷ್ಯದಲ್ಲಿ ಅಡಗಿರುವ ಅನಂತಾರ್ಥಗಳನ್ನು ತಿಳಿಯಲು ಸಮರ್ಥರಾದರು. ಈ ರೀತಿ ತತ್ತ್ವಮಂಜರಿಯು ಬಹು ಉಪಕಾರಕವಾದ ಶ್ರೇಷ್ಠ ಕೃತಿಯಾಗಿದೆ.

**'ಸಂಕ್ಷೇಪವಿಸ್ತರಾಭ್ಯಾಂ ಹಿ ಕಥಯಂತಿ ಮನೀಷಿಣಃ'** ಎಂದಂತೆ ಅತಿಸಂಕ್ಷಿಪ್ತ-ವಾಗಿದ್ದ ಅಣುಭಾಷ್ಯದ ಅನಂತಾರ್ಥಗಳನ್ನು ವಿಸ್ತಾರವಾಗಿ ಹೇಳುವ ಶ್ರೀರಾಯರ ವ್ಯಾಖ್ಯಾನ ಕೌಶಲವನ್ನು ಈ ತತ್ತ್ವಮಂಜರಿಯಲ್ಲಿ ಕಾಣಬಹುದು.

ಶ್ರೀಮದಾಚಾರ್ಯರ ಹೆಚ್ಚಿನ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಬರೆದ ಶ್ರೀಟೀಕಾಕೃತ್ಪಾದರು ಈ ಅಣುಭಾಷ್ಯಕ್ಕೆ ಟೀಕಾವನ್ನು ಬರೆಯಲಿಲ್ಲ. ತತ್ತ್ವಮಂಜರಿಯು, ಶ್ರೀರಾಯರು ಶ್ರೀಮದಾಚಾರ್ಯರ ಮೂಲಗ್ರಂಥಕ್ಕೆ ಬರೆದ ಮೊದಲ ಟೀಕಾಗ್ರಂಥವಾಗಿದೆ. ಟಿಪ್ಪಣ್ಯಾಚಾರ್ಯ ಚಕ್ರವರ್ತಿಗಳೆಂದು ಪ್ರಸಿದ್ಧರಾಗಿದ್ದ ಶ್ರೀರಾಯರು ಈ ಟೀಕಾಗ್ರಂಥ-ದಿಂದ ಟೀಕಾಕಾರರೆಂದೂ ವಿದ್ವನ್ಮಂಡಲಿಯಲ್ಲಿ ಪ್ರಸಿದ್ಧಿಗೆ ಬಂದರು.

**"ಭಗವತ್ಪಾದಸಂವರ್ಣಿತಃ ಅನಂತಃ ಅರ್ಥಃ ಅಣುಭಾಷ್ಯೇ ವಿಲಸತಿ"** ಎಂಬಲ್ಲಿ ಮತ್ತೆ ಶ್ರೀಮದಾಚಾರ್ಯರ ಗುಣಸ್ತವನ ಮತ್ತು ಅವರಿಂದ ರಚಿತವಾದ ಅಣುಭಾಷ್ಯದ ಪ್ರಶಂಸೆಯೂ ಇವೆ. **"ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ । ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ ।"** ಎಂಬ ಉಕ್ತಿಯಂತೆ ಸಮಗ್ರ ಐಶ್ವರ್ಯ, ವೀರ್ಯ, ಯಶಸ್ಸು, ಶ್ರೀ, ಜ್ಞಾನ ಮತ್ತು ವಿಜ್ಞಾನ ಈ ಆರಕ್ಕೆ 'ಭಗ' ಎಂದು ಹೆಸರು. ಈ ಆರನ್ನೂ ಉಳ್ಳವರು ಭಗವಾನ್ ಎಂದು ಕರೆಯಲ್ಪಡುತ್ತಾರೆ. ಶ್ರೀಹರಿಯಲ್ಲಿ ಈ ಆರೂ ನಿರವಧಿಕವಾಗಿರುವದರಿಂದ ಅವನು ಪರಮ ಭಗವಂತನು. ಅನಂತರ ಮುಖ್ಯಪ್ರಾಣನು ಮತ್ತು ಅವನ ಅವತಾರಗಳು. ಹೀಗೆ ಶ್ರೀಮದಾಚಾರ್ಯರು ಶ್ರೀಹರಿಯ ನಂತರ ಭಗವಾನ್ ಆಗಿರುವರು.

"ಉತ್ತಮಾನಾಂ ಸ್ವರೂಪಂ ತು ಪಾದಶಬ್ದೇನ ಭಣ್ಯತೇ" ಎಂಬೋಕ್ತಿಯಂತೆ ಶ್ರೀಮದಾಚಾರ್ಯರು ಜೀವೋತ್ತಮರಾಗಿರುವುದರಿಂದ ಅವರನ್ನು ಭಗವತ್ಪಾದರು ಎಂದು ಸ್ತುತಿಸಲಾಗಿದೆ. ಚಿಕ್ಕದಾದ ಭಾಷ್ಯದಲ್ಲಿ (ಅಣುಭಾಷ್ಯದಲ್ಲಿ) ಅನಂತ ಅರ್ಥಗಳನ್ನು ಸೇರಿಸಿರುವದು ಶ್ರೀಮದಾಚಾರ್ಯರ ಪ್ರತಿಭೆ ಮತ್ತು ಗ್ರಂಥರಚನಾ ಕೌಶಲಗಳಿಗೆ ಒಂದು ನಿದರ್ಶನ. ಅಣುಭಾಷ್ಯದ ಒಂದೊಂದು ಶಬ್ದದಲ್ಲಿ, ವಾಕ್ಯದಲ್ಲಿ ಎಷ್ಟು ಬ್ರಹ್ಮಸೂತ್ರಗಳ ಹಾಗೂ ಅಧಿಕರಣಗಳ ಅರ್ಥಗಳಿವೆ ಎಂಬುದು ತತ್ತ್ವಮಂಜರಿಯನ್ನು ಅಧ್ಯಯನ ಮಾಡಿದವರಿಗೆ ತಿಳಿದು ಆಶ್ಚರ್ಯವಾಗುವದು.

ಅಣುಭಾಷ್ಯದಲ್ಲಿ ಅನಂತಾರ್ಥಗಳಿರುವದನ್ನು ಶ್ರೀರಾಯರು ತತ್ತ್ವಮಂಜರಿಯ ಪ್ರಾರಂಭದಲ್ಲಿ ಹೀಗೆ ತಿಳಿಸುತ್ತಾರೆ –

**ಗ್ರಂಥೋಽಯಮಪಿ ಬಹ್ವರ್ಥೋ ಭಾಷ್ಯಂ ಚಾತ್ಯರ್ಥವಿಸ್ತರಮ್ ।**
**ಇತ್ಯುಕ್ತಿಸಾಮ್ಯಾತ್ ಸಂಕ್ಷೇಪಭಾಷ್ಯಂ ಚಾತ್ಯರ್ಥವಿಸ್ತರಮ್ ॥**
**ಅನಂತೋಽರ್ಥಃ ಪ್ರಕಟಿತಸ್ತ್ವಯಾಣೌ ಭಾಷ್ಯಸಂಗ್ರಹೇ ।**
**ಇತ್ಯಾಹುಃ ಶ್ರೀಮದಾನಂದತೀರ್ಥಾರ್ಯೌಪಸದಾ ಅಪಿ ॥**
**ಅತೋಽನೇಕಾರ್ಥ(ಗುಂಭ)ಯುಕ್ತಸ್ಯ ನೈತದ್ಭಾಷ್ಯಸ್ಯ ವಿಸ್ತೃತೌ ।**
**ಶಕ್ತೋಽಸ್ಮ್ಯಥಾಪಿ ಲೇಶೇನ ವ್ಯಾಖ್ಯಾಂ ಕುರ್ಯಾಂ ಯಥಾಮತಿ ॥**

ಶ್ರೀಮದಾಚಾರ್ಯರಿಂದ ಅಣುಭಾಷ್ಯದಲ್ಲಿ ಸೇರಿಸಲ್ಪಟ್ಟ ಅನಂತಾರ್ಥಗಳನ್ನು ಪ್ರಕಾಶಪಡಿಸುವದು ಅವರ ಆವೇಶಯುತರಾದ ಪ್ರಹ್ಲಾದಾವತಾರಿಗಳಾದ ಶ್ರೀರಾಯರಿಗೆ ಮಾತ್ರ ಸಾಧ್ಯ.

**೨೩. ಅವತಾರಿಕಾ :** ತಂತ್ರದೀಪಿಕಾಖ್ಯ ಗ್ರಂಥಕರ್ತೃಗಳ ಹಿರಿಮೆಯನ್ನು ವರ್ಣಿಸುತ್ತಾರೆ.

**ಭಿನ್ನೈರರ್ಥೈರನೇಕಪ್ರಕರಣಭಣಿತೈರದ್ಯ ಮಧ್ವಾಗಮಾಬ್ಧೌ**
**ಮತ್ಯಾ ಭೂಯೋ ವಿಚಿಂತ್ಯ ಶ್ರುತಿಪರಿಣತಯಾ ಶಸ್ತಯಾ ಸಂಗ್ರಹೀತೈಃ ।**
**ಸೂತ್ರೇಷ್ವೇಕೈಕಶೋಽಪಿ ಪ್ರತಿವರ ಭವತಾ ಯೋಜಿತೇಷು ಪ್ರವಾಚಾಂ**
**ಮೋದೋ ಯಾದೃಙ್ನ ತಾದೃಕ್ ತವ ಪುನರಿತರೈಃ ರಾಘವೇಂದ್ರ ಪ್ರಬಂಧೈಃ ॥೨೩॥**

**ಅನ್ವಯಾರ್ಥ :** **ಪ್ರತಿವರ ರಾಘವೇಂದ್ರ** = ಪ್ರತಿಶ್ರೇಷ್ಠ ಶ್ರೀಗುರುರಾಘವೇಂದ್ರರೇ ! **ಭವತಾ** = ನಿಮ್ಮಿಂದ, **ಶ್ರುತಿಪರಿಣತಯಾ** – **ಶ್ರುತಿ** = ವೇದಾಧ್ಯಯನ ಮತ್ತು ಶ್ರವಣಾದಿಗಳಿಂದ **ಪರಿಣತಯಾ** = ಪರಿಪಕ್ವವಾದ, **ಶಸ್ತಯಾ** = ವಿಶಾಲವಾದ ಮತ್ತು ಪರಿಶುದ್ಧವಾದ, **ಮತ್ಯಾ** = ನಿಮ್ಮ ಬುದ್ಧಿಯಿಂದ, **ಭೂಯಃ ವಿಚಿಂತ್ಯ** = ಪುನಃ ಪುನಃ ವಿಚಾರಮಾಡಿ, **ಸಂಗ್ರಹೀತೈಃ** = ಸಂಗ್ರಹಿಸಲ್ಪಟ್ಟ, **ಮಧ್ವಾಗಮಾಬ್ಧೌ** = ಶ್ರೀಮಧ್ವಶಾಸ್ತ್ರವೆಂಬ ಸಮುದ್ರದೊಳಗಿನ, **ಅನೇಕ ಪ್ರಕರಣಭಣಿತೈಃ** – **ಅನೇಕ** = ಸೂತ್ರಭಾಷ್ಯ, ಅನುವ್ಯಾಖ್ಯಾನ, ಅಣುಭಾಷ್ಯ, ನ್ಯಾಯವಿವರಣಾದಿ ಅನೇಕ **ಪ್ರಕರಣ** = ಪ್ರಕರಣಗಳಲ್ಲಿ, **ಭಣಿತೈಃ** = ಶ್ರೀಮದಾಚಾರ್ಯರಿಂದ ಹೇಳಲ್ಪಟ್ಟ, **ಭಿನ್ನೈಃ** = ವೈವಿಧ್ಯಮಯವಾದ, **ಅರ್ಥೈಃ** = ಅರ್ಥಗಳಿಂದ, **ಸೂತ್ರೇಷು** = ಬ್ರಹ್ಮಸೂತ್ರಗಳು, **ಏಕೈಕಶಃ** = ಒಂದೊಂದಾಗಿ, **ಭವತಾ** = ನಿಮ್ಮಿಂದ, **ಯೋಜಿತೇಷು ಸತ್ಸು** = ಹೊಂದಿಸಿ ನಿರೂಪಿಸಲ್ಪಡಲಾಗಿ, **ಪ್ರವಾಚಾಂ** = ಪ್ರವಚನಶೀಲರಾದ ಆಚಾರ್ಯರಿಗೆ, **ಯಾದೃಕ್ ಮೋದಃ** = ಯಾವ ರೀತಿಯಾದ ಆನಂದವು ಆಗುವದೋ, **ತಾದೃಕ್ ಮೋದಃ** = ಅಂತಹ ಆನಂದವು, **ತವ** =

ನಿಮ್ಮ, ಇತರೈಃ ಪ್ರಬಂಧೈಃ = ಇತರ ಗ್ರಂಥಗಳಿಂದ (ಗ್ರಂಥಗಳ ಅಧ್ಯಯನದಿಂದ), ಪುನಃ = ಮತ್ತೊಮ್ಮೆ, ನ ಬಭೂವ = ಆಗಲಿಲ್ಲ (ಆಗುವದಿಲ್ಲ).

**ತಾತ್ಪರ್ಯಾರ್ಥ** : ಭೋ ಶ್ರೀರಾಘವೇಂದ್ರಯತಿಸಾರ್ವಭೌಮರೇ ! ಮಧ್ವಶಾಸ್ತ್ರವೆಂಬ ಸಮುದ್ರದೊಳಗಿನ ಭಾಷ್ಯ, ನ್ಯಾಯವಿವರಣ, ಅನುವ್ಯಾಖ್ಯಾನಾದಿ ಅನೇಕ ಪ್ರಕರಣಗಳಲ್ಲಿ ಶ್ರೀಮದಾಚಾರ್ಯರಿಂದ ಹೇಳಲ್ಪಟ್ಟ ವೈವಿಧ್ಯಮಯವಾದ ಅರ್ಥಗಳನ್ನು ವೇದಾಧ್ಯಯನ ಹಾಗೂ ಶ್ರವಣಾದಿಗಳಿಂದ ಪಕ್ವವಾದ, ವಿಶಾಲವಾದ ಹಾಗೂ ಪರಿಶುದ್ಧವಾದ ನಿಮ್ಮ ಬುದ್ಧಿಯಿಂದ ಪುನಃ ಪುನಃ ವಿಚಾರಮಾಡಿ ಸಂಗ್ರಹಿಸಿ ಆ ಎಲ್ಲ ಅರ್ಥಗಳನ್ನು ಒಂದೊಂದಾಗಿ ಸೂತ್ರಗಳಲ್ಲಿ ಯೋಜನೆ ಮಾಡಿ 'ತಂತ್ರದೀಪಿಕಾ' ಎಂಬ ಗ್ರಂಥವನ್ನು ರಚಿಸಿದ್ದೀರಿ. ಭೋ ರಾಘವೇಂದ್ರಗುರುವರ್ಯರೇ ! ಪ್ರವಚನಶೀಲರಾದ ವಿದ್ವಾಂಸರಿಗೆ ನಿಮ್ಮ ಅರ್ಥಯೋಜನೆಗಳಿಂದ (ತಂತ್ರದೀಪಿಕಾ ಗ್ರಂಥದಿಂದ) ಯಾವ ರೀತಿಯಾದ ಆನಂದವಾಗುವದೋ ಅಷ್ಟು ನಿಮ್ಮ ಇತರ ಯಾವ ಗ್ರಂಥಗಳಿಂದಲೂ ಆಗುವದಿಲ್ಲ. (ಶ್ರೀರಾಯರ ಎಲ್ಲ ಗ್ರಂಥಗಳ ಅಧ್ಯಯನ ಮಾಡುವಾಗಲೂ ವಿದ್ವಾಂಸರಿಗೆ ಆನಂದವಾಗೇ ಆಗುವದು. ಕಾರ್ತಿಕಮಾಸದ ಮಹಾತ್ಮೆಯನ್ನು ಹೇಳುವಾಗ 'ನ ಕಾರ್ತಿಕಸಮೋ ಮಾಸೋ' – ಕಾರ್ತಿಕಕ್ಕೆ ಸಮಾನವಾದ ಮಾಸವಿಲ್ಲ ಎಂದು ಹೇಳಿ ಮಾರ್ಗಶೀರ್ಷಮಾಸ ಮಹಾತ್ಮೆಯಲ್ಲಿ ಮಾರ್ಗಶೀರ್ಷಮಾಸಕ್ಕಿಂತ ಶ್ರೇಷ್ಠಮಾಸವಿಲ್ಲವೆಂದು ಹೇಳುವುದನ್ನು ಪುರಾಣಗಳಲ್ಲಿ ಕಾಣುತ್ತೇವೆ. ಆ ಆ ಮಾಸವು ಬಂದಾಗ ಆ ಆ ಮಾಸವು ಶ್ರೇಷ್ಠವೆಂದು ಹೇಳುವಂತೆ ಪ್ರಕೃತ 'ತಂತ್ರದೀಪಿಕಾ' ಗ್ರಂಥದ ವರ್ಣನೆ ನಡೆದದ್ದರಿಂದ ಅದನ್ನು ಈ ರೀತಿ ವರ್ಣಿಸಲಾಗಿದೆಯೆಂದು ತಿಳಿಯಬೇಕು.)

**ಗುಣಪ್ರಕಾಶ** : ಶ್ರೀಮದಾಚಾರ್ಯರು ಸೂತ್ರಪ್ರಸ್ಥಾನದ ಮೇಲೆ ಸೂತ್ರಭಾಷ್ಯ, ಅನುಭಾಷ್ಯ (ಅನುವ್ಯಾಖ್ಯಾನ), ನ್ಯಾಯವಿವರಣ ಮುಂತಾದ ಗ್ರಂಥಗಳನ್ನು ರಚಿಸಿದ್ದಾರೆ. ಅವರು ಈ ಗ್ರಂಥಗಳಲ್ಲಿ ವೈವಿಧ್ಯಮಯವಾದ ಅರ್ಥಗಳನ್ನು ವೈವಿಧ್ಯಮಯವಾಗಿ ನಿರೂಪಿಸಿದ್ದಾರೆ. ಶ್ರೀರಾಯರು ಈ ಎಲ್ಲ ಅರ್ಥಗಳನ್ನು ಗ್ರಹಿಸಿ, ಪುನಃ ಪುನಃ ವಿಮರ್ಶಿಸಿ, ಸೂತ್ರಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಯೋಜನೆ ಮಾಡಿ 'ತಂತ್ರದೀಪಿಕಾ' ಎಂಬ ಗ್ರಂಥವನ್ನು ರಚಿಸಿದರು. ಈ ಗ್ರಂಥವನ್ನು ಅಧ್ಯಯನ ಮಾಡಿದವರಿಗೆ ಎಷ್ಟು ಸಂತೋಷವಾಯಿತೋ ಅಷ್ಟು ಶ್ರೀರಾಯರ ಇತರ ಯಾವ ಕೃತಿಗಳಿಂದಲೂ ಆಗಲಿಲ್ಲವೆಂದು (**ಮೋದೋ ಯಾದೃಜ್ ನ ತಾದೃಕ್ ತವ ಪುನರಿತರೈಃ ರಾಘವೇಂದ್ರ ಪ್ರಬಂಧೈಃ**) ಈ ತಂತ್ರದೀಪಿಕಾದ ಶ್ರೇಷ್ಠತೆಯನ್ನು ಈ ಶ್ಲೋಕದಲ್ಲಿ ಸ್ತುತಿಸಲಾಗಿದೆ. ಇಂಥ ಕೃತಿಕಾರರು ಶ್ರೀರಾಯರು ಎಂದು ಶ್ರೀರಾಯರ ಗುಣಸ್ತವನವಾಗಿದೆ.

'ಭಿನ್ನೈರರ್ಥೈರನೇಕಪ್ರಕರಣಭಣಿತೈರದ್ಯ ಮಧ್ವಾಗಮಾಬ್ಧೌ' ಎಂಬಲ್ಲಿ ಶ್ರೀಮದಾಚಾರ್ಯರು ಸೂತ್ರಪ್ರಸ್ಥಾನದ ಭಾಷ್ಯ, ಅನುವ್ಯಾಖ್ಯಾನ, ನ್ಯಾಯವಿವರಣಾದಿ ಗ್ರಂಥಗಳಲ್ಲಿ

ಒಂದೇ ವಿಷಯಕ್ಕೆ ವೈವಿಧ್ಯಮಯವಾಗಿ ಅರ್ಥವನ್ನು ಹೇಳಿರುವ ಅವರ ಕೌಶಲವನ್ನು ವರ್ಣಿಸಲಾಗಿದೆ. ಹೀಗೆ ಇಲ್ಲಿ ಆದಿಗುರುಗಳ ಪುನಃಸ್ತವನವೂ ಕಂಡು ಬರುವದು.

**ಮತ್ವಾ ಭೂಯೋ ವಿಚಿಂತ್ಯ ಶ್ರುತಿಪರಿಣತಯಾ ಶಸ್ತಯಾ ಸಂಗ್ರಹೀತ್ರೈಃ** ಎಂಬಲ್ಲಿ ಶ್ರೀರಾಯರ ಅನಿತರಸಾಧಾರಣ ಬುದ್ಧಿಯ ವರ್ಣನೆ ಇದೆ. ಶ್ರೀರಾಯರ ಬುದ್ಧಿಯು ವೇದಾಧ್ಯಯನದಿಂದಲೂ ಶ್ರವಣಮನನಾದಿಗಳಿಂದೂ ಪಕ್ವವಾಗಿದ್ದಿತು. (ಶ್ರುತಿಪರಿಣತಯಾ), ಸಂದೇಹ, ಅಜ್ಞಾನ, ವಿಪರೀತಜ್ಞಾನಗಳಿಲ್ಲದೇ ಪರಿಶುದ್ಧವಾಗಿದ್ದಿತು (ಶಸ್ತಯಾ). ಶ್ರೀರಾಯರು ಬಹಳ ವಿಚಾರಿಸಿ, ವಿಮರ್ಶಿಸಿ 'ಇದಮಿತ್ಥಂ' ಎಂದು ಒಂದು ಅರ್ಥನಿರ್ಣಯಕ್ಕೆ ಬರುತ್ತಿದ್ದರಲ್ಲದೇ 'ಸಹಸಾ' (**ಸಹಸಾ ನಾಭಿಧತ್ತೇ**) ಏನನ್ನೂ ಹೇಳುತ್ತಿರಲಿಲ್ಲವೆಂಬುದು '**ಭೂಯೋ ವಿಚಿಂತ್ಯ**' ಎಂಬ ಪದದಿಂದ ತಿಳಿಯುವದು. "**ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಂ । ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ॥**" ಎಂಬ ತಾತ್ಪರ್ಯನಿರ್ಣಾಯಕ ಲಿಂಗಗಳಿಂದ ಅರ್ಥವನ್ನು ನಿರ್ಣಯಿಸಿ ತಿಳಿಯುತ್ತಿದ್ದರು.

ಶ್ರೀಮದಾಚಾರ್ಯರು ವಿವಿಧಗ್ರಂಥಗಳಲ್ಲಿ ಹೇಳಿದ ವೈವಿಧ್ಯಮಯವಾದ ಅರ್ಥಗಳನ್ನು ಗ್ರಹಿಸಿ ಸ್ಮರಣೆಯಲ್ಲಿಟ್ಟುಕೊಂಡು ನಂತರ ಚೆನ್ನಾಗಿ ವಿಮರ್ಶಿಸಿ ತಂತ್ರದೀಪಿಕೆಯಲ್ಲಿಯ ಸೂತ್ರವ್ಯಾಖ್ಯಾನದಲ್ಲಿ ಅವೆಲ್ಲವುಗಳನ್ನು ಕ್ರಮಬದ್ಧವಾಗಿ ಯೋಜಿಸಿರ-ಬೇಕಾದರೆ ಶ್ರೀರಾಯರ ಅಸಾಧಾರಣ ಗ್ರಹಣಧಾರಣ ಪಟುತಾ ಮತ್ತು ಪ್ರತಿಭಾ ಗುಣದ ಪರಿಚಯವಾಗುವದು. ಈ ಗುಣಗಳು "**ಸಂಗ್ರಹೀತ್ರೈಃ**" "**ಮತ್ವಾ ಭೂಯೋ ವಿಚಿಂತ್ಯ ಸೂತ್ರೇಷು ಯೋಜಿತೇಷು**" ಎಂಬ ಪದಗಳಿಂದ ತಿಳಿದು ಬರುವವು.

**೨೪. ಅವತಾರಿಕಾ :** 'ಮಂತ್ರೋದ್ಧಾರ'ವೆಂಬ ಗ್ರಂಥದ ಕರ್ತೃಗಳೆಂದು ವರ್ಣಿಸುತ್ತಾರೆ.

**ಧೀರ ಶ್ರೀರಾಘವೇಂದ್ರವ್ರತಿವರ ಸುಜನಾನುಗ್ರಹವ್ಯಗ್ರಚಿತ್ತೈ-**
**ರಾಚಾರ್ಯೈಸ್ಸಂಗ್ರಹೀತಾಃ ಕತಿಚನ ಮನವಸ್ಸಾರಭೂತಾಶ್ಶ್ರುತಿಭ್ಯಃ ।**
**ತಾನೇವೋದ್ಧೃತ್ಯ ಭೂಯಃ ಶ್ರುತಿಷು ನಿದಧತಾ ಶಿಷ್ಯವರ್ಗೋಪಕ್ಲೃಪ್ತ್ಯೈ**
**ಲೋಕೇ ಸಾಧು ವ್ಯಧಾಯಿ ಶ್ರುತಗುಣ ಭವತಾಚಾರ್ಯಚರ್ಯಾನುವೃತ್ತಿಃ ॥೨೪॥**

**ಅನ್ವಯಾರ್ಥ :** **ಸುಜನಾನುಗ್ರಹವ್ಯಗ್ರಚಿತ್ತೈಃ** – **ಸುಜನ** = ಸಜ್ಜನರ ಮೇಲೆ, **ಅನುಗ್ರಹ** = ಅನುಗ್ರಹ ಮಾಡಬೇಕೆಂದು, **ವ್ಯಗ್ರ** = ಆತುರವಾದ, **ಚಿತ್ತೈಃ** = ಮನಸ್ಸುಳ್ಳ, **ಆಚಾರ್ಯೈಃ** = ಶ್ರೀಮದಾಚಾರ್ಯರಿಂದ, **ಶ್ರುತಿಭ್ಯಃ** = ವೇದರಾಶಿಗಳೊಳಗಿಂದ, **ಸಾರಭೂತಾಃ** = ಸಾರಭೂತವಾದ (ಶ್ರೇಷ್ಠವಾದ ಅಥವಾ ಶೀಘ್ರಫಲಪ್ರದವಾದ),

**ಕತಿಚನ** = ಕೆಲವು, **ಮನವಃ** = ಮಂತ್ರಗಳು, **ಸಂಗ್ರಹೀತಾಃ** = ತಂತ್ರಸಾರಸಂಗ್ರಹವೆಂಬ ಗ್ರಂಥದಲ್ಲಿ ಸಂಗ್ರಹಿಸಲ್ಪಟ್ಟಿವೆ. **ಶ್ರುತಗುಣ** = ಪ್ರಸಿದ್ಧವಾದ ಗುಣಗಳುಳ್ಳ, **ಧೀರ ಶ್ರೀರಾಘವೇಂದ್ರವ್ರತಿವರ** = ಪ್ರಾಜ್ಞರಾದ ಶ್ರೀರಾಘವೇಂದ್ರಯತಿಸಾರ್ವಭೌಮರೇ ! **ಲೋಕೇ ಶಿಷ್ಯವರ್ಗೋಪಕ್ಲ್ಪಪ್ತ್ಯೈ(ಕೃತ್ಯೈ)** = ಲೋಕದಲ್ಲಿ ಶಿಷ್ಯಸಮೂಹಕ್ಕೆ ಉಪಕಾರ ಮಾಡುವ ಉದ್ದೇಶದಿಂದ, **ತಾನ್ ಏವ** = ಶ್ರೀಮದಾಚಾರ್ಯರಿಂದ ಸಂಗ್ರಹಿಸಲ್ಪಟ್ಟ ಮಂತ್ರಗಳನ್ನೇ, **ಭೂಯಃ** = ಮತ್ತೆ, **ಉದ್ಧೃತ್ಯ** = ಸಂಗ್ರಹಿಸಿ, **ಶ್ರುತಿಷು** = ಶಿಷ್ಯರ ಶ್ರೋತ್ರೇಂದ್ರಿಯಗಳಲ್ಲಿ, **ನಿದಧತಾ** = ಉಪದೇಶಪೂರ್ವಕ ಇಡುವ, **ಭವತಾ** = ನಿಮ್ಮಿಂದ, **ಆಚಾರ್ಯಚರ್ಯಾನುವೃತ್ತಿಃ** – **ಆಚಾರ್ಯ** = ಶ್ರೀಮದಾಚಾರ್ಯರ, **ಚರ್ಯ** = ವ್ಯಾಪಾರದ, **ಅನುವೃತ್ತಿಃ** = ಅನುಕರಣವು, **ಸಾಧು** = ಚೆನ್ನಾಗಿ, **ವ್ಯಧಾಯಿ** = ಮಾಡಲ್ಪಟ್ಟಿದೆ.

**ತಾತ್ಪರ್ಯಾರ್ಥ** : ಭೋ ಧೀರ ಶ್ರೀರಾಘವೇಂದ್ರವ್ರತಿವರ ! ಸಜ್ಜನರ ಮೇಲೆ ಅನುಗ್ರಹ ಮಾಡುವಲ್ಲಿ ಆಸಕ್ತರಾದ ಶ್ರೀಮದಾಚಾರ್ಯರು ಅಪಾರವಾದ ವೇದರಾಶಿಗಳೊಳಗಿಂದ ಸಾರಭೂತವಾದ ಕೆಲವು ಮಂತ್ರಗಳನ್ನು ಉದ್ಧರಿಸಿ ಏಕತ್ರ ಸಂಗ್ರಹಿಸಿದರು. ಪ್ರಸಿದ್ಧ ಗುಣಮಣಿಗಳಾದ ಗುರುವರ್ಯರೇ ! ಮಹಾಕಾರುಣಿಕರಾದ ನೀವು ಶಿಷ್ಯವರ್ಗಕ್ಕೆ ಉಪಕಾರ ಮಾಡುವದಕ್ಕೋಸ್ಕರ ಅವೇ ಮಂತ್ರಗಳನ್ನು ಉದ್ಧರಿಸಿ ಅನೇಕ ಶಿಷ್ಯರ ಕಿವಿಗಳಲ್ಲಿ ಪುನಃ ಪುನಃ ಉಪದೇಶಿಸುತ್ತ ಶ್ರೀಮದಾಚಾರ್ಯರ ಚರಿತೆಯನ್ನು (ಸಜ್ಜನಾನುಗ್ರಹರೂಪವಾದ ವ್ಯಾಪಾರವನ್ನು) ಚೆನ್ನಾಗಿ ಅನುಕರಿಸಿದ್ದೀರಿ.

**ಗುಣಪ್ರಕಾಶ** : ಅತ್ಯುಪಯುಕ್ತವಾದ **'ತಂತ್ರಸಾರಮಂತ್ರೋದ್ಧಾರ'** ಎಂಬ ಕೃತಿಯ ಕರ್ತೃಗಳು ಶ್ರೀರಾಯರು ಎಂದು ಇಲ್ಲಿ ಗುರುಸ್ತವನವಿದೆ. ಇದು ಶ್ರೀಮದಾಚಾರ್ಯರು ರಚಿಸಿದ 'ತಂತ್ರಸಾರಸಂಗ್ರಹ'ವೆಂಬ ಕೃತಿಯಲ್ಲಿಯ ಕೆಲವು ಅತ್ಯವಶ್ಯವಾದ ಮಂತ್ರಗಳನ್ನು ಉದ್ಧರಿಸಿ ಶಿಷ್ಯರಿಗೆ ನಿತ್ಯಜಪಕ್ಕೆ ಅನುಕೂಲವಾಗುವಂತೆ ಒಂದೆಡೆ ಸೇರಿಸಿ ನಿರ್ಮಿಸಿ ಅನುಗ್ರಹಿಸಿದ ಕೃತಿ.

ಮಹಾವಿಷ್ಣುವು ಸೃಷ್ಟಿಯ ಪ್ರಾರಂಭದಲ್ಲಿ ಚತುರ್ಮುಖ ಬ್ರಹ್ಮನಿಗೆ ತಂತ್ರಸಾರವನ್ನು ಉಪದೇಶಿಸಿದನು. ಇದು ಈಗ ಉಪಲಬ್ಧವಿಲ್ಲದಿದ್ದರೂ ಶ್ರೀಮದಾಚಾರ್ಯರ ಕಾಲಕ್ಕೆ ಉಪಲಬ್ಧವಿತ್ತು. ಮೂಲತಂತ್ರಸಾರವು ಬಹು ವಿಸ್ತಾರವಾಗಿದ್ದರಿಂದ ಅದು ಸಾಮಾನ್ಯರಾದವರಿಗೆ ಅಧ್ಯಯನ, ಅನುಷ್ಠಾನಗಳಿಗೆ ಅನುಕೂಲವಾಗಿರಲಿಲ್ಲ. ಸರ್ವಸ್ವಕೀಯ ಸಜ್ಜನಾನುಗ್ರಹೇಚ್ಛೆಯಿಂದಲೇ ಕರ್ಮಭುವಿಯಲ್ಲಿ ಅವತರಿಸಿದ ಶ್ರೀಮದಾಚಾರ್ಯರು ಸುಜನಾನುಗ್ರಹ ಮಾಡುವುದಕ್ಕಾಗಿ ಮೂಲತಂತ್ರಸಾರದಲ್ಲಿ ಉಧೃತವಾದ ಶ್ರುತಿಗಳಲ್ಲಿಯ ಕೆಲವನ್ನು ಆರಿಸಿ ಸಂಗ್ರಹಿಸಿದರು. ಇದು **'ತಂತ್ರಸಾರ-**

ಸಂಗ್ರಹ'ವೆಂದು ಪ್ರಸಿದ್ಧವಾಯಿತು. ಕಾಲಮಾನಕ್ಕನುಸರಿಸಿ ಸಜ್ಜನರು ಕೆಲವನ್ನಾದರೂ ಪ್ರಮುಖ ಮಂತ್ರಗಳನ್ನು ಅನುಷ್ಠಾನಪೂರ್ವಕ ಜಪಿಸಿ ಉದ್ಧೃತರಾಗಲಿ ಎಂದು ಇಚ್ಛಿಸಿ ಶಿಷ್ಯರ ಮೇಲಿನ ಅನುಕಂಪೆಯಿಂದ ಶ್ರೀರಾಯರು ಈ ತಂತ್ರಸಾರ ಸಂಗ್ರಹದೊಳಗಿಂದ . ಕೆಲವು ಉತ್ಕೃಷ್ಟ ಮಂತ್ರಗಳನ್ನು ಆರಿಸಿ "ತಂತ್ರಸಾರ ಮಂತ್ರೋದ್ಧಾರ"ವೆಂಬ ಕೃತಿಯನ್ನು ರಚಿಸಿ ಶಿಷ್ಯರಿಗೆ ಉಪದೇಶ ಮಾಡಿದರು.

ಈ ಶ್ಲೋಕದಲ್ಲಿಯ ಕೆಲವು ವಿಶೇಷಣಗಳಿಂದ ಪುನಃ ಆದಿಗುರುಗಳ ಮತ್ತು ಶ್ರೀರಾಯರ ಗುಣಸ್ತವನವನ್ನು ಕಾಣಬಹುದು.

**ಸುಜನಾನುಗ್ರಹವ್ಯಗ್ರಚಿತ್ತೈಃ ಆಚಾರ್ಯೈಸ್ಸಂಗ್ರಹೀತಾಃ ಕತಿಚನ ಮನವಃ ಸಾರಭೂತಾಃ ಶ್ರುತಿಭ್ಯಃ ||** – ಸುಜನರ ಮೇಲೆ ಅನುಗ್ರಹ ಮಾಡಬೇಕೆಂದು ಸದಾ ಬಯಸುತ್ತಿರುವ ಶ್ರೀಮದಾಚಾರ್ಯರು (ಮೂಲತಂತ್ರಸಾರಸಂಗ್ರಹದೊಳಗಿನ) ಅಪಾರ ವೇದರಾಶಿಯೊಳಗಿಂದ ಸಾರಭೂತವಾದ ಕೆಲವು ಮಂತ್ರಗಳನ್ನು ಉದ್ಧರಿಸಿ 'ತಂತ್ರಸಾರ ಸಂಗ್ರಹ'ವನ್ನು ರಚಿಸಿದರು. ಇಲ್ಲಿ ಶ್ರೀಮದಾಚಾರ್ಯರ ಕೃಪಾಗುಣದ ಸ್ತುತಿಯಿದೆ.

**'ಶಿಷ್ಯವರ್ಗೋಪಕ್ಲೃಪ್ತ್ಯೈ'** ಎಂಬುದರಿಂದ ಶಿಷ್ಯಸಮೂಹಕ್ಕೆ ಉಪಕಾರವಾಗಲೆಂಬ ಕೃಪಾಪೂರ್ಣ ದೃಷ್ಟಿಯಿಂದ ಶ್ರೀರಾಯರು ಈ ಕೃತಿಯನ್ನು ರಚಿಸಿರುವರು ಎಂದು ಹೇಳುವಾಗ ಶ್ರೀರಾಯರ ಕೃಪಾ ಗುಣದ ಸ್ತವನವನ್ನು ಕಾಣುತ್ತೇವೆ.

"**ಭವತಾ ಆಚಾರ್ಯಚರ್ಯಾನುವೃತ್ತಿಃ ಸಾಧು ವ್ಯಧಾಯಿ** – ಶ್ರೀಗುರುಸಾರ್ವಭೌಮರೇ, ಈ ಕೃತಿಯನ್ನು ರಚಿಸುವ ಮೂಲಕ ನಿಮ್ಮಿಂದ ಶ್ರೀಮದಾಚಾರ್ಯರ ಅನುಕರಣೆಯು ಚೆನ್ನಾಗಿ ಮಾಡಲ್ಪಟ್ಟಿತು" ಎಂದು ಹೇಳುವಾಗ ಶ್ರೀರಾಯರ ಗುರುಭಕ್ತಿ, ಗುರ್ವಾಜ್ಞಾ ಪರಿಪಾಲನೆ, ಶಿಷ್ಟಾಚಾರಾನುಸರಣೆ ಮತ್ತು ಸಂಪ್ರದಾಯ ಪ್ರವರ್ತನ ಮುಂತಾದವುಗಳ ಪರಿಚಯವಾಗುವದು.

**'ಶ್ರುತಗುಣ'** ಅಂದರೆ ಪ್ರಸಿದ್ಧವಾದ ಗುಣಗಳುಳ್ಳ ಗುರುಸಾರ್ವಭೌಮರೇ ಎಂಬ ವಿಶೇಷಣದಿಂದ ಜ್ಞಾನ, ಭಕ್ತಿ, ವೈರಾಗ್ಯ, ಶಮ, ದಮ, ದಯಾ, ಕ್ಷಮಾ, ಅನಸೂಯಾ, ಶೌಚ, ಅಕಾರ್ಪಣ್ಯ, ಸತ್ಯ, ತಪ, ಆರ್ಜವ ಹೀಗೆ ಶ್ರೇಷ್ಠ ಗುಣಗಳೇನೇನಿವೆಯೋ ಅವೆಲ್ಲವುಗಳನ್ನು ಸಂಗ್ರಹಿಸಿ ಅವುಗಳಿಂದ ಯುಕ್ತರಾದವರು ಶ್ರೀರಾಯರು ಎಂದು ಹೇಳಬಹುದು.

"**ಆಚಾರ್ಯೈಃ ಶ್ರುತಿಭ್ಯಃ ಉದ್ಧೃತಾಃ ಮನವಃ ಶ್ರುತಿಷು ನಿದಧತಾ ಭವತಾ ಆಚಾರ್ಯಚರ್ಯಾನುವೃತ್ತಿಃ ಸಾಧು ವ್ಯಧಾಯಿ** – ಗುರುಸಾರ್ವಭೌಮರೇ, ಶ್ರೀಮದಾಚಾರ್ಯರಿಂದ ಶ್ರುತಿಗಳೊಳಗಿಂದ ಉದ್ಧೃತವಾದ ಮಂತ್ರಗಳನ್ನು ಪುನಃ

ಶ್ರುತಿಗಳಲ್ಲೇ ಸೇರಿಸಿಬಿಡುವ ನಿಮ್ಮಿಂದ, ಶ್ರೀಮದಾಚಾರ್ಯರ ವ್ಯಾಪಾರಗಳ ಅನುಸರಣೆಯು ಚೆನ್ನಾಗಿ ಮಾಡಲ್ಪಟ್ಟಿದೆ" ಎಂಬುದು ಈ ಶ್ಲೋಕದ ಮೇಲ್ನೋಟಕ್ಕೆ ತೋರುವ ಅರ್ಥ. ಶ್ರೀಮದಾಚಾರ್ಯರು ಶ್ರುತಿಗಳಿಂದ ಉದ್ಧರಿಸಿದ ಮಂತ್ರಗಳನ್ನು ಶ್ರೀರಾಯರು ಅವುಗಳನ್ನು ಪುನಃ ಶ್ರುತಿಗಳೊಳಗೇ ಇಡುತ್ತಿದ್ದರೆ ಇದು ಆಚಾರ್ಯರ ಕೃತಿಗೆ ವಿರುದ್ಧವಾಗುವದಿಲ್ಲವೇ ? ಹೀಗಿದ್ದರೂ ಶ್ರೀರಾಯರದು ಆಚಾರ್ಯಚರ್ಯಾನು-ವೃತ್ತಿ ಎಂದು ಹೇಳುವದು ಹೇಗೆ ಸರಿಯಾಗುವದು ಎಂದು ಆಕ್ಷೇಪಿಸಿದರೆ ಇದಕ್ಕೆ ಸಮಾಧಾನವು ಹೀಗಿದೆ. ಶ್ರೀಮದಾಚಾರ್ಯರು **ಶ್ರುತಿ** ಅಂದರೆ ವೇದಗಳೊಳಗಿಂದ ಉದ್ಧರಿಸಿದ ಮಂತ್ರಗಳನ್ನು ಶ್ರೀರಾಯರು ತಮ್ಮ **ಶಿಷ್ಯರ ಶ್ರುತಿಗಳಲ್ಲಿ** ಅಂದರೆ **ಕಿವಿಗಳಲ್ಲಿ** ಉಪದೇಶಿಸಿ ಹೇಳುತ್ತಿದ್ದರು ಎಂದು ಅರ್ಥ ಮಾಡಬೇಕು. ಆಗ ಎಲ್ಲ ವಿರೋಧವು ಪರಿಹಾರವಾಗುವದು, ಈ ಶ್ಲೋಕದಲ್ಲಿ '**ಶ್ರುತಿ**' ಎಂಬ ಪದವು ಎರಡು ಅರ್ಥಗಳಲ್ಲಿ ಸ್ವಾರಸ್ಯಕರವಾಗಿ ಬಳಸಲ್ಪಟ್ಟಿದೆ.

**ವಿಶೇಷವಿಷಯ** : ಈ ಶ್ಲೋಕದಲ್ಲಿ ಶ್ರೀರಾಯರು ರಚಿಸಿದ 'ಮಂತ್ರೋದ್ಧಾರ' (ತಂತ್ರಸಾರ ಮಂತ್ರೋದ್ಧಾರ) ಎಂಬ ಗ್ರಂಥದ ವರ್ಣನೆ ಇದ್ದರೂ ಇತ್ತೀಚಿನ ಕೆಲವು ವಿದ್ವಾಂಸರು ಋಗರ್ಥಮಂಜರೀ(ಮಂತ್ರಾರ್ಥಮಂಜರೀ)ಯನ್ನೇ ಈ ಕೃತಿ ಎಂದು ಭಾವಿಸಿದ್ದರು. ಮಂತ್ರಾರ್ಥಮಂಜರಿಯ ಉಲ್ಲೇಖವು ಗುರುಗುಣಸ್ತವನದ ೨೮ ನೆಯ ಶ್ಲೋಕದಲ್ಲಿ ಪ್ರತ್ಯೇಕವಾಗಿ ಬಂದಿದೆ. ಗುರುಗುಣಸ್ತವನದ ಈ ಶ್ಲೋಕಕ್ಕಿರುವ ಶ್ರೀವಸುಧೇಂದ್ರತೀರ್ಥರ ವ್ಯಾಖ್ಯಾನದಲ್ಲಿ – "**ತತ್ವಸಕ್ತಮಂತ್ರೋದ್ಧಾರಣಕರ್ತೃತ್ವೇನ ಸ್ತೌತಿ || ಧೀರೇತಿ ||**" ಎಂದೂ, ಶ್ರೀಜಯರಾಮಾರ್ಯರ (ಶ್ರೀಧೀರೇಂದ್ರತೀರ್ಥರ) ವ್ಯಾಖ್ಯಾನ-ದಲ್ಲಿ "**ಮಂತ್ರೋದ್ಧಾರಕರಣಸಾಮರ್ಥ್ಯಂ ವರ್ಣಯತಿ || ಧೀರಶ್ರೀರಿತಿ ||**" ಎಂದೂ ವರ್ಣಿಸಲಾಗಿರುವುದರಿಂದ ಈ ಶ್ಲೋಕದಲ್ಲಿ 'ಮಂತ್ರೋದ್ಧಾರ'ವೆಂಬ ಪ್ರತ್ಯೇಕ ಗ್ರಂಥದ ಸ್ತವನ ಇದೆಯಲ್ಲದೇ 'ಋಗರ್ಥಮಂಜರೀ' ಅಥವಾ 'ಮಂತ್ರಾರ್ಥಮಂಜರೀ'-ಯದ್ದಲ್ಲ. ಮಂತ್ರೋದ್ಧಾರ ಗ್ರಂಥವು "**ನಾನಾಯುಧಧರಂ ದೇವಂ ನಾನಾರೂಪಂ ರಮಾಪತಿಮ್ । ಪ್ರಣಮ್ಯ ತಂತ್ರಸಾರೋಕ್ತಮಂತ್ರಾನುದ್ಧೃತ್ಯ ದರ್ಶಯೇ ||**" ಎಂದು ಪ್ರಾರಂಭವಾಗುತ್ತದೆ. ಇದರಲ್ಲಿ ೪೧ ಮಂತ್ರಗಳ ಜಪದ ವಿಧಿವಿಧಾನಗಳನ್ನು ತಿಳಿಸಲಾಗಿದೆ.

**೨೫. ಅವತಾರಿಕಾ** : ಗೀತಾರ್ಥಸಂಗ್ರಹಕರ್ತೃಗಳೆಂದು ಶ್ರೀರಾಯರ ಮಹಿಮೆ-ಯನ್ನು ಸ್ತುತಿಸುತ್ತಾರೆ.

**ಗೀತಾಮತ್ಯರ್ಥಧೂತಶ್ರಿತಜನದುರಿತಾಮಿಂದುವಂಶಪ್ರಸೂತೌ**
**ವ್ಯಾಚಕ್ಷಾಣೇ ಮುರದ್ವಿಷ್ಯಭಿಜನಮಭಜದ್ಭದ್ರಮಿಂದೋರನಿದ್ರಮ್ ।**

ಧೀರಶ್ರೀರಾಘವೇಂದ್ರ ! ತ್ವಯಿ ಪುನರನಘೇ ಹಂಸವಂಶೋದಿತೇ ತಾಂ
ವ್ಯಾಕುರ್ವತ್ಯದ್ಯ ಭವ್ಯಂ ಕಥಮಿವ ನ ಭಜೇದಾಶು ಮಿತ್ರಾನ್ವವಾಯಃ ॥ ೨೫ ॥

**ಅನ್ವಯಾರ್ಥ** : ಇಂದುವಂಶಪ್ರಸೂತೌ – ಇಂದು = ಚಂದ್ರನ, ವಂಶ = ವಂಶದಲ್ಲಿ, ಪ್ರಸೂತೌ = ಅವತರಿಸಿದ, ಮುರದ್ವಿಷಿ = ಮುರನಾಮಕ ದೈತ್ಯನ ಸಂಹಾರಕನಾದ ಶ್ರೀಕೃಷ್ಣನು, ಅತ್ಯರ್ಥಧೂತಶ್ರಿತಜನದುರಿತಾಂ – ಅತ್ಯರ್ಥ = ಸಂಪೂರ್ಣವಾಗಿ, ಧೂತ = ನಿವಾರಿಸಲ್ಪಟ್ಟ, ಹಾಗೂ ಶ್ರಿತಜನ = ಆಶ್ರಿತ ಜನರ, ದುರಿತಾಂ = ದುರಿತಗಳುಳ್ಳ, ಗೀತಾಂ = ಭಗವದ್ಗೀತೆಯನ್ನು, ವ್ಯಾಚಕ್ಷಾಣೇ (ಸತಿ) = ಅರ್ಜುನನಿಗೆ ಉಪದೇಶಿಸಲಾಗಿ, ಭದ್ರಂ = ಕ್ಷೇಮವೆಂಬುದು, ಇಂದೋಃ = ಚಂದ್ರನ, ಅಭಿಜನಂ = ವಂಶದ ಜನರೆಲ್ಲರನ್ನು, ಅಭಜತ್ = ಹೊಂದಿತು, ಧೀರ ಶ್ರೀರಾಘವೇಂದ್ರ = ಪ್ರತಿಭಾಂಬುಧಿಗಳಾದ ಶ್ರೀರಾಘವೇಂದ್ರಗುರುಸಾರ್ವಭೌಮರೇ ! ಅನಘೇ = ಪರಿಶುದ್ಧರಾದ, ತ್ವಯಿ = ನೀವು, ಅನಘೇ = ನಿರ್ದುಷ್ಟವಾದ, ಹಂಸವಂಶೋದಿತೇ ಸತಿ = ಪರಮಹಂಸರ ವಂಶದಲ್ಲಿ ಅವತರಿಸಿದ, ಅದ್ಯ = ಈಗ, ಪುನಃ = ಮತ್ತೆ, ತಾಂ = ಆ ಶ್ರೀಭಗವದ್ಗೀತೆಯನ್ನು, ವ್ಯಾಕುರ್ವತಿ ಸತಿ = ವ್ಯಾಖ್ಯಾನಿಸಲಾಗಿ, ಮಿತ್ರಾನ್ವವಾಯಃ – ಮಿತ್ರ = ಬಂಧುಗಳ, ಅನ್ವವಾಯಃ = ವಂಶವು (ಅಥವಾ ಸೂರ್ಯವಂಶವು), ಭವ್ಯಂ = ಕ್ಷೇಮವನ್ನು, ಕಥಮಿವ = ಅದೆಂತು, ನ ಭಜೇತ್ = ಹೊಂದದಿದ್ದೀತು ? ಕ್ಷೇಮವನ್ನು ಹೊಂದೇ ಹೊಂದುವದು ಎಂದು ಭಾವ.

**ತಾತ್ಪರ್ಯಾರ್ಥ** : ಚಂದ್ರವಂಶದಲ್ಲಿ ಜನಿಸಿದ ಮುರದ್ವೇಷಿಯಾದ ಶ್ರೀಕೃಷ್ಣನು, ಸದಾ ಗೀತಾಧ್ಯಯನ - ಅಧ್ಯಾಪನೆಗಳಲ್ಲೇ ಆಸಕ್ತರಾದ ಜನರ ದುರಿತಗಳನ್ನು ನಿವಾರಿಸುವಲ್ಲಿ ಸಮರ್ಥವಾದ 'ಶ್ರೀಮದ್ಭಗವದ್ಗೀತೆ'ಯನ್ನು ಅರ್ಜುನನಿಗೆ ವಿಶೇಷಾಕಾರವಾಗಿ ಉಪದೇಶಿಸಲಾಗಿ ಚಂದ್ರವಂಶವು ಶಾಶ್ವತವಾದ ಕ್ಷೇಮವನ್ನು ಹೊಂದಿತು. ಭೋ ಧೀರಶ್ರೀರಾಘವೇಂದ್ರ ಗುರುವರ್ಯರೇ ! ಪರಮಹಂಸರ ವಂಶದಲ್ಲಿ ಜನಿಸಿರುವ, ಭ್ರಮಮದಾದಿ ದೋಷದೂರರಾದ ಹಾಗೂ ಪಾಪರಹಿತರಾದ ನೀವು ಆ ಭಗವದ್ಗೀತೆಗೆ "ಗೀತಾರ್ಥ ಸಂಗ್ರಹ"ವೆಂಬ ವ್ಯಾಖ್ಯಾನವನ್ನು ರಚಿಸಲಾಗಿ ಸೂರ್ಯವಂಶವು ಹೇಗೆ ತಾನೆ ಶೀಘ್ರವಾಗಿ ಕ್ಷೇಮವನ್ನು ಹೊಂದದೇ ಇದ್ದೀತು ? (ಹೊಂದೇ ಹೊಂದುವದೆಂದು ಭಾವ).

**ವಿಶೇಷವಿಷಯ** : ಸತ್ಕಾರ್ಯವನ್ನು ಹಾಗೂ ಪರೋಪಕಾರವನ್ನು ಮಾಡುವುದರಿಂದ ಕರ್ತೃವಿಗಂತೂ ಪುಣ್ಯಪ್ರಾಪ್ತಿಯಾಗುವದು ನಿಶ್ಚಿತ. ಇದಲ್ಲದೇ ಆ ಕರ್ತೃವಿನ ವಂಶಕ್ಕೂ ಕ್ಷೇಮವಾಗುವದೆಂದು ಇಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ. ಆತ್ಮತೃಪ್ತನಾದ ಪರಿಪೂರ್ಣನಾದ ಶ್ರೀಕೃಷ್ಣ ಪರಮಾತ್ಮನಿಗೆ ಗೀತೋಪದೇಶದಿಂದ ಆಗಬೇಕಾದುದೇನೂ ಇಲ್ಲ. ಈ ಉಪದೇಶದಿಂದ ಅರ್ಜುನನಂತೂ ಉಪಕೃತನಾದನು. ಶ್ರೀಕೃಷ್ಣನ ಚಂದ್ರವಂಶವೂ

ಕ್ಷೇಮವನ್ನು ಹೊಂದಿತು. ಸಜ್ಜನರೆಲ್ಲರೂ ಗೀತಾಧ್ಯಯನದಿಂದ ಈಗಲೂ ಉಪಕೃತ-ರಾಗುತ್ತಿದ್ದಾರೆ.

ಸೂರ್ಯವಂಶೋತ್ಪನ್ನನಾದ ಶ್ರೀಮೂಲರಾಮಚಂದ್ರನ ಆರಾಧಕರೂ ಪರಮಹಂಸ-ಕುಲೋತ್ಪನ್ನರೂ ಆದ ಶ್ರೀರಾಘವೇಂದ್ರರು ಭಗವದ್ಗೀತೆಗೆ ಗೀತಾರ್ಥಸಂಗ್ರಹವೆಂಬ ವ್ಯಾಖ್ಯಾನವನ್ನು ಬರೆದು ಗೀತಾಚಾರ್ಯನ ಭಾವವನ್ನು ಪ್ರಕಟಪಡಿಸಿ ಜಗತ್ತಿಗೆ ಮಹೋಪಕಾರ ಮಾಡಿದರು. ಇದರಿಂದ ಶ್ರೀರಾಘವೇಂದ್ರರ ಯತಿವಂಶವು ಕ್ಷೇಮವನ್ನು ಹೊಂದಿತು.

ಶ್ರೀಗುರುಸಾರ್ವಭೌಮರ ಪ್ರೇರಣೆಯಂತೆ ಈ ಶ್ಲೋಕದಲ್ಲಿ ತೋರುತ್ತಿರುವ ಇನ್ನೊಂದು ಅಪೂರ್ವಾರ್ಥವನ್ನು ಬರೆಯುತ್ತಿದ್ದೇನೆ. ಅದೇನೆಂದರೆ – ಈ ಶ್ಲೋಕದ ಪೂರ್ವಾರ್ಧದಲ್ಲಿ ಚಂದ್ರವಂಶ, ಮುರದ್ವಿಟ್ ಶ್ರೀಕೃಷ್ಣ, ಭಗವದ್ಗೀತೋಪದೇಶ ಮತ್ತು ಚಂದ್ರವಂಶಕ್ಕಾದ ಕ್ಷೇಮ ಇವುಗಳ ಉಲ್ಲೇಖವಿದೆ. ಉತ್ತರಾರ್ಧದಲ್ಲಿ ಹಂಸವಂಶ, ಅನಘ, ಧೀರಶ್ರೀರಾಘವೇಂದ್ರ, ಗೀತಾವ್ಯಾಖ್ಯಾನ, ಮಿತ್ರಾನ್ವವಾಯಕ್ಕಾದ ಕ್ಷೇಮ ಇವುಗಳ ಉಲ್ಲೇಖವಿದೆ.

ಪೂವಾರ್ಧದಲ್ಲಿ ಚಂದ್ರವಂಶ ಹಾಗೂ ಶ್ರೀಕೃಷ್ಣರ ಪ್ರಸ್ತಾಪವಿದ್ದಾಗ ಉತ್ತರಾರ್ಧದಲ್ಲಿ ಸೂರ್ಯವಂಶ ಮತ್ತು ಶ್ರೀರಾಮಚಂದ್ರರ ಬಗ್ಗೆ ಹೇಳುವದು ಸಮಂಜಸವಾಗುತ್ತದೆ. ಈ ಶ್ಲೋಕದಲ್ಲಿ ಹಾಗೆಯೇ ಇರುವುದನ್ನು ತಿಳಿಯಬೇಕು.

"ಅತ್ಯರ್ಥಧೂತಾಶ್ರಿತಜನದುರಿತಾಂ ಗೀತಾಂ" ಎಂದು ಹೇಳುವುದರಿಂದ ಭಗವದ್ಗೀತೆಯ ಪಠನ, ಪಾಠನ, ಲೇಖನ, ಸಮೀಚೀನವಾದ ವ್ಯಾಖ್ಯಾನಾದಿಗಳನ್ನು ಯಾರು ಮಾಡುವರೋ ಅಂಥವರ ದುರಿತಗಳನ್ನು ಕಳೆದು ಅವರಿಗೆ ಕ್ಷೇಮವನ್ನುಂಟು ಮಾಡುವದು ಭಗವದ್ಗೀತೆಯ ಮಾಹಾತ್ಮ್ಯವಾಗಿದೆ. ಈ ಸಂದರ್ಭದಲ್ಲಿ ವರಾಹಪುರಾಣದ ಗೀತಾಮಾಹಾತ್ಮ್ಯದಲ್ಲಿಯ ಕೆಳಗಿನ ಕೆಲವು ಶ್ಲೋಕಗಳು ಗಮನಾರ್ಹವಾಗಿವೆ – **ಪ್ರಾರಬ್ಧಂ ಭುಜ್ಯಮಾನೋ ಹಿ ಗೀತಾಭ್ಯಾಸರತಃ ಸದಾ । ಸ ಮುಕ್ತಃ ಸ ಸುಖೀ ಲೋಕೇ ಕರ್ಮಣಾ ನೋಪಲಿಪ್ಯತೇ ॥೨॥ ಮಹಾಪಾಪಾದಿಪಾಪಾನಿ ಗೀತಾಧ್ಯಾನಂ ಕರೋತಿ ಚೇತ್ । ಕ್ವಚಿತ್‌ಸ್ಪರ್ಶಂ ನ ಕುರ್ವಂತಿ ನಲಿನೀದಲಮಂಬುವತ್ ॥೩॥ ಗೀತಾಯಾಃ ಪುಸ್ತಕಂ ಯತ್ರ ಯತ್ರ ಪಾಠಃ ಪ್ರವರ್ತತೇ । ತತ್ರ ಸರ್ವಾಣಿ ತೀರ್ಥಾನಿ ಪ್ರಯಾಗಾದೀನಿ ತತ್ರ ವೈ ॥೪॥ ...** ಪ್ರಾರಬ್ಧಕರ್ಮವನ್ನು ಭೋಗಿಸುತ್ತಿರುವ ಪುರುಷನು ಸದಾ ಗೀತಾಭ್ಯಾಸರತನಾದರೆ ಅವನು ಇಹಲೋಕದಲ್ಲಿ ಸುಖಿಯಾಗಿ ಕರ್ಮಬಂಧದಿಂದ ಮುಕ್ತನಾಗುತ್ತಾನೆ. ॥೨॥ ಗೀತಾಧ್ಯಾನ ಮಾಡುವವನನ್ನು ಮಹಾಪಾಪಾದಿಗಳು ಸ್ಪರ್ಶಿಸಲಾರವು ॥೩॥ ಮನೆಯಲ್ಲಿ ಗೀತಾಪುಸ್ತಕವಿದ್ದರೆ, ಗೀತಾಪಾಠವು ನಡೆಯುತ್ತಿದ್ದರೆ

ಅಲ್ಲಿ ಪ್ರಯಾಗಾದಿ ಸಕಲ ತೀರ್ಥಗಳು ಸನ್ನಿಹಿತವಾಗಿರುವವು. ||೪|| .... ಭಗವದ್ಗೀತೆಯ ಮಹಾತ್ಮೆಯೇ ಇಷ್ಟು ಶ್ರೇಷ್ಠವಾದುದು. ಇಂಥ ಭಗವದ್ಗೀತೆಯನ್ನು ಅರ್ಜುನನಿಗೆ ಉಪದೇಶಿಸುವ ನಿಮಿತ್ತದಿಂದ ಸರ್ವಲೋಕಕ್ಕೇ ಉಪದೇಶಿಸಿದ್ದರಿಂದ ಶ್ರೀಕೃಷ್ಣನ ಚಂದ್ರವಂಶದ ದುರಿತಗಳೆಲ್ಲ ಕಳೆದು ಕ್ಷೇಮವುಂಟಾಯಿತು. ಇದೇ ಕ್ರಮದಲ್ಲಿ ಸೂರ್ಯವಂಶಕ್ಕೆ ಕ್ಷೇಮವುಂಟಾಗಬೇಕಾದರೆ ಸೂರ್ಯವಂಶದ ಶ್ರೀರಾಮಚಂದ್ರನು ಕಲಿಯುಗದಲ್ಲಿ ಅವತರಿಸಿ ಇನ್ನೊಂದು ಭಗವದ್ಗೀತೆಯನ್ನಾದರೂ ಉಪದೇಶಿಸಬೇಕು ಅಥವಾ ಈಗಾಗಲೇ ಉಪಲಬ್ಧವಿರುವ ಶ್ರೀಕೃಷ್ಣನ ಭಗವದ್ಗೀತೆಯನ್ನು ಆಶ್ರಯಿಸಿ ಅದರ ಪಠನ ಪಾಠನಾದಿಗಳನ್ನು (ಪಾಠ ಪ್ರವಚನಾದಿಗಳನ್ನು) ಮಾಡಬೇಕು. ಪರಮಾತ್ಮನು ತ್ರಿಯುಗಹೂತಿಯಾಗಿರುವುದರಿಂದ ಕಲಿಯುಗದಲ್ಲಿ ಅವನಿಗೆ ಅವತಾರವಿಲ್ಲ. ಹೀಗಾಗಿ ಇನ್ನೊಂದು ಗೀತಾರಚನೆಗೂ ಅವಕಾಶವಿಲ್ಲ. ಇಂಥ ಸಂದರ್ಭದಲ್ಲಿ ಶ್ರೀರಾಮಚಂದ್ರನು ಪುನಃ ಧೀರ ಶ್ರೀರಾಘವೇಂದ್ರನೆಂಬ ಹೆಸರಿನಿಂದ ಹಂಸಕುಲದಲ್ಲಿದ್ದು ಈಗಾಗಲೇ ಪ್ರಸಿದ್ಧವಾಗಿರುವ ಭಗವದ್ಗೀತೆಗೇ ವ್ಯಾಖ್ಯಾನವನ್ನು ಬರೆಯಲು ನಿರ್ಧರಿಸಿದನು ಮತ್ತು ಗೀತಾರ್ಥಸಂಗ್ರಹವೆಂಬ ವ್ಯಾಖ್ಯಾನವನ್ನು ಬರೆದು ತನ್ಮೂಲಕ ತನ್ನ ಮಿತ್ರಾನ್ವಯವಾಯ ಅಂದರೆ ಸೂರ್ಯವಂಶಕ್ಕೆ ಕ್ಷೇಮವಾಗುವಂತೆ ಮಾಡಿದನು. ಪರಮಾತ್ಮನೇ ಮತ್ತೆ ಶ್ರೀರಾಘವೇಂದ್ರರಾಗಿದ್ದಾನೆಂಬುದು ಈ ಶ್ಲೋಕದಲ್ಲಿಯ ಪುನಃ, ಅನಘೋ (ದೋಷದೂರನಾದ) ಈ ಶಬ್ದಗಳಿಂದ ತಿಳಿಯುವದು. ಶ್ರೀರಾಮಚಂದ್ರನೇ ಶ್ರೀರಾಘವೇಂದ್ರರೂಪನಾಗಿರುವದನ್ನು ಶ್ರೀಗೋಪಾಲದಾಸರು ಹೀಗೆ ವರ್ಣಿಸುತ್ತಾರೆ –

> **ರಾಘವೇಂದ್ರನೆಂಬೋ ರೂಪ ತಾನೆ ಆಗಿ । ರಾಘವೇಂದ್ರನೆಂಬೋ**
> **ನಾಮಯಿಡಿಸಿಕೊಂಡು । ರಾಘವೇಂದ್ರರಿನ್ನು ಮಾಡಿದಂಥ ಪುಣ್ಯ । ಭೋಗವರಿತು**
> **ತನ್ನ ಭಾಗವತರ ಕೀರ್ತಿ । ಸಾಗಿಸಿ ಸಲಹಲಿ ತ್ರಿಜಗದೊಳಗಿನ್ನು । ಮೋಘುಸುರಿದಂಥಾ-**
> **ಮೋಘಕೀರುತಿಯನು । ರಾಘವ ಯಿವರಿಗೆ ರಾಜ್ಯದಿ ತಂದೀವ । ರಾಘವೇಂದ್ರಮೂರ್ತಿ**
> **ಗೋಪಾಲವಿಠಲ ಭಾಗವತರಲ್ಲಿ ಬಹು ಪೂಜೆಯನುಗೊಂಬ ||೪||**

**ಗುಣಪ್ರಕಾಶ :** ಶ್ರೀರಾಯರು ಭಗವದ್ಗೀತೆಯ ವ್ಯಾಖ್ಯಾನರೂಪವಾದ ಗೀತಾರ್ಥಸಂಗ್ರಹವೆಂಬ ಸ್ವತಂತ್ರ ಕೃತಿಯ ಕರ್ತೃಗಳೆಂದು ಇಲ್ಲಿ ಸ್ತುತಿಸಲಾಗಿದೆ. ಚಂದ್ರವಂಶಪ್ರಸೂತನಾದ ಶ್ರೀಕೃಷ್ಣನು ಭಗವದ್ಗೀತೆಯನ್ನು ಅರ್ಜುನನಿಗೆ ಉಪದೇಶಿಸುತ್ತಿರಲು ಚಂದ್ರವಂಶದವರೆಲ್ಲರೂ ಸ್ಥಿರವಾದ ಮಂಗಳವನ್ನು ಹೊಂದಿದರು. ಭಗವದ್ಗೀತೆಯ ಪಠನ ಪಾಠನಾದಿಗಳನ್ನು ಮಾಡುವವರ ದುರಿತಗಳೆಲ್ಲವೂ ದೂರಾಗುವವು. ಹಂಸನಾಮಕ ಪರಮಾತ್ಮನ ವಂಶದಲ್ಲಿ ಜನಿಸಿದ ಶ್ರೀರಾಯರು ಇಂಥ ಮಹಿಮೋಪೇತ-

ವಾದ ಭಗವದ್ಗೀತೆಗೆ **ಗೀತಾರ್ಥ ಸಂಗ್ರಹವೆಂಬ** ವ್ಯಾಖ್ಯಾನವನ್ನು ರಚಿಸಿದರು. ಶ್ರೀರಾಯರ ಈ ಗೀತಾ ವ್ಯಾಖ್ಯಾನವನ್ನು ಆಶ್ರಯಿಸಿ ಗೀತಾಧ್ಯಯನ-ಅಧ್ಯಾಪನೆಗಳನ್ನು ಮಾಡುವ ವಿದ್ವಾಂಸರು ಮತ್ತು ಹಂಸವಂಶದವರು ಅಂದರೆ ಯತಿವಂಶದವರು ಶೀಘ್ರದಲ್ಲಿ ಮಂಗಲವನ್ನು ಹೊಂದದೇ ಇದ್ದಾರೆಯೇ ? ನಿಶ್ಚಿತವಾಗಿ ಹೊಂದುವರೆಂದು ತಿಳಿಸಲಾಗಿದೆ. ಶ್ರೀರಾಯರ ವ್ಯಾಖ್ಯಾನಗಳು ಮಂಗಳವನ್ನುಂಟು ಮಾಡುವಂಥವು ಎಂದೂ ಇಲ್ಲಿ ಸೂಚಿತವಾಗಿದೆ.

**ಧೀರಶ್ರೀರಾಘವೇಂದ್ರ, ಅನಘ** ಮತ್ತು **ಹಂಸವಂಶೋದಿತ** ಇವು ಮೂರು ಈ ಶ್ಲೋಕದಲ್ಲಿ ಕಂಡುಬರುವ ಶ್ರೀರಾಯರ ವಿಶೇಷಣಗಳು. **'ಧೀರಶ್ರೀರಾಘವೇಂದ್ರ'** ಪದದಿಂದ ಶ್ರೀರಾಯರಲ್ಲಿಯ ಜ್ಞಾನ, ಸ್ಥೈರ್ಯ, ಕಾಂತಿ, ತೇಜಸ್ಸು ಮುಂತಾದ ಗುಣಗಳ ಸ್ತವನವಿದೆ. **'ಅನಘ'** ಪದವು ಶ್ರೀರಾಯರ ವಾಯ್ವಾವೇಶತ್ವ ಸೂಚಕವಾಗಿದೆ. ಇದು ಶ್ರೀರಾಯರಲ್ಲಿಯ ಶೌಚಗುಣವನ್ನೂ ತಿಳಿಸುತ್ತದೆ.

**ಹಂಸವಂಶೋದಿತ** = ೧) **'ಹಂಸೋ ಯೋಗಿಮಾತ್ರೇऽಪಿ ಪರಮಾತ್ಮನಿ ಮತ್ಸರೇ'**– ವಿಶ್ವ ೨) **ನಿತ್ಯಂ 'ಹೀನೋऽಖಿಲೈರ್ದೋಷೈಃ ಸಾರರೂಪೋ ಯತೋ ಹರಿಃ । ಹಂಸ ಇತ್ಯುಚ್ಯತೇ .... ಕಾಠಕಭಾಷ್ಯ.** ೩) **ಹಂ ಚಾಸೌ ಸಶ್ಚ ಹಂಸಃ** = ದೋಷದೂರನೂ. ಸರ್ವಶ್ರೇಷ್ಠನೂ ಆಗಿರುವುದರಿಂದ ಹರಿಯು ಹಂಸನಾಮಕನಾಗಿದ್ದಾನೆ. ೪) **ಭಕ್ತದೋಷ-ಹಂತೃತ್ವೇನ ಹಂಸಃ** = ಭಕ್ತರ ದೋಷನಾಶಕನಾದುದರಿಂದ ಹರಿಯು ಹಂಸನಾಮಕನು. ಇಂಥ ಹಂಸನಾಮಕ ಪರಮಾತ್ಮನ ವಂಶದಲ್ಲಿ ಹುಟ್ಟಿದವರು ಶ್ರೀರಾಯರು. ಈ ವಿಶೇಷಣವು ಶ್ರೀರಾಯರ ಕುಲೀನತೆ ಎಂಬ ಗುಣಸೂಚಕವಾಗಿದೆ. ಹಂಸನಾಮಕ ಪರಮಾತ್ಮನಿಂದ ಪ್ರಾರಂಭವಾಗುವ ವಂಶದಲ್ಲಿ ಚತುರ್ಮುಖ ಬ್ರಹ್ಮ, ಸನಕ, ಸನಂದನ, ಸನತ್ಕುಮಾರ, ಸನಾತನ, ದೂರ್ವಾಸ, ಜ್ಞಾನನಿಧಿ, ಗರುಡವಾಹನ, ಕೈವಲ್ಯ, ಜ್ಞಾನೇಶ, ಪರತೀರ್ಥ, ಸತ್ಯಪ್ರಜ್ಞ, ಪ್ರಾಜ್ಞ, ಅಚ್ಯುತಪ್ರೇಕ್ಷ, ಮಧ್ವಾಚಾರ್ಯ, ಪದ್ಮನಾಭತೀರ್ಥ... ಇವರೇ ಮೊದಲಾದವರು ಆಗಿ ಹೋಗಿದ್ದಾರೆ. ಇಂಥ ಶ್ರೇಷ್ಠವಂಶದಲ್ಲಿ ಶ್ರೀರಾಯರು ಬಂದಿರುವರು.

ಶ್ರೀಸಂನ್ಯಾಸಗೀತೆಯಲ್ಲಿ 'ಹಂಸ'ರ ಧರ್ಮಗಳನ್ನು ತಿಳಿಸಲಾಗಿದೆ. (ಅಧ್ಯಾಯ-೯) ಈ ಧರ್ಮಗಳನ್ನು ಪಾಲಿಸುವ ಹಂಸವಂಶೋದ್ಭವರು ಶ್ರೀರಾಯರು ಎಂದೂ ಗುರುಸ್ತವನವಿದೆ.

**೨೬. ಅವತಾರಿಕಾ :** ಶ್ರೀರಾಯರು ಗುರ್ವನುಗ್ರಹಕ್ಕಾಗಿ ಗೀತಾಭಾಷ್ಯಟೀಕಾ-ಪ್ರಮೇಯದೀಪಿಕಾ ಭಾವದೀಪ ಗ್ರಂಥವನ್ನು ರಚಿಸಿದ್ದಾಗಿ ಪ್ರಕಟಬಡಿಸುತ್ತಾರೆ.

**ನ ಸ್ಯಾದೀಶಪ್ರಸಾದೋ ಗುರುವರ(ಪದ)ಕರುಣಾಮಂತರೇಣೇತಿ ರೂಢೋ**
**ಧೀರಶ್ರೀರಾಘವೇಂದ್ರವ್ರತಿವರ ಸುದೃಢಶ್ಚೇತಸಸ್ತೇ ವಿಪಾಕಃ ।**
**ಯೇನ ವ್ಯಾಖ್ಯಾಯ ಗೀತಾಮಪಿ ಗುರುಚರಣೋದಾರತದ್ಭಾಷ್ಯಟೀಕಾ-**
**ವ್ಯಾಖ್ಯಾ ವಿಖ್ಯಾತವಿದ್ವನ್ಮಣಿಗಣವಿನುತಾಽಕಾರಿ ಭೂಯಸ್ತ್ವಯೈವ ॥ ೨೬ ॥**

**ಅನ್ವಯಾರ್ಥ :** ಧೀರ ಶ್ರೀರಾಘವೇಂದ್ರ ವ್ರತಿವರ = ಧೀರ ಶ್ರೀರಾಘವೇಂದ್ರ-ಯತಿವರ್ಯರೇ ! **ಗುರುವರಕರುಣಾಂ ಅಂತರೇಣ** = ಗುರುಗಳ ಅನುಗ್ರಹವಿಲ್ಲದೇ, **ಈಶಪ್ರಸಾದಃ** = ಪರಮಾತ್ಮನ ಪ್ರಸಾದವು, **ನ ಸ್ಯಾತ್** = ಲಭಿಸಲಾರದು, **ಇತಿ** = ಎಂಬ, **ತೇ** = ನಿಮ್ಮ, **ಚೇತಸಃ** = ಮನಸ್ಸಿನ, **ವಿಪಾಕಃ** = ಭಾವನೆಯು, **ಸುದೃಢಃ ರೂಢಃ** = ಅತಿ ನಿಶ್ಚಿತವಾದುದಾಗಿದೆ. **ಯೇನ** = ಏಕೆಂದರೆ (ಈ ಯಾವ ಕಾರಣದಿಂದಲೇ), **ಗೀತಾಂ** = ಭಗವದ್ಗೀತೆಯನ್ನು ಕುರಿತು, **ವ್ಯಾಖ್ಯಾಯ ಅಪಿ** = 'ಗೀತಾರ್ಥಸಂಗ್ರಹ' ಎಂಬ ವ್ಯಾಖ್ಯಾನವನ್ನು ನೀವು ಬರೆದಿದ್ದರೂ ಕೂಡ, **ಭೂಯಃ** = ಮತ್ತೆ, **ತ್ವಯಾ ಏವ** = ನಿಮ್ಮಿಂದಲೇ, **ಗುರುಚರಣೋದಾರತದ್ಭಾಷ್ಯಟೀಕಾವ್ಯಾಖ್ಯಾ – ಗುರುಚರಣ** = ಶ್ರೀಜಯತೀರ್ಥರ **ಉದಾರ** = ಉತ್ಕೃಷ್ಟವಾದ, **ತದ್ಭಾಷ್ಯಟೀಕಾ** = ಶ್ರೀಮದಾಚಾರ್ಯಕೃತ ಗೀತಾಭಾಷ್ಯಟೀಕಾ ಪ್ರಮೇಯದೀಪಿಕಾ ಎಂಬ ಗ್ರಂಥಕ್ಕೆ **ವಿಖ್ಯಾತವಿದ್ವನ್ಮಣಿಗಣವಿನುತಾ – ವಿಖ್ಯಾತ** = ಪ್ರಸಿದ್ಧರಾದ, **ವಿದ್ವನ್ಮಣಿಗಣ** = ಪಂಡಿತಾಗ್ರಣಿಗಳ ಸಮೂಹದಿಂದ, **ವಿನುತಾ** = ಸ್ತುತ್ಯವಾದ, **ವ್ಯಾಖ್ಯಾ** = ಭಾವದೀಪ ಎಂಬ ಹೆಸರಿನ ವ್ಯಾಖ್ಯಾನವು **ಅಕಾರಿ** = ರಚಿಸಲ್ಪಟ್ಟಿರುತ್ತದೆ.

**ತಾತ್ಪರ್ಯಾರ್ಥ :** ಭೋ ಧೀರಶ್ರೀರಾಘವೇಂದ್ರವ್ರತಿವರರೇ ! ಗುರುವರ್ಯರ ಕರುಣೆ ಇಲ್ಲದೇ ಈಶಪ್ರಸಾದವು (ಪರಮಾತ್ಮನ ಅನುಗ್ರಹವು) ಉಂಟಾಗಲಾರ-ದೆಂಬುದನ್ನು ನೀವು ದೃಢವಾಗಿ ನಂಬಿದವರಾಗಿದ್ದೀರಿ. ಆದ್ದರಿಂದ ನೀವು ಈ ಮೊದಲು ಗೀತಾರ್ಥಸಂಗ್ರಹವೆಂಬ ಸ್ವತಂತ್ರ ವ್ಯಾಖ್ಯಾನವನ್ನು ರಚಿಸಿದ್ದರೂ ಗುರ್ವನುಗ್ರಹ ಸಂಪಾದನೆಗೋಸ್ಕರ, ಶ್ರೀಜಯತೀರ್ಥಗುರುವರ್ಯರಿಂದ ವಿರಚಿತವಾದ **ಗೀತಾಭಾಷ್ಯ-ಟೀಕಾ ಪ್ರಮೇಯದೀಪಿಕಾ** ಎಂಬ ಗ್ರಂಥಕ್ಕೆ ಪ್ರಸಿದ್ಧರಾದ ವಿದ್ವನ್ಮಣಿಗಣಗಳಿಂದ ವಿಶೇಷಾಕಾರವಾಗಿ ಸ್ತುತ್ಯವಾದ ಭಾವದೀಪ ಎಂಬ ವ್ಯಾಖ್ಯಾನವನ್ನು ರಚಿಸಿರುವಿರಿ.

**ಗುಣಪ್ರಕಾಶ :** ಗೀತಾಭಾಷ್ಯ, ಗೀತಾತಾತ್ಪರ್ಯನಿರ್ಣಯ; ಪ್ರಮೇಯದೀಪಿಕಾ, ನ್ಯಾಯದೀಪಿಕಾ ಇವೇ ಮೊದಲಾದ ಗೀತಾಪ್ರಸ್ಥಾನದ ಮೂಲ ಹಾಗೂ ಟೀಕಾಗ್ರಂಥ-ಗಳಲ್ಲಿಯ ವಿಷಯಗಳನ್ನು ಸಂಗ್ರಹಿಸಿ ಭಗವದ್ಗೀತೆಯ ಮೇಲೆ ಗೀತಾರ್ಥಸಂಗ್ರಹವೆಂಬ ಸ್ವತಂತ್ರ ವ್ಯಾಖ್ಯಾನವನ್ನು ಬರೆದರೂ ಶ್ರೀರಾಯರಿಗೆ ಸಮಾಧಾನವಾಗಲಿಲ್ಲ. ಗುರುಗಳು ಪ್ರಸನ್ನರಾಗದೇ ಈಶಪ್ರಸಾದವಾಗಲಾರದೆಂದು ದೃಢವಾಗಿ ನಂಬಿದ ಶ್ರೀರಾಯರು

ಗುರುಪ್ರಸಾದವಾಗಬೇಕಾದರೆ ಅವರಿಂದ ರಚಿತವಾದ ಗ್ರಂಥಗಳಿಗೇ ವ್ಯಾಖ್ಯಾನವನ್ನು ಬರೆಯಬೇಕೆಂದು ನಿರ್ಧರಿಸಿ ಶ್ರೀಮದಾಚಾರ್ಯರ ಗೀತಾಭಾಷ್ಯಕ್ಕೆ ಶ್ರೀಜಯತೀರ್ಥರು ಬರೆದ ಪ್ರಮೇಯದೀಪಿಕಾ ಎಂಬ ಟೀಕಾಗ್ರಂಥಕ್ಕೆ ಭಾವದೀಪವೆಂಬ ಟಿಪ್ಪಣಿಯನ್ನು ಬರೆದರು. 'ಪ್ರಮೇಯದೀಪಿಕಾ ಭಾವದೀಪ'ವೆಂದು ಪ್ರಸಿದ್ಧವಾದ ಈ ಟಿಪ್ಪಣಿಯು ವಿದ್ವನ್ಮಣಿಗಳಿಂದ ವಿಶೇಷವಾಗಿ ಸ್ತುತಿಸಲ್ಪಟ್ಟಿತು. ಇಲ್ಲಿ ಶ್ರೀರಾಯರ ಗುರುಭಕ್ತಿಯ ಸ್ತವನವಿದೆ.

" '**ಗುರುಚರಣೋದಾರತದ್ಭಾಷ್ಯಟೀಕಾ – ವ್ಯಾಖ್ಯಾ**' — ಶ್ರೀಮಜ್ಜಯತೀರ್ಥರ ಶ್ರೇಷ್ಠವಾದ ಗೀತಾಭಾಷ್ಯಟೀಕಾ ಪ್ರಮೇಯದೀಪಿಕಾ" ಎನ್ನುವಲ್ಲಿ ಪ್ರಮೇಯದೀಪಿಕಾ ಎಂಬ ಶ್ರೇಷ್ಠಗ್ರಂಥವನ್ನು ರಚಿಸಿದವರು ಶ್ರೀಜಯತೀರ್ಥರು ಎಂದು ಶ್ರೀಜಯತೀರ್ಥ ಗುರುಗಳ ಸ್ತವನವೂ ಈ ಶ್ಲೋಕದಲ್ಲಿದೆ.

**೨೭. ಅವತಾರಿಕಾ :** ವಿಬುಧರಲ್ಲಿ ಅನುಗ್ರಹ ಮಾಡಲಿಕ್ಕಾಗಿ ಗೀತಾತಾತ್ಪರ್ಯ-ನಿರ್ಣಯಟೀಕಾ ಭಾವದೀಪವನ್ನು ರಚಿಸಿದ್ದಾಗಿ ತಿಳಿಸುತ್ತಾರೆ.

**ನಾನಾತಂತ್ರಪ್ರಸಂಗತ್ರಿಭುವನವಿದಿತೋದಾರಸಾರಸ್ವತೋಽಪಿ**
**ಪ್ರತ್ನಾನೇಕಪ್ರಬಂಧಪ್ರವಚನರಚನಾವಿತ್ತತತ್ಕೌಶಲೋಽಪಿ ।**
**ಶಶ್ವದ್ವ್ಯಾಖ್ಯಾತಗೀತಾಕೃತಿರಪಿ ವಿಬುಧಾನುಗ್ರಹೈಕಾಗ್ರಚಿತ್ತೋ**
**ಗೀತಾತಾತ್ಪರ್ಯಟೀಕಾವಿವರಣಮಕರೋದದ್ಭುತಂ ರಾಘುವೇಂದ್ರಃ ॥ ೨೭ ॥**

**ಅನ್ವಯಾರ್ಥ : ನಾನಾತಂತ್ರಪ್ರಸಂಗ(ಪ್ರಸಿದ್ಧ)ತ್ರಿಭುವನವಿದಿತೋದಾರಸಾರಸ್ವತಃ ಅಪಿ** – **ನಾನಾತಂತ್ರ** = ನಾನಾವಿಧವಾದ ಶಾಸ್ತ್ರ ಸಿದ್ಧಾಂತಗಳ, **ಪ್ರಸಂಗ** = ಉಪನ್ಯಾಸಗಳಿಂದ, **ತ್ರಿಭುವನ** = ಮೂರ್ಲೋಕಗಳಲ್ಲಿಯೂ, **ವಿದಿತ** = ಪ್ರಖ್ಯಾತವಾದ, **ಉದಾರ** = ಉತ್ಕೃಷ್ಟವಾದ, **ಸಾರಸ್ವತಃ ಅಪಿ** = ಪಾಂಡಿತ್ಯವುಳ್ಳವರಾಗಿದ್ದರೂ, **ಪ್ರತ್ನಾನೇಕಪ್ರಬಂಧಪ್ರವಚನರಚನಾವಿತ್ತತತ್ಕೌಶಲಃ ಅಪಿ** – **ಪ್ರತ್ನ** = ಪ್ರಾಚೀನ ಗುರುಗಳ, **ಅನೇಕಪ್ರಬಂಧ** = ಅನೇಕ ಗ್ರಂಥಗಳನ್ನು ಕುರಿತು ಮಾಡಿದ, **ಪ್ರವಚನ** = ಪಾಠ ಪ್ರವಚನ ಉಪನ್ಯಾಸಾದಿಗಳಿಂದಲೂ, **ರಚನಾ** = ಟೀಕಾ ಟಿಪ್ಪಣ್ಯಾದಿ ಗ್ರಂಥರಚನೆಗಳಿಂದಲೂ, **ವಿತ್ತ** = ಸರ್ವತ್ರ ವಿದಿತವಾದ, **ತತ್ಕೌಶಲಃ** = ಗ್ರಂಥಪ್ರವಚನ-ರಚನಾ ಕೌಶಲವುಳ್ಳವರಾಗಿದ್ದರೂ, **ಶಶ್ವದ್‌ವ್ಯಾಖ್ಯಾತಗೀತಾಕೃತಿಃ ಅಪಿ** – **ಶಶ್ವದ್** = ಅನೇಕ ಸಲ **ವ್ಯಾಖ್ಯಾತ** = ವ್ಯಾಖ್ಯಾನಿಸಲ್ಪಟ್ಟ, **ಗೀತಾಕೃತಿಃ ಅಪಿ** = ಭಗವದ್ಗೀತೆಯೆಂಬ ಕೃತಿಯುಳ್ಳವರಾಗಿದ್ದರೂ, **ರಾಘುವೇಂದ್ರಃ** = ಶ್ರೀರಾಘುವೇಂದ್ರಗುರುಸಾರ್ವಭೌಮರು, **ವಿಬುಧಾನುಗ್ರಹೈಕಾಗ್ರಚಿತ್ತಃ** – **ವಿಬುಧ** = ಸಜ್ಜನರ ಮೇಲೂ, ವಿದ್ವಾಂಸರ ಮೇಲೂ

**ಅನುಗ್ರಹ** = ಅನುಗ್ರಹ ಮಾಡಬೇಕೆಂಬ **ಏಕಾಗ್ರಚಿತ್ತಃ** = ಒಂದೇ ಒಂದು ಮನಸ್ಸು-ಳ್ಳವರಾಗಿ, **ಅದ್ಭುತಂ** = ಅತ್ಯದ್ಭುತವಾದ, **ಗೀತಾತಾತ್ಪರ್ಯಟೀಕಾವಿವರಣಂ** = ಶ್ರೀಮದಾಚಾರ್ಯರ ಗೀತಾತಾತ್ಪರ್ಯಕ್ಕೆ ಶ್ರೀಜಯತೀರ್ಥರು ಬರೆದಿರುವ 'ನ್ಯಾಯದೀಪಿಕಾ' ಎಂಬ ಟೀಕಾಗ್ರಂಥಕ್ಕೆ ಭಾವದೀಪ ಎಂಬ ವ್ಯಾಖ್ಯಾನವನ್ನು, **ಅಕರೋತ್** = ರಚಿಸಿದರು.

**ತಾತ್ಪರ್ಯಾರ್ಥ** : ಶ್ರೀರಾಘವೇಂದ್ರ ಯತಿಶಿರೋಮಣಿಗಳು ನಾನಾ ವಿಧವಾದ ಶಾಸ್ತ್ರ ಸಿದ್ಧಾಂತಗಳಲ್ಲಿ ಶ್ರೇಷ್ಠವಾದ ಪಾಂಡಿತ್ಯವುಳ್ಳವರೆಂದು ಈಗಾಗಲೇ ಮೂರ್ಲೋಕ-ಗಳಲ್ಲಿಯೂ ಪ್ರಸಿದ್ಧರಾಗಿದ್ದರು. ಪ್ರಾಚೀನಾಚಾರ್ಯರ ಅಥವಾ ಪ್ರಾಚೀನ ಗುರುಗಳ ಅನೇಕ ಗ್ರಂಥಗಳಿಗೆ ಅತ್ಯುತ್ಕೃಷ್ಟವಾದ ವ್ಯಾಖ್ಯಾನಗಳನ್ನು ರಚಿಸುವ ಮೂಲಕ ಶ್ರೇಷ್ಠ ವ್ಯಾಖ್ಯಾನಕರ್ತೃಗಳು ಎಂದೂ ಜ್ಞಾನಿಗಳಲ್ಲಿ ವಿಖ್ಯಾತರಾಗಿದ್ದರು ಮತ್ತು ಇವರ ವ್ಯಾಖ್ಯಾನಕೌಶಲವು ಎಲ್ಲರಿಂದ ಸ್ತುತ್ಯವಾಗಿದ್ದಿತು. ಗೀತೆಯ ಮೇಲೆ ಗೀತಾರ್ಥಸಂಗ್ರಹ ಮತ್ತು ಗೀತಾಭಾಷ್ಯ ಪ್ರಮೇಯದೀಪಿಕಾ ಭಾವದೀಪ ಎಂಬ ಎರಡು ಗ್ರಂಥಗಳನ್ನು ಈ ಮೊದಲೇ ರಚಿಸಿದವರಾಗಿದ್ದರೂ, ವಿದ್ವಾಂಸರಲ್ಲಿ ಅನುಗ್ರಹ ಮಾಡಬೇಕೆಂಬ ಒಂದೇ ಮುಖ್ಯ ಉದ್ದೇಶದಿಂದ ಶ್ರೀಮದಾಚಾರ್ಯರ ಗೀತಾತಾತ್ಪರ್ಯ ನಿರ್ಣಯದ ಮೇಲಿರುವ ಶ್ರೀಜಯತೀರ್ಥರ ನ್ಯಾಯದೀಪವೆಂಬ ಟೀಕಾಗ್ರಂಥಕ್ಕೆ ಅದ್ಭುತವಾದ ಭಾವದೀಪವೆಂಬ ವ್ಯಾಖ್ಯಾನವನ್ನೂ ರಚಿಸಿದರು.

**ವಿವರಣೆ** : ಶ್ರೀರಾಯರು ಗೀತಾರ್ಥಸಂಗ್ರಹ ಮತ್ತು ಪ್ರಮೇಯದೀಪಿಕಾ ಭಾವದೀಪ ಎಂಬ ಗೀತಾಪ್ರಸ್ಥಾನದ ಮೇಲಿನ ಎರಡು ಗ್ರಂಥಗಳನ್ನು ರಚಿಸಿ ಗುರ್ವನುಗ್ರಹವನ್ನೂ ಮತ್ತು ಈಶಾನುಗ್ರಹವನ್ನೂ ಸಂಪಾದಿಸಿ ಬಿಟ್ಟಿದ್ದಾರೆ. ಹಾಗಿದ್ದರೂ ಗೀತಾತಾತ್ಪರ್ಯನಿರ್ಣಯಟೀಕಾನ್ಯಾಯದೀಪಿಕಾ ಗ್ರಂಥಕ್ಕೆ ಭಾವದೀಪವೆಂಬ ಇನ್ನೊಂದು ಗ್ರಂಥವನ್ನೇಕೆ ರಚಿಸಿದರು ? ವಿದ್ವಾಂಸರಿಗೆ ಹಾಗೂ ಅಧ್ಯೇತೃಗಳಿಗೆ ಗೀತಾತಾತ್ಪರ್ಯ ಮತ್ತು ಅದರ ಟೀಕಾ ನ್ಯಾಯದೀಪಿಕಾ ಗ್ರಂಥಗಳ ಅರ್ಥವು ಸರಿಯಾಗಿ ತಿಳಿಯಲಿ ಎಂದು ಅವರಲ್ಲಿ ಅನುಗ್ರಹ ಬುದ್ಧಿಯೊಂದರಿಂದಲೇ ಈ ಗ್ರಂಥವನ್ನು ರಚಿಸಿದರೇ ಹೊರತು ತಮ್ಮ ಶಾಸ್ತ್ರಪಾಂಡಿತ್ಯ ಹಾಗೂ ಗ್ರಂಥರಚನಾಕೌಶಲವನ್ನು ಮತ್ತು ವ್ಯಾಖ್ಯಾನ-ಕೌಶಲವನ್ನು ಪ್ರಕಟಬಡಿಸಲಿಕ್ಕಲ್ಲ. ವಿವಿಧ ಶಾಸ್ತ್ರಗ್ರಂಥಗಳ ಪಾಠ ಪ್ರವಚನದಿಂದ ಶ್ರೀರಾಯರ ಪಾಂಡಿತ್ಯವು ಹಾಗೂ ಅನೇಕ ಗ್ರಂಥಗಳ ರಚನೆಯಿಂದ ಗ್ರಂಥಪ್ರಣಯನ ಕೌಶಲವು ಈಗಾಗಲೇ ಮೂರ್ಲೋಕಗಳಲ್ಲಿ ಪ್ರಸಿದ್ಧವಾಗಿದ್ದವು. ಹೀಗಿರುವಾಗ ಶ್ರೀರಾಯರಿಗೆ ಇದೊಂದು ಗ್ರಂಥರಚನೆಯಿಂದ ತಮ್ಮ ಪಾಂಡಿತ್ಯ ಹಾಗೂ ಗ್ರಂಥರಚನಾ ಸಾಮರ್ಥ್ಯವನ್ನು ಪ್ರಕಟಿಸುವ ಅವಶ್ಯಕತೆಯಿರಲಿಲ್ಲ. ಮಹಾಭಾಗವತೋತ್ತಮರಾದ ಶ್ರೀರಾಯರು ತಮ್ಮ ಹಿರಿಮೆಯನ್ನು ಪ್ರದರ್ಶಿಸುವುದಕ್ಕಾಗಿ ಎಂದಿಗೂ ಯಾವುದೇ ರೀತಿಯ ಕಾರ್ಯವನ್ನು ಮಾಡುವವರಲ್ಲ.

"ಗ್ರಂಥಕಾರನಿಗೆ ತನ್ನ ಪಾಂಡಿತ್ಯಪ್ರದರ್ಶನ ಅಥವಾ ಗ್ರಂಥರಚನಾಕೌಶಲ ಪ್ರದರ್ಶನಗಳು ಉದ್ದೇಶವಾಗಿರಬಾರದು. ವಿದ್ವನ್ಮಂಡಲಿಗಾಗಲೀ, ಅಜ್ಞರಿಗಾಗಲೀ ತನ್ನ ಕೃತಿಯಿಂದ ಉಪಕಾರವಾಗಬೇಕೆಂಬ ಏಕಮಾತ್ರ ಉದ್ದೇಶವಿರಬೇಕು" ಎಂಬ ನಿರ್ದೇಶವು ಇಲ್ಲಿದೆ.

ಗೀತಾತಾತ್ಪರ್ಯನಿರ್ಣಯಟೀಕಾ ಭಾವದೀಪವು ಅದ್ಭುತವಾದುದೆಂದು ಆ ಗ್ರಂಥದ ಸ್ತುತಿ ಇದೆ.

**ಗುಣಪ್ರಕಾಶ :**

೧) **ನಾನಾತಂತ್ರಪ್ರಸಂಗತ್ರಿಭುವನವಿದಿತೋದಾರಸಾರಸ್ವತಃ** = ಶ್ರೀರಾಯರು ನಾನಾ ಪ್ರಕಾರದ ಶಾಸ್ತ್ರಸಿದ್ಧಾಂತಗಳ ಪ್ರವಚನಾದಿಗಳಿಂದ ಮೂರ್ಲೋಕಗಳಲ್ಲಿ ಪ್ರಸಿದ್ಧಿಯಾದ ಉತ್ಕೃಷ್ಟವಾದ ಪಾಂಡಿತ್ಯವುಳ್ಳವರಾಗಿದ್ದರು. ಇಲ್ಲಿ ಶ್ರೀರಾಯರ ಜ್ಞಾನ, ಪ್ರತಿಭಾದಿ ಗುಣಗಳ ಸ್ತವನವಿದೆ.

೨) **ಪ್ರತ್ನಾನೇಕಪ್ರಬಂಧಪ್ರವಚನರಚನಾವಿತ್ತತತ್ಕೌಶಲಃ** = ಶ್ರೀರಾಯರು ತಮ್ಮ ಪ್ರಾಚೀನರ ಅನೇಕ ಗ್ರಂಥಗಳಿಗೆ ಮಾಡಿದ ವ್ಯಾಖ್ಯಾನಗಳಿಂದ ವಿದ್ವಜ್ಜನರಿಂದ ತಿಳಿಯಲ್ಪಟ್ಟ ಗ್ರಂಥರಚನಾಕೌಶಲವುಳ್ಳವರಾಗಿದ್ದರು. ಇಲ್ಲಿ ಶ್ರೀರಾಯರ ಗ್ರಂಥಪ್ರಣಯನ ಸಾಮರ್ಥ್ಯದ ಸ್ತವನವಿದೆ.

೩) **ವಿಬುಧಾನುಗ್ರಹೈಕಾಗ್ರಚಿತ್ತಃ** = ಶ್ರೀರಾಯರು ಸದಾ ವಿದ್ವಾಂಸರಲ್ಲಿ ಅನುಗ್ರಹ ಮಾಡಬೇಕೆಂಬ ವಿಷಯದಲ್ಲಿ ಆಸಕ್ತವಾದ ಚಿತ್ತವುಳ್ಳವರು. ಅಂದರೆ ವಿದ್ಯಾಸಂಬಂಧಿಗಳಿಗೆ ಸದಾ ಅನುಗ್ರಹ ಮಾಡಬೇಕೆಂಬ ಏಕೈಕ ಉದ್ದೇಶವುಳ್ಳವರು. ಇಲ್ಲಿ ಶ್ರೀರಾಯರ ಕೃಪಾಗುಣದ ಸ್ತವನವಿದೆ.

**೨೮. ಅವತಾರಿಕಾ :** ವಿದ್ಯಾಶಿಷ್ಯರಾದ ಲಕ್ಷ್ಮೀನಾರಾಯಣರನ್ನು ಅನುಗ್ರಹಿಸುವುದಕ್ಕಾಗಿ ಋಗರ್ಥಮಂಜರೀ ಗ್ರಂಥವನ್ನು ರಚಿಸಿದ್ದಾಗಿ ತಿಳಿಸುತ್ತಾರೆ.

**ಲಕ್ಷ್ಮೀನಾರಾಯಣಾರ್ಯಸ್ತವ ತನಯಮಣಿಃ ಸತ್ಸು ಸರ್ವೇಷು ಧನ್ಯೋ**
**ಯಸ್ಮಾದೃಗ್ಭಾಷ್ಯಟೀಕಾತನುತರವಿವೃತೇರಂಜಸಾ ತತ್ಕೃತಾಯಾಃ ।**
**ಪ್ರೇಮ್ಣಾ ವಿದ್ವತ್ಸು ಭೂಯಃ ಪ್ರಚಯಮಭಿಲಷನ್ ರಾಘವೇಂದ್ರವ್ರತೀಂದ್ರ**
**ಪ್ರಾವೋಚಸ್ತ್ವಂ ಪ್ರತೀತವ್ರತ ನಿಚಯಮೃಚಾಮೇವ ಭಾಷ್ಯಾನುರೋಧಾತ್ ॥೨೮॥**

**ಅನ್ವಯಾರ್ಥ :** ಪ್ರತೀತವ್ರತ – ಪ್ರತೀತ = ಶ್ರೇಷ್ಠವಾದ ವ್ರತ = ಯತಿವ್ರತವನ್ನು ಪರಿಪಾಲಿಸುತ್ತಿರುವ, ಮತ್ತು "ಪ್ರತೀತ = ಪ್ರಸಿದ್ಧವಾದ, ವ್ರತ =

ಸಕಲಮಧ್ವಶಾಸ್ತ್ರಗ್ರಂಥಗಳನ್ನು ವ್ಯಾಖ್ಯಾನಿಸುತ್ತೇನೆ" ಎಂದು ಸಂಕಲ್ಪ ಮಾಡಿರುವ, **ರಾಘವೇಂದ್ರ ವ್ರತೀಂದ್ರ** = ಶ್ರೀರಾಘವೇಂದ್ರ ಯತಿವರ್ಯರೇ ! **ಯಸ್ಮಾತ್** = ಯಾವ ಕಾರಣದಿಂದ, **ತತ್ಕೃತಾಯಾಃ** = ಆ ಲಕ್ಷ್ಮೀನಾರಾಯಣಾಚಾರ್ಯರಿಂದ ಬರೆಯಲ್ಪಟ್ಟ, **ಋಗ್ಭಾಷ್ಯಟೀಕಾತನುತರ ವಿವೃತೇಃ** – **ಋಗ್ಭಾಷ್ಯಟೀಕಾ** = ಋಗ್ಭಾಷ್ಯಟೀಕೆಯ, **ತನುತರ** = ಅತ್ಯಂತ ಚಿಕ್ಕದಾದ (**ಅತನುತರ** = ಮಹತ್ತಾದ), **ವಿವೃತೇಃ** = ವ್ಯಾಖ್ಯಾನದ, **ಭೂಯಃ ಪ್ರಚಯಂ** = ಬಹಳವಾದ ಪ್ರಸಿದ್ಧಿಯನ್ನು, **ವಿದ್ವತ್ಸು** = ಪಂಡಿತಮಂಡಲಿಯಲ್ಲಿ, **ಪ್ರೇಮ್ಣಾ** = ಸಂತೋಷದಿಂದ, **ಅಂಜಸಾ** = ಚೆನ್ನಾಗಿ, **ಅಭಿಲಷನ್** = ಮಾಡಲಿಚ್ಛಿಸಿ-ದವರಾದ, **ತ್ವಂ** = ನೀವು, **ಋಚಾಂ ನಿಚಯಂ ಏವ** = ಋಙ್ಮಂತ್ರಗಳ ಸಮೂಹವನ್ನೇ, **ಭಾಷ್ಯಾನುರೋಧಾತ್** = ಋಗ್ಭಾಷ್ಯಕ್ಕೆ ಅನುಗುಣವಾಗಿ, **ಅಂಜಸಾ** = ಚೆನ್ನಾಗಿ, **ಪ್ರಾವೋಚಃ** = ವಿವರಿಸಿರುವಿರಿ, **ತಸ್ಮಾತ್** = ಆದ್ದರಿಂದ, **ತವ** = ನಿಮ್ಮ, **ತನಯಮಣಿಃ** = ಪುತ್ರರತ್ನರಾದ, **ಲಕ್ಷ್ಮೀನಾರಾಯಣಾರ್ಯಃ** = ಲಕ್ಷ್ಮೀನಾರಾಯಣಾರ್ಯರು, **ಸರ್ವೇಷು ಸತ್ಸು** = ಎಲ್ಲ ಸಜ್ಜನರಲ್ಲಿ, **ಧನ್ಯಃ** = ಕೃತಕೃತ್ಯರೇ ಸರಿ.

**ತಾತ್ಪರ್ಯಾರ್ಥ :** ಶ್ರೇಷ್ಠವಾದ ಯತಿವ್ರತವನ್ನು ಪರಿಪಾಲಿಸುತ್ತಿರುವ ಮತ್ತು 'ಸಕಲ ಮಧ್ವಶಾಸ್ತ್ರವನ್ನು ವ್ಯಾಖ್ಯಾನಿಸುತ್ತೇನೆ' ಎಂದು ಸಂಕಲ್ಪ ಮಾಡಿರುವ ಗುರುಸಾರ್ವ-ಭೌಮರೇ ! ನಿಮ್ಮ ವಿದ್ಯಾ ಶಿಷ್ಯೋತ್ತಮರಾದ (= ತನಯಮಣಿಃ) ಲಕ್ಷ್ಮೀನಾರಾಯಣಾ-ರ್ಯರು ಸರ್ವ ಜ್ಞಾನಿಗಳಲ್ಲಿ ನಿಜವಾಗಿಯೂ ಕೃತಕೃತ್ಯರಾಗಿದ್ದಾರೆ. ಏಕೆಂದರೆ ಅವರು ಋಗ್ಭಾಷ್ಯ ಟೀಕಾಕ್ಕೆ ಬರೆದ ಅತಿಚಿಕ್ಕದಾದ (ಅತನು = ದೊಡ್ಡದಾದ) ಮತ್ತು ಚೊಕ್ಕದಾದ ವಿವರಣಗ್ರಂಥವನ್ನು ಕರ್ತೃವಿನ ಮೇಲಿನ ಪ್ರೀತಿಯಿಂದ ಪಂಡಿತಮಂಡಲಿಯಲ್ಲಿ ಪ್ರಚಾರ ಮಾಡಲಿಚ್ಛಿಸಿ ನೀವು ಆ ಚಿಕ್ಕ ಗ್ರಂಥಕ್ಕೆ ಸಹಾಯಕವಾಗುವಂತೆ ಋಗ್ಭಾಷ್ಯಾನುಸಾರವಾಗಿ 'ಋಗರ್ಥಮಂಜರೀ' ಎಂಬ ಗ್ರಂಥವನ್ನು ರಚನೆ ಮಾಡಿದ್ದೀರಿ. ಹೀಗೆ ನಿಮ್ಮ ಕಾರುಣ್ಯದಿಂದ ವಿದ್ವತ್ಪ್ರಪಂಚದಲ್ಲಿ ಪ್ರಖ್ಯಾತರಾದ ಶ್ರೀಲಕ್ಷ್ಮೀನಾರಾಯಣಾರ್ಯರು ಧನ್ಯರೇ ಸರಿ.

**ಗುಣಪ್ರಕಾಶ :** "ಋಗರ್ಥಮಂಜರೀ" ಗ್ರಂಥಕರ್ತೃತ್ವೇನ ಶ್ರೀರಾಯರನ್ನು ಹಾಗೂ ಆ ಗ್ರಂಥರಚನೆಗೆ ಕಾರಣರಾದ ಶ್ರೀಲಕ್ಷ್ಮೀನಾರಾಯಣಾಚಾರ್ಯರನ್ನೂ ಈ ಶ್ಲೋಕದಲ್ಲಿ ಸ್ವಾರಸ್ಯವಾಗಿ ವರ್ಣಿಸುತ್ತಾ ಶ್ರೀವಾದೀಂದ್ರತೀರ್ಥರು ಶ್ರೀರಾಯರನ್ನೂ ಮತ್ತು (ಶ್ರೀರಾಯರ ಪೂರ್ವಾಶ್ರಮದ ಪುತ್ರರೂ ಹಾಗೂ ತಮ್ಮ ಪೂರ್ವಾಶ್ರಮದ ಪಿತಾಮಹರೂ ಆದ) ಶ್ರೀಲಕ್ಷ್ಮೀನಾರಾಯಣಾಚಾರ್ಯರನ್ನೂ ಸ್ತುತಿಸಿದ್ದಾರೆ. ಪಿತಾಮಹರ ಗುಣಸ್ತವನ ಮಾಡಲು ಇದುವರೆಗೂ ಸರಿಯಾದ ಪ್ರಸಂಗ ಒದಗಿರಲಿಲ್ಲ. ಈಗ ಅತ್ಯಂತ ಸೂಕ್ತವಾದ ಪ್ರಸಂಗ ಒದಗಿರುವುದರಿಂದ ಶ್ರೀಲಕ್ಷ್ಮೀನಾರಾಯಣಾರ್ಯರನ್ನು **ಋಗ್ಭಾಷ್ಯಟೀಕಾ**

ವಿವೃತಿಕಾರರೆಂದು ಸ್ತುತಿಸಲಾಗಿದೆ. ಇಷ್ಟೇ ಅಲ್ಲ ಗಾತ್ರದಲ್ಲಿ ಚಿಕ್ಕದಾದ ಮತ್ತು ಮಹದರ್ಥವನ್ನೊಳಗೊಂಡ ಇವರ ಈ ವಿವೃತಿಯು ವಿದ್ವನ್ಮಂಡಲಿಯಲ್ಲಿ ಪ್ರಚಾರವಾಗಿ ಪ್ರಸಿದ್ಧಿಹೊಂದಲಿ ಎಂಬ ಅನುಗ್ರಹ ಬುದ್ಧಿಯಿಂದ ಶ್ರೀರಾಯರು ಆ ವಿವೃತಿಗೆ ಸಹಾಯಕವಾಗುವಂತೆ ಋಗ್ಭಾಷ್ಯಾನುಸಾರವಾಗಿ ಋಕ್ಕುಗಳ ಸಮೂಹಕ್ಕೆ ವ್ಯಾಖ್ಯಾನ-ರೂಪವಾದ 'ಋಗರ್ಥಮಂಜರೀ' ಎಂಬ ಗ್ರಂಥವನ್ನು ರಚಿಸುವ ಮೂಲಕ ತಮ್ಮ ಪಿತಾಮಹರನ್ನು ಶ್ರೀರಾಯರು ಅನುಗ್ರಹಿಸಿರುವುದನ್ನೂ ತಿಳಿಸಿದ್ದಾರೆ. ಶ್ರೀಲಕ್ಷ್ಮೀ-ನಾರಾಯಣಾರ್ಯರು ಋಗರ್ಥಮಂಜರಿಯ ಪ್ರಾರಂಭದಲ್ಲಿ ತಮ್ಮ ವಿದ್ಯಾಗುರುಗಳಾದ ಶ್ರೀರಾಯರನ್ನು ಹೀಗೆ ಸ್ತುತಿಸುತ್ತಾರೆ –

**ಋಗರ್ಥಮಂಜರೀನಾಮ ಗ್ರಂಥೋ ಯೇನ ಸತಾಂ ಮುದೇ ।**
**ಕೃತಸ್ತಂ ಶ್ರೀರಾಘವೇಂದ್ರಾಖ್ಯಗುರುಂ ನತ್ವಾ ಹರಿಂ ಭಜೇ ॥**

ಶ್ರೀಲಕ್ಷ್ಮೀನಾರಾಯಣಾರ್ಯರು ಶ್ರೀರಾಯರ ಅನುಗ್ರಹಕ್ಕೆ ಪಾತ್ರರಾಗಿದ್ದರಿಂದ **"ಸತ್ಸು ಸರ್ವೇಷು ಧನ್ಯಃ"** – ಎಲ್ಲ ಸಜ್ಜನರಲ್ಲಿ ಕೃತಕೃತ್ಯರು ಮತ್ತು "ಶ್ರೇಷ್ಠರು" ಎಂದು ಸ್ತುತ್ಯರಾಗಿದ್ದಾರೆ. ಶ್ರೀರಾಯರ ಅನುಗ್ರಹಕ್ಕೆ ಪಾತ್ರರಾದವರು ಧನ್ಯರೇ ಸರಿ. ಪ್ರತೀತವ್ರತ ಎಂಬುದು ಶ್ರೀರಾಯರ ವಿಶೇಷಣ. ಪ್ರತೀತವ್ರತ ಎಂದರೆ 'ಶ್ರೀರಾಯರು ಪ್ರಸಿದ್ಧವಾದ ವ್ರತವುಳ್ಳಂಥವರು' ಎಂದು ಶ್ರೀವಸುಧೇಂದ್ರತೀರ್ಥರು ವ್ಯಾಖ್ಯಾನಿಸಿದರೆ "ಸಮಸ್ತಮಧ್ವಶಾಸ್ತ್ರಗ್ರಂಥಗಳನ್ನು ವ್ಯಾಖ್ಯಾನಿಸುತ್ತೇವೆ ಎಂಬ ಸಂಕಲ್ಪವುಳ್ಳವರು" ಎಂದು ಶ್ರೀಜಯರಾಮಾರ್ಯರು (ಶ್ರೀಧೀರೇಂದ್ರತೀರ್ಥರು) ವ್ಯಾಖ್ಯಾನಿಸುತ್ತಾರೆ.

**ವಿಶೇಷ ವಿಚಾರಗಳು :** "ತವ ತನಯಮಣಿಃ" ಎಂಬುದು ಶ್ರೀಲಕ್ಷ್ಮೀ-ನಾರಾಯಣಾರ್ಯರ ಸ್ತುತಿಪರವಾದ ವಿಶೇಷಣ. 'ಹೇ ರಾಘವೇಂದ್ರಪ್ರತೀಂದ್ರರೇ ! ನಿಮ್ಮ ಪುತ್ರರತ್ನ ಶ್ರೀಲಕ್ಷ್ಮೀನಾರಾಯಣಾರ್ಯರು' ಎಂದು ಈ ವಿಶೇಷಣದ ಅರ್ಥ, ಅಂದರೆ ಈಗ ಎಲ್ಲೆಡೆ ವ್ಯವಹಾರದಲ್ಲಿರುವಂತೆ 'ಶ್ರೀಪಾದಪುತ್ರ'ರು ಎಂದಂತಾಯಿತು. ಶ್ರೀಲಕ್ಷ್ಮೀನಾರಾಯಣಾರ್ಯರು ಶ್ರೇಷ್ಠ ಶ್ರೀಪಾದಪುತ್ರರು ಎಂದರ್ಥ.

**'ತವ ತನಯಮಣಿಃ'** ಎಂಬುದಕ್ಕೆ 'ನಿಮ್ಮ ಪುತ್ರರತ್ನ' ಎಂದು ಸನ್ಯಾಸಿಗಳಿಗೆ ಹೇಳುವುದು ಎಷ್ಟು ಯುಕ್ತವಾಗುತ್ತದೆ ? ಸನ್ಯಾಸಿಗಳಾದವರಿಗೆ (ಶ್ರೀರಾಯರಿಗೆ) ಇದು ಅನ್ವಯಿಸಬೇಕಾದರೆ 'ನಿಮ್ಮ ಪೂರ್ವಾಶ್ರಮದ ಪುತ್ರರತ್ನ' ಎಂದು ಅನ್ನಬೇಕು. ಇದಾದರೂ ಎಷ್ಟು ಸಮಂಜಸವಾಗುತ್ತದೆ ? ಈ ಬಗ್ಗೆ ಹೆಚ್ಚಿನ ವಿವರಣೆ ಹಾಗೂ ಸಮಾಧಾನಗಳನ್ನು ಪರಿಶಿಷ್ಟ(i)ದಲ್ಲಿ ಕಾಣಬಹುದು.

**೨೯. ಅವತಾರಿಕಾ :** ಸಕಲಸೂಕ್ತಗಳಿಗೆ ವ್ಯಾಖ್ಯಾನ ರಚಿಸಿರುವ ಶ್ರೀರಾಘವೇಂದ್ರ-ತೀರ್ಥರನ್ನು ಸ್ತುತಿಸುತ್ತಾರೆ.

ಹೃದ್ಯತ್ರಯ್ಯಂತವಿದ್ಯಾಮುಖನಿಖಿಲಕಲಾತತ್ತ್ವಬೋಧೈಕಮೂರ್ತೇ
ಧೀರಶ್ರೀರಾಘವೇಂದ್ರವ್ರತಿವರ ಸಕಲಾನ್ಯೇವ ಸೂಕ್ತಾನಿ ಸಮ್ಯಕ್ ।
ವ್ಯಾಕುರ್ವಾಣಂತಂ ಭವಂತಂ ವ್ಯವಸಿತಮತಯೋ ಹಂತ ನಿಧ್ಯಾಸಯಂತಃ
ಸರ್ವೇ ಭೂಯಸ್ಸ್ಮರಂತಿ ವ್ರತಿಸಮಿ(ಸುಮ)ತಿಮಣೇಃ ಬ್ರಹ್ಮಸೂತ್ರಪ್ರಣೇತುಃ ॥೨೯॥

**ಅನ್ವಯಾರ್ಥ** : ಹೃದ್ಯತ್ರಯ್ಯಂತವಿದ್ಯಾಮುಖನಿಖಿಲಕಲಾತತ್ತ್ವಬೋಧೈಕಮೂರ್ತೇ – **ಹೃದ್ಯ** = ಮನೋಹರವಾದ, **ತ್ರಯ್ಯಂತವಿದ್ಯಾ** = ವೇದೋಪನಿಷತ್ ವಿದ್ಯೆಯೇ, **ಮುಖ** = ಮೊದಲಾದ, **ನಿಖಿಲಕಲಾ** = ಸಕಲ ವಿದ್ಯೆಗಳಲ್ಲಿರುವ, **ತತ್ತ್ವಬೋಧ** = ತತ್ತ್ವಜ್ಞಾನವೇ **ಏಕ** = ಮುಖ್ಯವಾದ, **ಮೂರ್ತೇ** = ಶರೀರವಾಗುಳ್ಳ, **ಧೀರಶ್ರೀರಾಘವೇಂದ್ರ ವ್ರತಿವರ** = ಧೀರಶ್ರೀರಾಘವೇಂದ್ರಯತಿವರ್ಯರೇ ! **ಸಕಲಾನಿ ಏವ ಸೂಕ್ತಾನಿ** = ಪುರುಷಸೂಕ್ತವೇ ಮೊದಲಾದ ಎಲ್ಲ ಪಂಚಸೂಕ್ತಗಳನ್ನು, **ಸಮ್ಯಕ್** = ಚೆನ್ನಾಗಿ, **ವ್ಯಾಕುರ್ವಾಣಂತಂ** = ವ್ಯಾಖ್ಯಾನಿಸಿರುವ, **ಭವಂತಂ** = ತಮ್ಮನ್ನು ಕಂಡು, **ವ್ಯವಸಿತಮತಯಃ** = ನಿಶ್ಚಿತವಾದ ಮತಿಯುಳ್ಳ, **ಸರ್ವೇ** = ಎಲ್ಲ ಪಂಡಿತರು, **ವ್ರತಿಸುಮತಿ(ಸಮಿತಿ) ಮಣೇಃ** = ಋಷಿಸಂಘ ಶ್ರೇಷ್ಠರಾದ ಮತ್ತು **ಬ್ರಹ್ಮಸೂತ್ರ-ಪ್ರಣೇತುಃ** = ಬ್ರಹ್ಮಸೂತ್ರಕರ್ತೃಗಳಾದ ಶ್ರೀವೇದವ್ಯಾಸರನ್ನು, **ಭೂಯಃ** = ಬಹಳವಾಗಿ, **ಸ್ಮರಂತಿ** = ಸ್ಮರಿಸುತ್ತಾರೆ. **ಹಂತ** = ಆಶ್ಚರ್ಯವು ಮತ್ತು ಸಂತೋಷವು.

**ತಾತ್ಪರ್ಯಾರ್ಥ** : ಮನೋಹರವಾದ ಉಪನಿಷದ್ವಿದ್ಯೆ ಮುಂತಾದ ಸಕಲ ವಿದ್ಯೆಗಳಲ್ಲಿರುವ ತತ್ತ್ವಜ್ಞಾನವೇ ಮೂರ್ತಿವೆತ್ತು ಬಂದಂತಿರುವ ಧೀರಶ್ರೀರಾಘವೇಂದ್ರ ವ್ರತಿವರರೇ ! ಪುರುಷಸೂಕ್ತವೇ ಮೊದಲಾದ ಸಕಲ (ಪಂಚ)ಸೂಕ್ತಗಳಿಗೆ ಸಮೀಚೀನ-ವಾದ ವ್ಯಾಖ್ಯಾನಗಳನ್ನು ರಚಿಸಿದ ತಮ್ಮನ್ನು ಸದಾ ಧ್ಯಾನಿಸುತ್ತಿರುವ ನಿಶ್ಚಿತಮತಿಗಳಾದ ಎಲ್ಲ ವಿದ್ವಾಂಸರು; ಪೈಲ, ವೈಶಂಪಾಯನ, ಜೈಮಿನಿ, ಸುಮಂತು ರೋಮಹರ್ಷಣ ಇವರೇ ಮೊದಲಾದ ಋಷಿಗಳ ಸಭೆಗೆ ಅಧ್ಯಕ್ಷಸ್ಥಾನದಲ್ಲಿರುವ ಬ್ರಹ್ಮಸೂತ್ರಕರ್ತೃ-ಗಳಾದ ಶ್ರೀವೇದವ್ಯಾಸರನ್ನು ಬಹಳವಾಗಿ ಸ್ಮರಿಸಿಕೊಂಡರು.

[**ವ್ರತಿಸಮಿತಿಮಣೇಃ, ಬ್ರಹ್ಮಸೂತ್ರಪ್ರಣೇತುಃ** ಈ ಎರಡು ಪದಗಳಿಂದ ಒಂದು ಪ್ರಸಂಗವನ್ನು ಕಲ್ಪಿಸಬಹುದು. ಶ್ರೀವೇದವ್ಯಾಸರು ಅನಂತ ವೇದಗಳನ್ನು ಋಗ್ವೇದಾದಿ ನಾಲ್ಕು ವಿಭಾಗ ಮಾಡಿ ಅವುಗಳನ್ನು ಕ್ರಮವಾಗಿ ಪೈಲ, ವೈಶಂಪಾಯನ, ಜೈಮಿನಿ ಹಾಗೂ ಸುಮಂತು ಋಷಿಗಳಿಗೆ ಉಪದೇಶಿಸಿದರು. ಅನಂತರ ಒಂದು ವಿಶಾಲವಾದ ಋಷಿಸಮ್ಮೇಲನದಲ್ಲಿ ಅಧ್ಯಕ್ಷಸ್ಥಾನದಲ್ಲಿದ್ದ ಶ್ರೀವೇದವ್ಯಾಸರು ಆ ವೇದಾರ್ಥ-ನಿರ್ಣಾಯಕವಾದ ಬ್ರಹ್ಮಸೂತ್ರಗಳನ್ನು ರಚಿಸಿ ಅವುಗಳ ಸಹಾಯದಿಂದ ವೇದಗಳ ಅರ್ಥವನ್ನು ತಿಳಿಯುವ ಕ್ರಮವನ್ನು ಎಲ್ಲ ಋಷಿಗಳಿಗೆ ಉಪದೇಶಿಸಿದರು. ಇದರಂತೆಯೇ ಶ್ರೀರಾಘವೇಂದ್ರ ಯತಿಗಳು ಮುಮುಕ್ಷು ಜಿಜ್ಞಾಸುಗಳಿಗೆ ಪುರುಷಸೂಕ್ತಾದಿಗಳ

ಅರ್ಥಗಳನ್ನು ತಿಳಿಸುವದಕ್ಕೋಸ್ಕರ ಸೂಕ್ತ ವ್ಯಾಖ್ಯಾನಗಳನ್ನು ರಚಿಸಿ ಶಿಷ್ಯಸಮೂಹದಲ್ಲಿ ಪ್ರಕಾಶಪಡಿಸಿದರು. ಶ್ರೀರಾಘವೇಂದ್ರತೀರ್ಥರು ಈ ರೀತಿ ಮಾಡಿದುದನ್ನು ನೋಡಿದ ವಿದ್ವಾಂಸರಿಗೆ ವೇದವಿಭಾಗ ಮಾಡಿ ಪೈಲಾದಿ ಋಷಿಗಳಿಗೆ ಉಪದೇಶಿಸಿ ಎಲ್ಲರಿಗೂ ವೇದಾರ್ಥವಾಗುವದಕ್ಕಾಗಿ ಬ್ರಹ್ಮಸೂತ್ರಗಳನ್ನು ರಚಿಸಿದ ಶ್ರೀವೇದವ್ಯಾಸರ ಸ್ಮರಣೆಯು ಬರುವದು ಸ್ವಾಭಾವಿಕ.]

**ಗುಣಪ್ರಕಾಶ :** ಪುರುಷಸೂಕ್ತಾದಿ ಪಂಚಸೂಕ್ತಗಳ ವ್ಯಾಖ್ಯಾನ ಕರ್ತೃಗಳು ಶ್ರೀರಾಯರು ಎಂದು ಇಲ್ಲಿ ಸ್ತುತಿಸಲ್ಪಾಗಿದೆ. ಇವರ ಸೂಕ್ತ ವ್ಯಾಖ್ಯಾನಗಳಿಂದ ಅತ್ಯಂತ ಉಪಕೃತರಾದ ಜ್ಞಾನಿಗಳಾದ ಸಕಲವಿದ್ವಾಂಸರು ಶ್ರೀರಾಯರನ್ನು ನಿರಂತರ ಧ್ಯಾನ ಮಾಡುತ್ತ ವೇದಾರ್ಥ ನಿರ್ಣಾಯಕ ಬ್ರಹ್ಮಸೂತ್ರಗಳನ್ನು ರಚಿಸಿದ ಶ್ರೀವೇದವ್ಯಾಸರನ್ನು ಸ್ಮರಿಸುತ್ತಾರೆ.

ಬ್ರಹ್ಮಸೂತ್ರಗಳ ರಚನೆಯಿಂದ ಉಪಕೃತರಾದವರು ಶ್ರೀವೇದವ್ಯಾಸ ದೇವರನ್ನು ಸ್ಮರಿಸಿದಂತೆ ಪುರುಷಸೂಕ್ತಾದಿ ಪಂಚಸೂಕ್ತಗಳ ವ್ಯಾಖ್ಯಾನಗಳಿಂದ ಉಪಕೃತರಾದ ವಿದ್ವಾಂಸರು ಶ್ರೀರಾಯರನ್ನು ಸ್ಮರಿಸುತ್ತಿದ್ದಾರೆ. ಇಲ್ಲಿ ಶ್ರೀರಾಯರ ಸಜ್ಜನಾನುಗ್ರಹೇಚ್ಛಾ-ರೂಪವಾದ ಕೃಪಾಗುಣವು ವ್ಯಕ್ತವಾಗುತ್ತದೆ.

ಹೃದ್ಯತ್ರ್ಯಯ್ಯಂತವಿದ್ಯಾಮುಖನಿಖಿಲಕಲಾತತ್ತ್ವಬೋಧೈಕಮೂರ್ತೇ ಮತ್ತು ಧೀರಶ್ರೀರಾಘವೇಂದ್ರವ್ರತಿವರ ಇವೆರಡು ಶ್ರೀರಾಯರ ವಿಶೇಷಣಗಳಾಗಿವೆ. ಮೊದಲನೆಯ ವಿಶೇಷಣದಲ್ಲಿ ಶ್ರೀರಾಯರನ್ನು ಉಪನಿಷದ್ ವಿದ್ಯೆಯೇ ಮೊದಲಾದ ವಿದ್ಯೆಗಳ ತತ್ತ್ವಜ್ಞಾನವೇ ಮೂರ್ತಿವೆತ್ತಸ್ವರೂಪರೆಂದು ವರ್ಣಿಸಲಾಗಿದೆ. ಅಂದರೆ ಶ್ರೀರಾಯರು ಅನೇಕ ಕಲಾಸಂಪನ್ನರು ಮತ್ತು ತತ್ತ್ವಜ್ಞಾನಸ್ವರೂಪರು ಎಂಬ ಅವರ ಗುಣಸ್ತವನವು ಇಲ್ಲಿದೆ. ಧೀರಶ್ರೀರಾಘವೇಂದ್ರವ್ರತಿವರ ಎಂಬ ವಿಶೇಷಣವು ಶ್ರೀರಾಯರ ಜ್ಞಾನ, ಧೈರ್ಯ, ಕಾಂತಿ, ವ್ರತನಿಷ್ಠೆ ಮೊದಲಾದ ಗುಣಗಳ ದ್ಯೋತಕವಾಗಿದೆ.

**೩೦. ಅವತಾರಿಕಾ :** ಉಪನಿಷತ್ತುಗಳಿಗೆ ಖಂಡಾರ್ಥಗಳನ್ನು ಅಥವಾ ಉಪನಿಷತ್ ಖಂಡಗಳ ಅರ್ಥಗಳನ್ನು ಬರೆದ ಶ್ರೀರಾಯರ ಮಹಿಮೆಯನ್ನು ವರ್ಣಿಸುತ್ತಾರೆ.

**ಯಾವದ್ವೇದಾಂತಖಂಡಪ್ರವಚನಕೃತಿನಿ ಪ್ರೇಮಭೂಮಾ ನ ತಾದೃಕ್**
**ಸರ್ವಾಮ್ನಾಯಪ್ರವಕ್ತರ್ಯನುಪಮಚರಿತೇ ರಾಘವೇಂದ್ರವ್ರತೀಂದ್ರೇ ।**
**ಇತ್ಯೇತದ್ದೇಹಭಾಜಾಮತಿವಿಶದರುಚೌ ಜಾಗರೂಕೇಽಪಿ ಲೋಕೇ**
**ರಾಕಾಚಂದ್ರೇ ದ್ವಿತೀಯಾಶಶಿಶಕಲನತಿನ್ಯಾಯಮೇವಾನುರುಂಧೇ ॥ ೩೦ ॥**

**ಅನ್ವಯಾರ್ಥ :** **ವೇದಾಂತಖಂಡಪ್ರವಚನಕೃತಿನಿ** – **ವೇದಾಂತಖಂಡ** = ವೇದದ ಬೇರೆ ಬೇರೆ ಶಾಖೆಗಳಿಗೆ ಸೇರಿದ ದಶೋಪನಿಷತ್ತುಗಳಿಗೆ, **ಪ್ರವಚನಕೃತಿನಿ** =

ಖಂಡಾರ್ಥಗಳನ್ನು ಬರೆದಿರುವ ಅಥವಾ ದಶೋಪನಿಷತ್ತುಗಳಿಗೆ ಖಂಡಾರ್ಥಗಳನ್ನು ಬರೆದಿರುವ, **ಅನುಪಮಚರಿತೇ** = ಅನುಪಮಚರಿತರಾದ, **ರಾಘವೇಂದ್ರವ್ರತೀಂದ್ರೇ** = ಶ್ರೀರಾಘವೇಂದ್ರಯತೀಂದ್ರರಲ್ಲಿ, **ಯಾವತ್ ಪ್ರೇಮಭೂಮಾ** = ಯಾವ ತರಹದ ಪ್ರೇಮಾತಿಶಯವು ಉಂಟಾಗುವದೋ, **ತಾದೃಕ್** = ಅಂಥ ಪ್ರೇಮಾತಿಶಯವು, **ಸರ್ವಾಮ್ನಾಯಪ್ರವಕ್ತರಿ** = ಸಕಲವೇದಗಳಿಗೆ ವ್ಯಾಖ್ಯಾನಮಾಡಿದವರೆಂದು ಅವರಲ್ಲಿ, **ನ** = ಉಂಟಾಗುವದಿಲ್ಲ. **ಇತಿ ಏತತ್** = ಎನ್ನುವ ಈ ವಿಷಯವು, **ಲೋಕೇ** = ಲೋಕದಲ್ಲಿ, **ಅತಿವಿಶದರುಚೌ** = ಅತ್ಯಂತ ಪ್ರಕಾಶಮಾನನಾದ, **ರಾಕಾಚಂದ್ರೇ** = ಹುಣ್ಣಿಮೆಯ ಪೂರ್ಣಚಂದ್ರನು, **ಜಾಗರೂಕೇ ಅಪಿ** = ಸ್ಪಷ್ಟವಾಗಿ ಆಕಾಶದಲ್ಲಿ ಗೋಚರಿಸುತ್ತಿದ್ದರೂ, **ದೇಹಭಾಜಾಂ** = ಮಾನವರ, **ದ್ವಿತೀಯಾಶಶಿಶಕಲನತಿನ್ಯಾಯ-ಮೇವ** = ಶುಕ್ಲಪಕ್ಷದ ಬಿದಿಗೆಯ ಖಂಡಚಂದ್ರನಿಗೆ ನಮಿಸುವ ನ್ಯಾಯವನ್ನೇ, **ಅನುರುಂಧೇ** = ಅನುಸರಿಸುತ್ತದೆ.

**ತಾತ್ಪರ್ಯಾರ್ಥ** : ವೇದದ ಬೇರೆ ಬೇರೆ ಶಾಖೆಗಳಿಗೆ ಸೇರಿದ ದಶೋಪನಿಷತ್ತುಗಳಿಗೆ ಖಂಡಾರ್ಥಗಳನ್ನು ಅಥವಾ ದಶೋಪನಿಷತ್ ಖಂಡಗಳ ಅರ್ಥಗಳನ್ನು ಬರೆದಿರುವ ಅನುಪಮಚರಿತರಾದ, ಶ್ರೀರಾಘವೇಂದ್ರವ್ರತೀಂದ್ರರಾದ ತಮ್ಮಲ್ಲಿ ವಿದ್ವಾಂಸರಿಗೆ ಯಾವ ತರಹದ ಪ್ರೇಮಾತಿಶಯವು ಉಂಟಾಗುವದೋ ಅಂಥ ಪ್ರೇಮಾತಿಶಯವು ಸಕಲ ವೇದಗಳಿಗೆ ವ್ಯಾಖ್ಯಾನ ಮಾಡಿದವರೆಂದು ತಮ್ಮಲ್ಲಿ ಉಂಟಾಗುವದಿಲ್ಲ. ಇದು ಅತ್ಯಂತ ನಿರ್ಮಲಕಾಂತಿಯುಕ್ತನಾದ ಹುಣ್ಣಿಮೆಯ ಚಂದ್ರನು ಆಕಾಶದಲ್ಲಿ ಬೆಳಗುತ್ತಿದ್ದರೂ ಸಹ ಎಲ್ಲರೂ ಶುಕ್ಲಪಕ್ಷದ ಬಿದಿಗೆಯ ಚಂದ್ರನ ಸಣ್ಣ ಕಳೆಯನ್ನೇ ನಮಸ್ಕರಿಸುವ ಮನುಷ್ಯರ ರೀತಿಯನ್ನು ಅನುಸರಿಸುವದು.

**ಗುಣಪ್ರಕಾಶ** : ದಶೋಪನಿಷತ್ತುಗಳಿಗೆ ಖಂಡಾರ್ಥಗಳನ್ನು ರಚಿಸಿ ಸಜ್ಜನರಲ್ಲಿ ಮಹೋಪಕಾರ ಮಾಡಿದವರು ಶ್ರೀರಾಯರು ಎಂಬ ವರ್ಣನೆ ಈ ಶ್ಲೋಕದಲ್ಲಿ ಬರುತ್ತದೆ. ಶ್ರೀರಾಯರು ವೇದಗಳಿಗೆ ವ್ಯಾಖ್ಯಾನ ಬರೆದಾಗಿನಕ್ಕಿಂತಲೂ ಉಪನಿಷತ್ ಖಂಡಾರ್ಥಗಳನ್ನು ಬರೆದಾಗ ವಿದ್ವಾಂಸರಿಗೆ ಶ್ರೀರಾಯರಲ್ಲಿ ಅಧಿಕವಾದ ಪ್ರೀತಿಯುಂಟಾಯಿತು.

**ವೇದಾಂತಖಂಡಪ್ರವಚನಕೃತಿನಿ, ಸರ್ವಾಮ್ನಾಯಪ್ರವಕ್ತರಿ, ಅನುಪಮಚರಿತೆ, ರಾಘವೇಂದ್ರವ್ರತೀಂದ್ರೇ** ಇಷ್ಟು ಶ್ರೀರಾಯರಿಗೆ ಸಂಬಂಧಿಸಿದ ವಿಶೇಷಣಗಳು. ಇವುಗಳಿಂದ ಅನುಕ್ರಮವಾಗಿ ಉಪನಿಷತ್ತುಗಳಿಗೆ ವ್ಯಾಖ್ಯಾನವನ್ನು (ಖಂಡಾರ್ಥ) ಬರೆದವರು, ಸಕಲವೇದಗಳಿಗೆ ವ್ಯಾಖ್ಯಾನ ಮಾಡಿದವರು, ಅನುಪಮಚರಿತರು, ವ್ರತಿಶ್ರೇಷ್ಠರು ಎಂದು ಸ್ತುತರಾಗುವ ಶ್ರೀರಾಯರ ಅಗಾಧಜ್ಞಾನ, ಪ್ರತಿಭೆ, ಅಗಮ್ಯ ಮಹಿಮೆ ಹಾಗೂ ಶಮದಮಾದಿಗುಣಗಳ ವರ್ಣನೆ ಕಂಡುಬರುವದು.

೩೧. **ಅವತಾರಿಕಾ :** ಶ್ರೀರಾಯರು ಋಗ್ವೇದ, ಯಜುರ್ವೇದ, ಸಾಮವೇದಗಳ ವ್ಯಾಖ್ಯಾಕರ್ತೃಗಳು ಎಂದು ಸ್ತುತಿಸಲ್ಪಡುತ್ತಾರೆ.

**ಹೃದ್ಯಾ ಟೀಕಾನವದ್ಯಾ ಪರವಿವೃತಯಜುಸ್ಸಾಮಸಂಬಂಧಿನೀ ತೇ**
**ಮಾಲಿನ್ಯಕ್ಷಾಲನಾಂಭಸ್ಸ್ವಯಮಜನಿ ಹರೇರುತ್ತರಾಂಗೇ ಚ ಮೂರ್ಧ್ನಿ ।**
**ಸೈವರ್ಚಾಂ ರಾಘವೇಂದ್ರವ್ರತಿಸುಮತಿಮಣೇಽನನ್ಯಸಂಪರ್ಕಭಾಜಾ-**
**ಮೋಜಿಷ್ಠೇ ದಕ್ಷಿಣಾಂಗೇ ಮೃಗಮದಮಿಲಿತೋದಾರಪಾಟೀರಸಾರಃ ॥ ೩೧ ॥**

**ಅನ್ವಯಾರ್ಥ :** **ವ್ರತಿಸುಮತಿಮಣೇ ರಾಘವೇಂದ್ರ** = ವ್ರತಿಸುಮತಿಮಣಿಗಳಾದ ಶ್ರೀರಾಘವೇಂದ್ರ ಗುರುವರ್ಯರೇ, **ಪರವಿವೃತಯಜುಃಸಾಮಸಂಬಂಧಿನೀ** – **ಪರ** = ಭಟ್ಟಭಾಸ್ಕರಾದಿ ಪರರಿಂದ, **ವಿವೃತ** = ಅಪವ್ಯಾಖ್ಯಾನಿಸಲ್ಪಟ್ಟ, **ಯಜುಃ ಸಾಮಸಂಬಂಧಿನೀ** = ಯಜುರ್ವೇದ ಮತ್ತು ಸಾಮವೇದಗಳಿಗೆ ಸಂಬಂಧಿಸಿದ, **ತೇ** = ನಿಮ್ಮ, **ಹೃದ್ಯಾ** = ಮನೋಹರವಾದ, **ಅನವದ್ಯಾ** = ನಿರ್ದುಷ್ಟವಾದ, **ಟೀಕಾ** = ವ್ಯಾಖ್ಯಾನವು, **ಸ್ವಯಂ** = ತಾನೇ, **ಹರೇಃ** = ಶ್ರೀಹರಿಯ, **ಉತ್ತರಾಂಗೇ** = ಎಡಭಾಗದಲ್ಲಿ, **ಚ** = ಮತ್ತು, **ಮೂರ್ಧ್ನಿ** = ತಲೆಯ ಮೇಲೆ ಬಂದು ಸೇರಿದ್ದ, **ಮಾಲಿನ್ಯಕ್ಷಾಲನಾಂಭಃ** – **ಮಾಲಿನ್ಯ** = ಅಪಾರ್ಥವೆಂಬ ಮಾಲಿನ್ಯವನ್ನು, **ಕ್ಷಾಲನ** = ತೊಳೆದು ಕಳೆಯುವ, **ಅಂಭಃ** = ಶುದ್ಧೋದಕದಂತೆ, **ಅಜನಿ** = ಆಯಿತು, **ಅನನ್ಯಸಂಪರ್ಕಭಾಜಾಂ** – **ಅನನ್ಯಸಂಪರ್ಕ** = ಎರಡನೆಯದವರ ಅಪವ್ಯಾಖ್ಯಾನರೂಪ ಸಂಪರ್ಕಾಭಾವವನ್ನು, **ಭಾಜಾಂ** = ಹೊಂದಿರುವ, **ಋಚಾಂ** = ಋಗ್ವೇದದ ಋಕ್ಕುಗಳಿಗೆ, **ಸಾ ಏವ** = ನೀವು ರಚಿಸಿದ ಋಗ್ವೇದ ವ್ಯಾಖ್ಯಾನವೇ (ಭಾಷ್ಯವೇ). **ಓಜಿಷ್ಠೆ** = ದೇದೀಪ್ಯಮಾನವಾದ, **ದಕ್ಷಿಣಾಂಗೇ** = ಬಲಭಾಗದಲ್ಲಿ, **ಮೃಗಮದಮಿಲಿತೋದಾರಪಾಟೀರಸಾರಃ** – **ಮೃಗಮದ** = ಕಸ್ತೂರೀಮೃಗದ ಸುವಾಸಿತ ಮದದಿಂದ, **ಮಿಲಿತ** = ಮಿಶ್ರಿತವಾದ, **ಉದಾರ** = ಉತ್ಕೃಷ್ಟವಾದ, **ಪಾಟೀರಸಾರಃ** = ಸುಗಂಧದ್ರವ್ಯದಂತೆ, **ಅಜನಿ** = ಆಯಿತು.

**ತಾತ್ಪರ್ಯಾರ್ಥ :** ಭೋ ಶ್ರೀರಾಘವೇಂದ್ರವ್ರತಿಸುಮತಿಮಣಿಗಳೇ ! ಯಜುರ್ವೇದ ಮತ್ತು ಸಾಮವೇದಗಳಿಗೆ ನೀವು ರಚಿಸಿದ ವ್ಯಾಖ್ಯಾನಗಳು, ಭಟ್ಟ-ಭಾಸ್ಕರ-ವಿದ್ಯಾರಣ್ಯಮುನಿ ಮುಂತಾದವರು ಯಜುಸ್ಸಾಮಗಳಿಗೆ ರಚಿಸಿದ ಅಪವ್ಯಾಖ್ಯಾನಗಳಿಂದ ಶ್ರೀಹರಿಯ ಎಡಭಾಗ ಮತ್ತು ಶಿರಸ್ಸಿನಲ್ಲಿ ಉಂಟಾದ ಮಾಲಿನ್ಯವನ್ನು (ಅಪಾರ್ಥವನ್ನು) ತೊಳೆಯುವ ಶುದ್ಧೋದಕವಾದವು. ಅದರಂತೆ ಭೋ ಶ್ರೀಯತಿರಾಘವೇಂದ್ರರೇ ! ಮತ್ತೊಬ್ಬರ ಅಪವ್ಯಾಖ್ಯಾನ ಸಂಬಂಧರಹಿತವಾದ ಋಗ್ವೇದ ಮತ್ತು ಉಪನಿಷತ್ತುಗಳಿಗೆ ನೀವು ರಚಿಸಿದ ಋಗ್ವೇದವ್ಯಾಖ್ಯಾನ ಮತ್ತು ಖಂಡಾರ್ಥಗಳು ಅತ್ಯಂತಕಾಂತಿಯುತವಾದ

ಶ್ರೀಹರಿಯ ಬಲಭಾಗದಲ್ಲಿ ಕಸ್ತೂರಿ ಮುಂತಾದ ಪರಿಮಳಪದಾರ್ಥಗಳಿಂದ ಮಿಶ್ರಿತವಾದ ಉತ್ಕೃಷ್ಟವಾದ ಸುಗಂಧದ್ರವ್ಯದಂತಾದವು.

**ಗುಣಪ್ರಕಾಶ :** ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವ-ವೇದಗಳ ಅಪವ್ಯಾಖ್ಯಾನಗಳ ಕಲ್ಮಷವನ್ನು ತೊಳೆದು ಅವುಗಳಿಗೆ ಸರಿಯಾದ ವ್ಯಾಖ್ಯಾನಗಳನ್ನು ಬರೆದು ವೇದಗಳ ನಿಜವಾದ ಅರ್ಥವನ್ನು ಪ್ರಕಟಬಡಿಸಿದ ಮಹನೀಯರು ಶ್ರೀರಾಯರು ಎಂಬ ವರ್ಣನೆ ಇಲ್ಲಿದೆ.

ಶ್ರೀರಾಯರು ತಮ್ಮ ವೇದವ್ಯಾಖ್ಯಾನಗಳಿಂದ ಸಜ್ಜನರು ವೇದಗಳ ಸರಿಯಾದ ಅರ್ಥವನ್ನರಿತು ವೇದಪುರುಷನಾದ ಶ್ರೀಹರಿಯ ಉಪಾಸನೆಯಿಂದ ಉದ್ಧೃತರಾಗುವಂತೆ ಮಾಡಿದರು. ಶ್ರೀರಾಯರ ಈ ಕಾರುಣ್ಯವು ವರ್ಣನಾತೀತ.

ವೇದಗಳಿಗೆ ವ್ಯಾಖ್ಯಾನವನ್ನು ಬರಿಯಬೇಕಾದರೆ ಶ್ರೀರಾಯರ ಜ್ಞಾನ ಪ್ರತಿಭೆಗಳು ಎಷ್ಟು ಶ್ರೇಷ್ಠಮಟ್ಟದವಾಗಿದ್ದವು ಎಂಬುದನ್ನು ಗಮನಿಸಬಹುದು. ವೇದಾರ್ಥ ನಿರ್ಣಾಯಕವಾದ ಬ್ರಹ್ಮಸೂತ್ರಗಳು ಗುರುಸಾರ್ವಭೌಮರಿಗೆ ಕರತಲಾಮಲಕವಾಗಿದ್ದ ವಿಷಯವೂ ಇಲ್ಲಿ ಸ್ಪಷ್ಟವಾಗುವದು.

ಈ ವ್ಯಾಖ್ಯಾನಗಳು ಇನ್ನೂ ದೊರೆಯದಿದ್ದುದು ನಮ್ಮ ದುರ್ದೈವವೆಂದೇ ಹೇಳಬೇಕು.

ವ್ರತಿಸುಮತಿಮಣೇ ಎಂಬ ವಿಶೇಷಣದಿಂದ ಶ್ರೀರಾಯರು ವ್ರತಿಶ್ರೇಷ್ಠರೂ, ಕುಶಾಗ್ರಮತಿಗಳೂ ಆಗಿದ್ದಾರೆಂಬುದು ವ್ಯಕ್ತವಾಗುವದು.

**೩೨. ಅವತಾರಿಕಾ :** ದಶಪ್ರಕರಣಗಳಿಗೆ (ದಶಪ್ರಕರಣಗಳ ಟೀಕಾಗ್ರಂಥಗಳಿಗೆ) ಟಿಪ್ಪಣಿಯನ್ನು ರಚಿಸಿದವರೆಂದು ಶ್ರೀರಾಯರ ಸ್ತೋತ್ರ ಮಾಡುತ್ತಾರೆ.

**ನೂನಂ ವಾಕ್ಯಾನುರೋಧಿ ಪ್ರಕರಣಮಖಿಲಂ ನೇಯಮಿತ್ಯುಕ್ತಮುಚ್ಚೈಃ**
**ಪ್ರಾಚಾ ವಾಚಂಯಮೇನ ಪ್ರಕಟಿತವಿಭವಾನಂತವೇದಾಂತವಾಚಾ ।**
**ಸ್ವಾಮಿನ್ನೇತತ್ಪ್ರತೀಯುಃ ಕಥಮಿವ ಕವಯೋ ರಾಘವೇಂದ್ರ ವ್ರತೀಂದ್ರೋ**
**ಯೇನ ತ್ವದ್ವಾಕ್ಯಜಾತಂ ಪ್ರಕರಣನಿಕರಂ(ಮಖಿಲಂ)ತಾವದದ್ಯಾನುರುಂಧೇ ।।೩೨।।**

**ಅನ್ವಯಾರ್ಥ :** ಪ್ರಕಟಿತವಿಭವಾನಂತವೇದಾಂತವಾಚಾ – ಪ್ರಕಟಿತ = ಪ್ರಕಾಶಗೊಳಿಸಲ್ಪಟ್ಟ, ವಿಭವ = ಅರ್ಥವೈಭವವುಳ್ಳ, ಅನಂತ = ಅನಂತವಾದ, ವೇದಾಂತ = ವೇದೋಪನಿಷದ್ ವಾಕ್ಯಗಳ, ವಾಚಾ = ನಿರ್ಣಾಯಕ ಬ್ರಹ್ಮಸೂತ್ರ-ಗಳುಳ್ಳ, ಪ್ರಾಚಾ = ಪ್ರಾಚೀನಾಚಾರ್ಯರಾದ ಅಥವಾ ಮೂಲಗುರುಗಳೂ,

**ವಾಚಂಯಮೇನ** = ಮಹಾಮುನಿಗಳೂ ಆದ ಶ್ರೀವೇದವ್ಯಾಸರಿಂದ, **ಅಖಿಲಂ ಪ್ರಕರಣಂ** = ಅಖಿಲ ಪ್ರಕರಣವು (ಪ್ರಕರಣಾರ್ಥವು), **ನೂನಂ** = ನಿಶ್ಚಯವಾಗಿಯೂ, **ವಾಕ್ಯಾನುರೋಧಿ** = ವಾಕ್ಯಾರ್ಥಾನುಸಾರವಾಗಿ, **ನೇಯಂ** = ಹೊಂದಿಸಿ ವಿವರಿಸಲ್ಪಡಬೇಕು, **ಇತಿ** = ಎಂಬುದಾಗಿ, **ಉಚ್ಚೈಃ** = ಗಟ್ಟಿಯಾಗಿ ಅಥವಾ ಸ್ಪಷ್ಟವಾಗಿ, **ಉಕ್ತಂ** = ಹೇಳಲ್ಪಟ್ಟಿರುತ್ತದೆ, ಆದರೆ, **ಸ್ವಾಮಿನ್ ರಾಘವೇಂದ್ರ ವ್ರತೀಂದ್ರೋ** = ಸ್ವಾಮಿನ್ ಪೂಜ್ಯರಾದ ಶ್ರೀರಾಘವೇಂದ್ರ ಯತಿಸಾರ್ವಭೌಮರೇ, **ಯೇನ** = ಯಾವ ಕಾರಣದಿಂದ, **ತ್ವದ್ವಾಕ್ಯಜಾತಂ ತಾವತ್** – **ತ್ವತ್** = ನಿಮ್ಮ, **ವಾಕ್ಯಜಾತಂ ತಾವತ್** = ಗ್ರಂಥಗಳಲ್ಲಿಯ ವಾಕ್ಯ ಸಮೂಹಗಳಾದರೋ, **ಅದ್ಯ** = ಈಗ, **ಪ್ರಕರಣನಿಕರಂ** = ಪ್ರಕರಣ ಸಮೂಹಗಳಾರ್ಥವನ್ನು, **ಅನುರುಂಧೇ** = ಅನುಸರಿಸಿರುತ್ತವೆಯೋ, **ತೇನ** = ಆ ಕಾರಣದಿಂದ, **ಸ್ವಾಮಿನ್** = ಸ್ವಾಮಿನ್, **ಕವಯಃ** = ಪಂಡಿತರು, **ಏತತ್** = ಇದನ್ನು ಅಂದರೆ ಪ್ರಕರಣಾರ್ಥವು ವಾಕ್ಯಾರ್ಥಾನುಸಾರಿಯಾಗಿ ಇರಬೇಕೆಂಬ ಶ್ರೀವೇದವ್ಯಾಸರ ತತ್ತ್ವೋಕ್ತಿಯನ್ನು, **ಕಥಮಿವ** = ಅದೆಂತು, **ಪ್ರತೀಯುಃ** = ಪ್ರಮಾಣತ್ವೇನ ತಿಳಿಯಬಲ್ಲರು ?

**ತಾತ್ಪರ್ಯಾರ್ಥ** : "ಒಂದು ಪ್ರಮೇಯವನ್ನು ಪ್ರತಿಪಾದಿಸುವ ವಾಕ್ಯರೂಪವಾದ ಸಮಸ್ತ ಪ್ರಕರಣವನ್ನು, ಆಕಾಂಕ್ಷಾದಿ ಸಹಿತವಾದ ಪದಗಳ ಸಮೂಹವೆನಿಸುವ ವಾಕ್ಯಗಳಿಗೆ ಅನುಗುಣವಾಗಿ ಅರ್ಥೈಸಬೇಕು. ಅಂದರೆ ಪ್ರಕರಣದ ಅರ್ಥವನ್ನು ವಾಕ್ಯಾನುಗುಣವಾಗಿ ಹೊಂದಿಸಿ ತಿಳಿಯಬೇಕು" ಎಂದು ಪುರಾತನರಾದ, ವೇದಾರ್ಥ-ನಿರ್ಣಾಯಕವಾದ ಬ್ರಹ್ಮಸೂತ್ರಗಳನ್ನು ರಚಿಸಿ ಅನಂತ ವೇದೋಪನಿಷದ್ವಾಕ್ಯಗಳ ಅರ್ಥವೈಭವವನ್ನು ಪ್ರಕಟಿಸಿದ ಶ್ರೀವೇದವ್ಯಾಸಮುನಿಗಳಿಂದ ನಿಶ್ಚಿತವಾಗಿ ಹೇಳಲ್ಪಟ್ಟಿದೆ. ನೀವಾದರೂ ಇದೇ ತತ್ತ್ವವನ್ನು ಅನುಸರಿಸಿರುವವರಾಗಿದ್ದೀರಿ. ಆದರೆ ಭೋ ಸ್ವಾಮಿನ್, ರಾಘವೇಂದ್ರವ್ರತಿಚಂದ್ರರೇ ! ನಿಮ್ಮಿಂದ ರಚಿತವಾದ ವಾಕ್ಯಸಮೂಹವೆಲ್ಲ ಪ್ರಕರಣ ಸಮೂಹವನ್ನೇ ಅನುಸರಿಸಿ ಇರುವುದರಿಂದ ನೀವು ಶ್ರೀವೇದವ್ಯಾಸರ ಮೇಲಿನ ಉಕ್ತಿಗೆ ವಿರುದ್ಧವಾಗಿ ನಡೆದಂತೆ ತೋರುತ್ತದೆ. ಹೀಗಾಗಿ ವಾಕ್ಯಾನುಗುಣವಾಗಿ ಪ್ರಕರಣದ ಅರ್ಥವನ್ನು ಹೇಳಬೇಕೋ ಅಥವಾ ಪ್ರಕರಣಕ್ಕನುಗುಣವಾಗಿ ವಾಕ್ಯಾರ್ಥವನ್ನು ಹೇಳಬೇಕೋ ಎಂಬ ಸಂಶಯ ಬರುವುದರಿಂದ ಪಂಡಿತರು ವಾಕ್ಯಾನುಗುಣವಾಗಿ ಪ್ರಕರಣದ ಅರ್ಥವನ್ನು ಹೇಳಬೇಕೆಂಬ ಶ್ರೀವೇದವ್ಯಾಸರ ತತ್ತ್ವವನ್ನು ನಿಮ್ಮ ವಾಕ್ಯಸಮೂಹರೂಪ ವ್ಯಾಖ್ಯಾನಗಳ ಸಹಾಯವಿಲ್ಲದೇ ಹೇಗೆ ತಿಳಿಯಬಲ್ಲರು ! ದಶಪ್ರಕರಣಗಳಿಗೆ ನೀವು ಬರೆದಿರುವ ವ್ಯಾಖ್ಯಾನಗಳನ್ನು ಓದಿದಾಗಲೇ ಈ ತತ್ತ್ವವು ತಿಳಿಯುವದು.

**ವಿವರಣೆ** : ಈ ಶ್ಲೋಕದಲ್ಲಿ 'ವಾಕ್ಯ' ಮತ್ತು 'ಪ್ರಕರಣ' ಈ ಶಬ್ದಗಳನ್ನು ಸ್ವಾರಸ್ಯಪೂರ್ಣವಾಗಿ ಬಳಸಲಾಗಿದೆ. 'ವಾಕ್ಯ' ಮತ್ತು 'ಪ್ರಕರಣ'ಗಳೆಂದರೇನು ?

– **‘ಆಕಾಂಕ್ಷಾಯೋಗ್ಯತಾಸನ್ನಿಧಿಮತ್ಪದಸಮುದಾಯಃ ವಾಕ್ಯಂ’** ಎಂದಂತೆ ಆಕಾಂಕ್ಷಾ ಯೋಗ್ಯತಾ ಮತ್ತು ಸನ್ನಿಧಿ ಇವುಗಳಿಂದ ಕೂಡಿರುವ ಪದಗಳ ಸಮುದಾಯಕ್ಕೆ ವಾಕ್ಯವೆಂದು ಹೆಸರು.

‘ಪ್ರಕರಣಂ’ ಎನ್ನುವುದಕ್ಕೆ ಅನೇಕ ಅರ್ಥಗಳಿದ್ದು ಅವುಗಳಲ್ಲಿ ಮುಖ್ಯವಾದವು-ಗಳು ಕೆಳಗಿನಂತಿವೆ –

೧. ಪ್ರಕರಣಂ ಅಂದರೆ **ಅಂಗವಾಕ್ಯಸಾಪೇಕ್ಷಂ ಪ್ರಧಾನವಾಕ್ಯಂ**–ಅಂಗವಾಕ್ಯ-ಸಾಪೇಕ್ಷವಾದ ಪ್ರಧಾನವಾಕ್ಯವು ಎಂದರ್ಥ. ಪ್ರಧಾನವಾಕ್ಯರೂಪವಾದ ಪ್ರಕರಣದ ಅರ್ಥವಾಗಬೇಕಾದರೆ ಮೊದಲು ಅಂಗಭೂತವಾದ ವಾಕ್ಯಗಳ ಅರ್ಥವಾಗಬೇಕು. ಈ ಕಾರಣದಿಂದ ಪ್ರಕರಣವು ವಾಕ್ಯಾರ್ಥವನ್ನು ಅವಲಂಬಿಸಿಕೊಂಡಿರುತ್ತದೆ. ಆದ್ದರಿಂದಲೇ **ನೂನಂ ವಾಕ್ಯಾನುರೋಧಿ ಪ್ರಕರಣಮಖಿಲಂ** ಎಂದು ಈ ಶ್ಲೋಕದಲ್ಲಿ ಹೇಳಲಾಗಿದೆ.

‘ಪ್ರಕರಣಂ’ ಎನ್ನುವುದಕ್ಕೆ ಇನ್ನೂ ಮೂರು ಅರ್ಥಗಳಿವೆ.

೨. **ಏಕಾರ್ಥಪ್ರತಿಪಾದಕಗ್ರಂಥಾಂಶಃ** ಅಂದರೆ ಒಂದು ಗ್ರಂಥದಲ್ಲಿ ಪ್ರತಿಪಾದಿಸ-ಲ್ಪಡುವ ಅನೇಕ ವಿಷಯಗಳ ಪೈಕಿ ಯಾವುದೋ ಒಂದು ವಿಷಯವನ್ನು ಪ್ರತಿಪಾದಿಸುವ ಆ ಗ್ರಂಥದ ಭಾಗಕ್ಕೆ ಪ್ರಕರಣವೆಂದು ಹೆಸರು. ಅಥವಾ ಒಂದು ಗ್ರಂಥದ ಮುಖ್ಯಾರ್ಥವನ್ನು ತಿಳಿಸುವ ಆ ಗ್ರಂಥದ ಒಂದು ಭಾಗಕ್ಕೂ ಪ್ರಕರಣವೆಂದು ಹೆಸರು. ಇಲ್ಲಿ ಪ್ರಕರಣವು ಮೂಲಗ್ರಂಥದ ಒಂದು ಭಾಗವಾಗಿರುತ್ತದೆ ಮತ್ತು ಮೂಲಗ್ರಂಥದಲ್ಲಿಯ ಒಂದು ವಿಷಯದ ವ್ಯಾಖ್ಯಾನರೂಪವಾಗಿರುತ್ತದೆ.

೩. **ಶಾಸ್ತ್ರಸಿದ್ಧಾಂತಪ್ರತಿಪಾದಕೋ ಗ್ರಂಥಃ** ಅಂದರೆ ಒಂದು ಶಾಸ್ತ್ರದ ಸಿದ್ಧಾಂತವನ್ನು ಪ್ರತಿಪಾದಿಸುವ ಪ್ರತ್ಯೇಕ ಗ್ರಂಥಕ್ಕೆ ಪ್ರಕರಣವೆನ್ನುವರು. ಇಲ್ಲಿ ಪ್ರಕರಣ ಗ್ರಂಥವು ಶಾಸ್ತ್ರಸಿದ್ಧಾಂತದ ವ್ಯಾಖ್ಯಾನರೂಪವಾಗಿರುತ್ತದೆ.

೪. **ಶಾಸ್ತ್ರೈಕದೇಶಸಂಬದ್ಧಂ ಶಾಸ್ತ್ರಕಾರ್ಯಾಂತರೇ ಸ್ಥಿತಮ್ । .......**

ಶಾಸ್ತ್ರದಲ್ಲಿ ಹೇಳಿದ ಅನೇಕ ವಿಷಯಗಳ ಪೈಕಿ ಯಾವುದೋ ಒಂದು ವಿಷಯವನ್ನು ಪ್ರತಿಪಾದಿಸುವ **ಪ್ರತ್ಯೇಕ ಗ್ರಂಥಕ್ಕೂ** ಪ್ರಕರಣವೆಂದು ಹೆಸರು. ಪ್ರಕರಣವು ಶಾಸ್ತ್ರದಲ್ಲಿ ಹೇಳಿದ ಯಾವುದೋ ಒಂದು ವಿಷಯದ ವ್ಯಾಖ್ಯಾನರೂಪವಾಗಿರುತ್ತದೆ.

ಪ್ರಕರಣವು ಏಕಾರ್ಥಪ್ರತಿಪಾದಕ ಗ್ರಂಥಾಂಶವಾಗಿರಲಿ, ಶಾಸ್ತ್ರಸಿದ್ಧಾಂತ ಪ್ರತಿಪಾದಕ ಗ್ರಂಥವಾಗಿರಲಿ ಅಥವಾ ಶಾಸ್ತ್ರೈಕದೇಶಪ್ರತಿಪಾದಕ ಗ್ರಂಥವಾಗಿರಲಿ ಏನಿದ್ದರೂ ಅದು ಅರ್ಥಬೋಧಕವಾಗಬೇಕಾದರೆ ತದ್ಗತ ವಾಕ್ಯಾರ್ಥವನ್ನು ಅಥವಾ ಶಾಸ್ತ್ರಗತ ವಾಕ್ಯಾರ್ಥವನ್ನು ಅನುಸರಿಸಿಯೇ ಇರಬೇಕಾಗುವದು. ಆದ್ದರಿಂದಲೇ ಈ

ಶ್ಲೋಕದಲ್ಲಿ ನೂನಂ ವಾಕ್ಯಾನುರೋಧಿ ಪ್ರಕರಣಮಖಿಲಂ ಎಂದು ಹೇಳಲಾಗಿದೆ. ಈ ರೀತಿ ಪ್ರಕರಣಕ್ಕಿಂತ ವಾಕ್ಯದ ಪ್ರಾಬಲ್ಯವನ್ನು ತಿಳಿಸುವ ಪ್ರಮಾಣ ವಾಕ್ಯಗಳು ಹೀಗಿವೆ –

೧. **ಶ್ರುತಿರ್ಲಿಂಗಂ ಸಮಾಖ್ಯಾ ಚ ವಾಕ್ಯಂ ಪ್ರಕರಣಂ ತಥಾ ।**
**ಪೂರ್ವಂ ಪೂರ್ವಂ ಬಲೀಯಃ ಸ್ಯಾದೇವಮಾಗಮನಿರ್ಣಯೇ ॥**

೨. **ಶ್ರುತಿಲಿಂಗವಾಕ್ಯಪ್ರಕರಣಸ್ಥಾನಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯ-ಮರ್ಥವಿಪ್ರಕರ್ಷಾತ್ ॥** – *ಜೈಮಿನೀಯ ಮೀಮಾಂಸಾಸೂತ್ರ ೩-೩-೭-೧೪.*

ವೇದಾರ್ಥವನ್ನು ನಿರ್ಣಯಿಸುವಾಗ ಶ್ರುತಿ, ಲಿಂಗ, ಸಮಾಖ್ಯಾ, ವಾಕ್ಯ ಮತ್ತು ಪ್ರಕರಣ ಎಂಬ ವೇದಾರ್ಥನಿರ್ಣಾಯಕ ಸಾಧನಗಳಲ್ಲಿ ಹಿಂದು ಹಿಂದಿನದು ಮುಂದಿನದಕ್ಕಿಂತ ಪ್ರಬಲವಾಗಿರುತ್ತದೆ ಎಂದು ಮೇಲಿನ ಪ್ರಮಾಣ ವಾಕ್ಯಗಳಿಂದ ತಿಳಿಯುವದು.

ಪ್ರಕರಣಗ್ರಂಥವು ಯಾವಾಗಲೂ ಪ್ರಧಾನವಾಕ್ಯವನ್ನು ಅಥವಾ ಶಾಸ್ತ್ರವಿಷಯ-ವನ್ನು ಅನುಸರಿಸಿ ಇರುವದು. ಇದು ನಿಶ್ಚಿತವಾದ ವಿಷಯ. ಇದು ತಿಳಿಯಬೇಕಾದರೆ ಪ್ರಕರಣಗ್ರಂಥಗಳನ್ನು ಅನುಸರಿಸಿ ಶ್ರೀರಾಘವೇಂದ್ರತೀರ್ಥರು ಬರೆದಿರುವ ವಾಕ್ಯಸಮೂಹ ರೂಪವಾದ ವ್ಯಾಖ್ಯಾನಗ್ರಂಥಗಳನ್ನು ಅಂದರೆ ಪ್ರಕರಣಟೀಕಾಟಿಪ್ಪಣಿಗ್ರಂಥಗಳನ್ನು ನೋಡಬೇಕಾಗುವದು. ಶ್ರೀರಾಘವೇಂದ್ರರ ವ್ಯಾಖ್ಯಾನ ಗ್ರಂಥಗಳಲ್ಲಿಯ ವಾಕ್ಯಗಳು ಪ್ರಕರಣಗ್ರಂಥಗಳನ್ನು ಅನುಸರಿಸಿ ಇರುವವು. ಇವುಗಳ ಸಹಾಯವಿಲ್ಲದೇ ಪಂಡಿತರು ಶಾಸ್ತ್ರವಿಷಯವನ್ನು ಅನುಸರಿಸಿ ಇರುವ ಪ್ರಕರಣ ಗ್ರಂಥಗಳ ಅರ್ಥವನ್ನು ಹೇಗೆ ತಿಳಿಯಬಲ್ಲರು ? ಆದ್ದರಿಂದ ಶ್ರೀರಾಘವೇಂದ್ರವ್ರತೀಂದ್ರರು ದಶಪ್ರಕರಣಗಳ ಟೀಕಾಗಳಿಗೆ ಬರೆದ ವ್ಯಾಖ್ಯಾನಗಳ ಅಧ್ಯಯನ ಮಾಡಿದಾಗಲೇ ಪ್ರಕರಣಗಳ ಅರ್ಥವಾಗುವದು.

ಈ ವಿಷಯವನ್ನು ಸೂತ್ರರೂಪದಲ್ಲಿ ಹೀಗೆ ಬರೆಯಬಹುದು – ಸಿದ್ಧಾಂತ ವಾಕ್ಯಗಳು ಅಥವಾ ತತ್ತ್ವವನ್ನು ಪ್ರತಿಪಾದಿಸುವ ವಾಕ್ಯಗಳು ← ಶ್ರೀಮದಾಚಾರ್ಯರ ಪ್ರಕರಣಗ್ರಂಥಗಳು ಮತ್ತು ಇವುಗಳ ಟೀಕಾಗ್ರಂಥಗಳು ← ಶ್ರೀರಾಘವೇಂದ್ರರು ಬರೆದ ಟಿಪ್ಪಣೀ ಗ್ರಂಥಗಳಲ್ಲಿಯ ವಾಕ್ಯಸಮೂಹ. ಶ್ರೀರಾಘವೇಂದ್ರರ ವಾಕ್ಯಸಮೂಹವು ಎಂದರೆ ಟಿಪ್ಪಣೀ ಗ್ರಂಥಗಳೆಂದು ಅರ್ಥಮಾಡಿ ಇವು ಪ್ರಕರಣವನ್ನು ಅಂದರೆ ಶ್ರೀಮದಾಚಾರ್ಯರ ದಶಪ್ರಕರಣಗಳೆಂಬ ಹತ್ತು ಪ್ರಕರಣ ಗ್ರಂಥಗಳನ್ನು ಅನುಸರಿಸಿ-ಕೊಂಡಿರುತ್ತವೆ ಎಂದು ತಿಳಿಯಬೇಕು. ಇಲ್ಲಿ ಪ್ರಕರಣ ಶಬ್ದಕ್ಕೆ ಮೀಮಾಂಸಕರಿಗೆ ಅಭಿಪ್ರೇತವಾದ ಪ್ರಕರಣವೆಂದು ಅರ್ಥ ಮಾಡದೇ ಶ್ರೀಮದಾಚಾರ್ಯರ 'ದಶಪ್ರಕರಣ-ಗಳು' ಮತ್ತು ಇವುಗಳ ಮೇಲಿನ **ಟೀಕಾಗ್ರಂಥಗಳೆಂತಲೂ**, ವಾಕ್ಯವೆಂಬ ಶಬ್ದಕ್ಕೆ ಮೀಮಾಂಸಕರಿಗೆ ಅಭಿಪ್ರೇತವಾದ ವಾಕ್ಯವೆಂದು ಅರ್ಥಮಾಡದೇ ಶ್ರೀಗುರುಸಾರ್ವಭೌಮರ **ಟಿಪ್ಪಣೀರೂಪವಾದ ವಾಕ್ಯಗಳು** ಎಂದೂ ಅರ್ಥವನ್ನು ಹೇಳಬೇಕು.

**ಗುಣಪ್ರಕಾಶ :** ಶ್ರೀಮದಾಚಾರ್ಯರ ದಶಪ್ರಕರಣಗಳ ಮೇಲೆ ಶ್ರೀಜಯತೀರ್ಥರು ಬರೆದ ಟೀಕಾಗ್ರಂಥಗಳಿಗೆ ಟಿಪ್ಪಣಿಗಳನ್ನು ರಚಿಸಿದ ಮಹಾನುಭಾವರು ಶ್ರೀರಾಯರು ಎಂದು ಇಲ್ಲಿ ಶ್ರೀರಾಯರ ಸ್ತವನವಿದೆ.

ಪ್ರಕಟಿತವಿಭವಾನಂತವೇದಾಂತವಾಚಾ ಮತ್ತು ವಾಚಂ(ಚಾಂ)ಯಮೇನ ಎಂಬ ಎರಡು ವಿಶೇಷಣಗಳು ಮೂಲಗುರುಗಳಾದ ಶ್ರೀವೇದವ್ಯಾಸರ ಸ್ತವನಪರವಾಗಿವೆ. ಅಪರಿಮಿತವಾದ ವೇದ ಮತ್ತು ಉಪನಿಷತ್ತುಗಳ ಅರ್ಥನಿರ್ಣಾಯಕವಾದ ಬ್ರಹ್ಮಸೂತ್ರ-ಗಳನ್ನು ರಚಿಸಿದವರು ಮತ್ತು ಮೌನಿ ಅಥವಾ ವಾಙ್ಮಯಪ್ರಪಂಚಕ್ಕೆ ನಿಯಾಮಕರು ಎಂದು ಶ್ರೀವೇದವ್ಯಾಸರ ವರ್ಣನೆ ಬರುತ್ತದೆ.

ಸ್ವಾಮಿನ್ ಮತ್ತು ಶ್ರೀರಾಘವೇಂದ್ರವ್ರತೀಂದೋ ಎಂಬೆರಡು ವಿಶೇಷಣಗಳಿಂದ ಶ್ರೀರಾಯರನ್ನು ಪರಮಹಂಸರೆಂದೂ, ಯಮನಿಯಮಾದಿ ವ್ರತಸ್ಥರೆಂದೂ ವರ್ಣಿಸಲಾಗಿದೆ.

೩೩. **ಅವತಾರಿಕಾ :** ಶ್ರೀವ್ಯಾಸರಾಜರು ರಚಿಸಿದ ತರ್ಕತಾಂಡವ ಎಂಬ ಗ್ರಂಥಕ್ಕೆ ಅದ್ಭುತವಾದ ವ್ಯಾಖ್ಯಾನವನ್ನು ರಚಿಸಿದವರು ಶ್ರೀರಾಘವೇಂದ್ರತೀರ್ಥರು ಎಂದು ಈ ಶ್ಲೋಕದಲ್ಲಿ ವರ್ಣಿಸಲಾಗಿದೆ.

**ವಿಖ್ಯಾತಶ್ರೀಸುಧೀಂದ್ರವ್ರತಿಸುತ ಭವತಾ ಸಾಧುಗೀತೇ ಸುತರ್ಕೇ**
**ಸದ್ಯಃ ಪ್ರತ್ಯರ್ಥಿಹೃದ್ಯೇ ಮುನಿಮಣಿರಚಿತೇ ತಾಂಡವೇ ಯೋಜಿತಾರ್ಥೇ ।**
**ಪ್ರತ್ಯಾಖ್ಯಾತಪ್ರಕಾಶಸ್ಸಮಜನಿ ಭುವನೇ ಹಂತ ಚಿಂತಾಮಣಿಸ್ತ್ವಂ**
**ಬ್ರೂಹಿ ಶ್ರೀರಾಘವೇಂದ್ರವ್ರತಿವಿಬುಧಮಣೇ ಕಸ್ತ್ವದನ್ಯೋ ವದಾನ್ಯಃ ॥೩೩॥**

**ಅನ್ವಯಾರ್ಥ :** **ವಿಖ್ಯಾತಶ್ರೀಸುಧೀಂದ್ರವ್ರತಿಸುತ** – **ವಿಖ್ಯಾತ** = ಪ್ರಖ್ಯಾತರಾದ, **ಶ್ರೀಸುಧೀಂದ್ರವ್ರತಿ** = ಶ್ರೀಸುಧೀಂದ್ರತೀರ್ಥ ಯತಿಗಳ, **ಸುತ** = ಕರಕಮಲಸಂಜಾತರಾದ, **ಶ್ರೀರಾಘವೇಂದ್ರವ್ರತಿವಿಬುಧಮಣೇ** = ಶ್ರೀರಾಘವೇಂದ್ರತೀರ್ಥರೆಂಬ ವ್ರತಿವಿಬುಧ-ಮಣಿಗಳೇ ! **ಮುನಿಮಣಿರಚಿತೇ** – **ಮುನಿಮಣಿ** = ಮುನಿಶ್ರೇಷ್ಠರಾದ ಶ್ರೀವ್ಯಾಸರಾಜ-ರಿಂದ, **ರಚಿತೇ** = ರಚಿಸಲ್ಪಟ್ಟ, **ಸಾಧುಗೀತೇ** = ಸಜ್ಜನವಿದ್ವದಗ್ರಣಿಗಳಿಂದ ಬಹು ಪ್ರಶಂಸಿಸಲ್ಪಟ್ಟ, **ಸುತರ್ಕೇ** = ಶ್ರೇಷ್ಠವಾದ ಹಾಗೂ ಅಪ್ರತಿಹತವಾದ ಯುಕ್ತಿಗಳಿಂದ ಕೂಡಿದ, **ತಾಂಡವೇ** = ತರ್ಕತಾಂಡವವೆಂಬ ಗ್ರಂಥವು, **ಸದ್ಯಃ ಪ್ರತ್ಯರ್ಥಿಹೃದ್ಯೇ** = ಈಗ ಪ್ರತಿಪಕ್ಷದ ವಿದ್ವಾಂಸರಿಗೂ ಹೃದ್ಯವಾಗುವಂತೆ, **ಭವತಾ** = ನಿಮ್ಮಿಂದ, **ಯೋಜಿತಾರ್ಥೇ (ಸತಿ)** = ಅರ್ಥಸಂಯೋಜನೆಯೊಂದಿಗೆ ವಿವರಿಸಲ್ಪಡಲಾಗಿ, **ಭುವನೇ** = ಲೋಕದಲ್ಲಿ, **ಚಿಂತಾಮಣಿಃ** = ಚಿಂತಾಮಣಿಯು ಕೂಡ (ಮಣಿನಾಮಕ ಅದ್ವೈತಿಗ್ರಂಥವು), **ಪ್ರತ್ಯಾಖ್ಯಾತಪ್ರಕಾಶಃ** – **ಪ್ರತ್ಯಾಖ್ಯಾತ** = ತಿರಸ್ಕರಿಸಲ್ಪಟ್ಟ, ಪ್ರಕಾಶಃ = ಪ್ರಕಾಶವುಳ್ಳದ್ದು

(ಕಳೆಗುಂದಿದಂಥದು), ಸಮಜನಿ = ಆಯಿತು, ಹಂತ = ಹರ್ಷಾಶ್ಚರ್ಯವು ! ಶ್ರೀರಾಘವೇಂದ್ರ = ಶ್ರೀರಾಘವೇಂದ್ರಗುರುಸಾರ್ವಭೌಮರೇ ! ತ್ವದನ್ಯಃ = ಇಂಥ ಮಹತ್ಕಾರ್ಯವನ್ನು ಮಾಡಿದ ನಿಮ್ಮನ್ನು ಬಿಟ್ಟು ಬೇರೆ, ವದಾನ್ಯಃ = ಹೆಚ್ಚಿನ ದಾನಶೂರರು, ಕಃ = ಯಾರಿರುವರು ? ಬ್ರೂಹಿ = ನೀವೇ ಹೇಳಿರಿ.

**ತಾತ್ಪರ್ಯಾರ್ಥ** : ಈ ಶ್ಲೋಕದ ಅರ್ಥವು ಸ್ಪಷ್ಟವಾಗುವದಕ್ಕೆ ಅನುಕೂಲವಾಗುವ ಕೆಲವು ವಿಚಾರಗಳನ್ನು ಮೊದಲು ತಿಳಿದುಕೊಳ್ಳುವದು ಅವಶ್ಯವಾಗಿರುವದರಿಂದ ಅವುಗಳನ್ನು ಕೆಳಗೆ ಕೊಡಲಾಗಿದೆ. ಶ್ರೀವ್ಯಾಸರಾಜರು ತಾತ್ಪರ್ಯಚಂದ್ರಿಕಾ, ತರ್ಕತಾಂಡವ ಮತ್ತು ನ್ಯಾಯಾಮೃತ ಎಂಬ ಹೆಸರಿನ ಮೂರು ಶ್ರೇಷ್ಠ ಉದ್ಗ್ರಂಥಗಳನ್ನು ರಚಿಸಿದ ವಿಷಯವು ಗುರುಗುಣಸ್ತವನದ ೭ನೆಯ (ಶ್ರೀವಸುಧೇಂದ್ರತೀರ್ಥರ ಪ್ರಕಾರ ೭ನೆಯ) ಶ್ಲೋಕದಲ್ಲಿ ವರ್ಣಿತವಾಗಿದೆ. ಈ ಮೂರು ಗ್ರಂಥಗಳಲ್ಲಿ ಒಂದಾದ ತರ್ಕತಾಂಡವವು ಗಂಗೇಶೋಪಾಧ್ಯಾಯರೆಂಬ ಅದ್ವೈತಿ ಪಂಡಿತರಿಂದ ರಚಿಸಲ್ಪಟ್ಟ 'ಮಣಿ' ಎಂಬ ಗ್ರಂಥದ ಖಂಡನರೂಪವಾದ ಗ್ರಂಥ. ಈ 'ಮಣಿ' ಗ್ರಂಥಕ್ಕೆ ಕೃಷ್ಣೋಪಾಧ್ಯಾಯರು 'ದೀಧಿತಿ' ಎಂಬ ವ್ಯಾಖ್ಯಾನವನ್ನು ರಚಿಸಿದರು. ಈ 'ದೀಧಿತಿ'ಗೆ ಗದಾಧರ ಭಟ್ಟಾಚಾರ್ಯ ಎನ್ನುವವರು 'ಪ್ರಕಾಶ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಈ ರೀತಿ 'ಮಣಿ', 'ದೀಧಿತಿ' ಮತ್ತು 'ಪ್ರಕಾಶ' ಎಂಬ ಮೂರು ಗ್ರಂಥಗಳು ಅದ್ವೈತಮತವನ್ನು ಪ್ರತಿಪಾದಿಸುವ ಕೃತಿಗಳಾಗಿವೆ. ಶ್ರೀವ್ಯಾಸರಾಜರು 'ಮಣಿ' ಗ್ರಂಥವನ್ನು ಖಂಡಿಸುವ ತರ್ಕತಾಂಡವವನ್ನು ರಚಿಸಿದರು. ಮುಂದೆ ಶ್ರೀರಾಘವೇಂದ್ರಗುರುಸಾರ್ವಭೌಮರು ತರ್ಕತಾಂಡವಕ್ಕೆ ರಚಿಸಿದ ವ್ಯಾಖ್ಯಾನದಿಂದ 'ಮಣಿ', 'ದೀಧಿತಿ', ಮತ್ತು 'ಪ್ರಕಾಶ' ಗ್ರಂಥಗಳು ಹತಪ್ರಭವಾದವು (ಕಳೆಗುಂದಿದವು).

ಈ ಶ್ಲೋಕದಲ್ಲಿ ಒಬ್ಬ ರಾಜನರ್ತಕಿಯ ಮನೋಹಾರಿಯಾದ ನೃತ್ಯವಿಲಾಸದ ಪ್ರಸ್ತಾಪ ಬರುತ್ತದೆ. ಶ್ರೀವಾದೀಂದ್ರತೀರ್ಥರ ಈ ಕಲ್ಪನೆಗೆ ಸೋಮನಾಥಕವಿಯ ಶ್ರೀವ್ಯಾಸಯೋಗಿಚರಿತೆಯಲ್ಲಿ ಬರುವ ಒಂದು ಶ್ಲೋಕವು ಪ್ರೇರಕವಾಗಿರಬಹುದೆಂದು ತೋರುತ್ತದೆ. ಅಲ್ಲಿ ತರ್ಕತಾಂಡವ ಗ್ರಂಥವನ್ನು ವರ್ಣಿಸುತ್ತ ಕವಿಯು ಹೇಳುತ್ತಾನೆ –

**ವ್ಯಾಸಯೋಗಿಲಸದುಕ್ತಿನರ್ತಕೀ ಕಲ್ಪಿತಂ ಕಮನತರ್ಕತಾಂಡವಮ್ ।**
**ಪಶ್ಯತಸ್ಸದಸಿ ಕಸ್ಯ ಮಾನಸೇಽತೃಪ್ತಿರಾದಿತ ಪದಂ ವಿಪಶ್ಚಿತಃ ॥**

– ವಿದ್ವತ್ಸಭೆಯಲ್ಲಿ ಶ್ರೀವ್ಯಾಸಯೋಗಿಗಳ ವಿಲಸಿತವಾಕ್‌ನರ್ತಕಿಯು ಮಾಡುತ್ತಿರುವ ಮನೋಹರವಾದ ನೃತ್ಯವಿಲಾಸವನ್ನು ನೋಡುತ್ತಿರುವ ಆ ಸಭೆಯಲ್ಲಿರುವ ಯಾವ ರಸಿಕ ವಿದ್ವಾಂಸನ ಮನದಲ್ಲಿ ಅತೃಪ್ತಿಗೆ ಅವಕಾಶವಿದೆ ? (ವಾಕ್‌ನರ್ತಕಿಯ ನೃತ್ಯವಿಲಾಸವನ್ನು ಕಂಡು ಎಲ್ಲ ವಿದ್ವಜ್ಜನರ ಮನದಲ್ಲಿ ಉಲ್ಲಾಸದ ಉದ್ರೇಕವಾಯಿತೆಂದು ಭಾವ.)

ಹೀಗೆ ಶ್ರೀವ್ಯಾಸರಾಜರ ಉಕ್ತಿಯನ್ನು ಒಬ್ಬ ರಾಜನರ್ತಕಿಗೂ ಶ್ರೀವ್ಯಾಸರಾಜವಿರಚಿತ ತರ್ಕತಾಂಡವ ಎಂಬ ಗ್ರಂಥವನ್ನು ಆ ರಾಜನರ್ತಕಿಯು ಮಾಡುವ ವಿವಿಧಲಾಸ್ಯಯುತವಾದ ನರ್ತನಕ್ಕೂ ಹೋಲಿಸಿ ವರ್ಣಿಸಿದ್ದು ಕಂಡುಬರುತ್ತದೆ. ಇಷ್ಟು ವಿಷಯಗಳನ್ನು ಗಮನ-ದಲ್ಲಿಟ್ಟುಕೊಂಡು ಪ್ರಸ್ತುತವಾದ ಶ್ಲೋಕಕ್ಕೆ ಅರ್ಥವನ್ನು ಬರೆಯಲಾಗುತ್ತದೆ.

ರಾಜಾಸ್ಥಾನದಲ್ಲಿ ಗಾಯಕರಿಂದ ಸುಶ್ರಾವ್ಯವಾದ ಗಾನವು ಇಂಪಾಗಿ ಹಾಡಲ್ಪಡು-ತ್ತಿರುವಾಗ, ಆ ಶೃಂಗಾರ ಸಭೆಯಲ್ಲಿದ್ದ ರಸಿಕಪುರುಷರಿಂದ ಅಪೇಕ್ಷಣೀಯಳಾದ ವಾರಸ್ತ್ರೀಯು ತನ್ನ ಆಕರ್ಷಕವಾದ ಅಂಗಾಂಗಳ ನಾನಾವಿಧವಿಲಾಸಗಳಿಂದ ಎಲ್ಲ ಪ್ರತ್ಯರ್ಥಿಗಳಿಗೂ ಮನೋಹಾರಿಯಾಗುವಂತೆ ಸುವ್ಯವಸ್ಥಿತವಾಗಿ ನರ್ತನವನ್ನು ಮಾಡುತ್ತಿರಲು ಆ ಸ್ತ್ರೀಗೆ ರಸಿಕಪುರುಷರು ಬಹುಮಾನರೂಪವಾಗಿ ಕೊಡುವ ಬಹು ಅನರ್ಘ್ಯ ಪದಾರ್ಥಗಳ ಮುಂದೆ ರತ್ನಮಣಿಗಳೆಲ್ಲ ಹೇಗೆ ಕಳೆಗುಂದಿದಂತೆ ಆಗುವವೋ ಅದರಂತೆ ಜಗತ್ಪ್ರಸಿದ್ಧ ಶ್ರೀಸುಧೀಂದ್ರವ್ರತಿಗಳ ವರಕುಮಾರಕರೇ! ನೀವು ಸಜ್ಜನ ವಿದ್ವಾಂಸರಿಂದ ಪ್ರಶಂಸಿಸಲ್ಪಟ್ಟ ಹಾಗೂ ಶ್ರೇಷ್ಠವಾದ ಯುಕ್ತಿಗಳಿಂದ ತುಂಬಿರುವ, ಶ್ರೀವ್ಯಾಸತೀರ್ಥವಿರಚಿತ ತರ್ಕತಾಂಡವವೆಂಬ ಗ್ರಂಥಕ್ಕೆ ಪ್ರತಿವಾದಿಗಳಿಗೂ ಹೃದಯಾನಂದ-ಕಾರಿಯಾಗುವಂಥ ವ್ಯಾಖ್ಯಾನವನ್ನು ರಚಿಸಲಾಗಿ ಮಣಿನಾಮಕ ಗ್ರಂಥವು ನಿರಾಕೃತವಾದ ದೀಧಿತಿ ಮತ್ತು ಪ್ರಕಾಶವುಳ್ಳ ಗ್ರಂಥವಾಯಿತು. ('ಮಣಿ'ಯು ಪ್ರಕಾಶಹೀನವಾಗಿ ಕಳೆಗುಂದಿತು). ಮಣಿನಾಯಕ ಗ್ರಂಥವು ಎಲ್ಲರಿಂದ ನಿರಾಕೃತವಾಯಿತು.

ಈ ರೀತಿ ಎಲ್ಲ ಸಾಧುಜನರಿಂದ ಮಣಿ, ದೀಧಿತಿ ಮತ್ತು ಪ್ರಕಾಶ ಗ್ರಂಥಗಳನ್ನು ನಿರಾಕರಿಸುವ ಒಂದು **ತರ್ಕತಾಂಡವವ್ಯಾಖ್ಯಾನ ಗ್ರಂಥವು** ಅಪೇಕ್ಷಿತವಾಗಿದ್ದಿತು. ಅವರ ಅಪೇಕ್ಷೆಯನ್ನು ಪೂರೈಸಲು ಚಿಂತಾಮಣಿಯಂತೆ ಬೇಡಿದಿಷ್ಟಾರ್ಥಗಳನ್ನು ಕೊಡುವ ಶ್ರೇಷ್ಠವಾದ ಇಂಥ ವ್ಯಾಖ್ಯಾನಗ್ರಂಥವನ್ನು ರಚಿಸಿದ್ದರಿಂದ ನೀವೂ **ಚಿಂತಾಮಣಿಗಳೇ ಸರಿ!** ವ್ರತಿವಿಬುಧಮಣಿಗಳಾದ ಶ್ರೀರಾಘವೇಂದ್ರಗುರುವರ್ಯರೇ! ವಿದ್ವತ್ಪ್ರಪಂಚಕ್ಕೆ ಇಂಥ ವ್ಯಾಖ್ಯಾನರೂಪವಾದ ಚಿಂತಾಮಣಿಯನ್ನೇ ಕೊಟ್ಟಿರುವ ನಿಮಗಿಂತಲೂ ಶ್ರೇಷ್ಠರಾದ ದಾನಿಗಳು ಈ ಲೋಕದಲ್ಲಿ ಬೇರೆ ಇನ್ನಾರಿದ್ದಾರೆ? ನೀವೇ ಹೇಳಿ. ಯಾರೂ ಇಲ್ಲವೆಂದು ಭಾವ.

**ಗುಣಪ್ರಕಾಶ :** ಶ್ರೀ ವ್ಯಾಸರಾಜ ವಿರಚಿತ ತರ್ಕತಾಂಡವಕ್ಕೆ ವ್ಯಾಖ್ಯಾನ ಮಾಡಿರುವ ಶ್ರೀರಾಯರನ್ನು ಸ್ತುತಿಸಲಾಗಿದೆ. ಶ್ರೀರಾಯರು ತರ್ಕತಾಂಡವಕ್ಕೆ ವ್ಯಾಖ್ಯಾನವನ್ನು ರಚಿಸಿದ್ದರಿಂದ ಸಜ್ಜನರಿಗೆ ಆ ಗ್ರಂಥದಲ್ಲಿಯ ವಿಷಯಗಳು ಸುಲಭವಾಗಿ ತಿಳಿಯುವಂತಾಯಿತು, ಅವರಿಗೆ ಬೇಡಿದಿಷ್ಟಾರ್ಥಗಳನ್ನು ಕೊಡುವ ಒಂದು ಚಿಂತಾಮಣಿ ದೊರಕಿದಷ್ಟು ಆನಂದವಾಯಿತು. ಹೀಗೆ ಭಕ್ತರಿಗೆ ಅಭೀಷ್ಟಾರ್ಥಗಳನ್ನು ಕೊಡುವುದಿರಲಿ

ಅಭೀಷ್ಟಾರ್ಥಗಳನ್ನು ಕೊಡುವ ಚಿಂತಾಮಣಿಯನ್ನೇ ಕೊಡುವ ಶ್ರೀರಾಯರಿಗೆ ಸಮಾನರಾದ ದಾನಿಗಳಾರಿರುವರು !

ವಿಖ್ಯಾತಶ್ರೀಸುಧೀಂದ್ರವ್ರತಿಸುತ ಎಂಬಲ್ಲಿ ಶ್ರೀರಾಯರ ಗುರುಗಳಾದ ಶ್ರೀಸುಧೀಂದ್ರ-ತೀರ್ಥರನ್ನು ವಿಖ್ಯಾತರಾದ ವ್ರತಿಗಳೆಂದು ಸ್ತುತಿಸಿ ಅಂಥವರ ವರಕುಮಾರರು ಶ್ರೀರಾಯರೆಂದು ಸ್ತುತಿಸಲಾಗಿದೆ. ವ್ಯಾಧೂತಾಪದ್ಯಹೃದ್ಯಾಮಿತ .... (ಶ್ಲೋಕ ೯) ಎಂಬಲ್ಲಿ ಶ್ರೀಸುಧೀಂದ್ರತೀರ್ಥರ ಪ್ರಸಿದ್ಧಿಯನ್ನು ವರ್ಣಿಸಲಾಗಿದೆ. ಸತ್ಕುಲ ಪ್ರಸೂತಿ ಎಂಬ ಗುರುಗುಣವು ಇಲ್ಲಿ ವ್ಯಕ್ತವಾಗಿದೆ.

"ಪ್ರತ್ಯರ್ಥಿಹೃದ್ಯೇ ಮುನಿಮಣಿರಚಿತೇ ತಾಂಡವೇ" ಎಂಬಲ್ಲಿ ಶ್ರೀವ್ಯಾಸರಾಜರ ಮತ್ತು ಅವರ ತರ್ಕತಾಂಡವ ಗ್ರಂಥದ ಸ್ತುತಿ ಇದೆ. ಶ್ರೀವ್ಯಾಸರಾಜರ ವಿರಚಿತ 'ತರ್ಕತಾಂಡವ' ಎಂಬ ಶ್ರೇಷ್ಠ ಗ್ರಂಥವು ಪ್ರತಿವಾದಿಗಳಿಗೂ ಹೃದ್ಯವಾಗಿದ್ದಿತು. ಶ್ರೀವ್ಯಾಸರು ಮುನಿಮಣಿಗಳಾಗಿದ್ದಾರೆ ಎಂಬುದು ಇಲ್ಲಿಯ ಗುರುಸ್ತವನವು.

ವ್ರತಿವಿಬುಧಮಣೇ ಎಂಬುದರಿಂದ ವ್ರತಿಗಳೂ ಪಂಡಿತರೂ ಆದವರಲ್ಲಿ ಶ್ರೀರಾಯರು ಶ್ರೇಷ್ಠರು ಎಂದು ಸ್ತುತಿಸಲಾಗಿದೆ.

'ತ್ವದನ್ಯಃ ವದಾನ್ಯಃ ಕಃ' = ನಿಮ್ಮ ಹೊರತಾಗಿ ದಾನಶೌಂಡರು ಯಾರಿರುವರು ? (ಯಾರೂ ಇರುವದಿಲ್ಲ) ಇಲ್ಲಿ ಶ್ರೀರಾಯರ ದಾನಶೌಂಡತೆಯ ವರ್ಣನೆ ಇದೆ. ಕಲ್ಪವೃಕ್ಷ, ಕಾಮಧೇನುಗಳಂತಿರುವ ಶ್ರೀರಾಯರಿಗೆ ಸಮಾನರಾದ ದಾನಿಗಳು ಈ ಲೋಕದಲ್ಲಿ ಯಾರಿರುವರು ? ಮೋಕ್ಷವನ್ನೇ ಕೊಡಲು ಸಮರ್ಥರಾದ ಶ್ರೀರಾಯರು ಕಾಮಧೇನು, ಕಲ್ಪವೃಕ್ಷಗಳಿಗಿಂತಲೂ ಅಧಿಕರೆಂದು ಹೇಳಬೇಕೆ ?

೩೪. **ಅವತಾರಿಕಾ :** ಶ್ರೀವ್ಯಾಸತೀರ್ಥರ ನ್ಯಾಯಾಮೃತಗ್ರಂಥಕ್ಕೆ ವ್ಯಾಖ್ಯಾನ ಬರೆಯದಿದ್ದರೂ ಶ್ರೀರಾಘವೇಂದ್ರತೀರ್ಥರಿಗೆ ಯಾವ ಅಪಕೀರ್ತಿಯು ಬಾರದೇ ಕೀರ್ತಿಯೇ ಬಂದಿತು ಎಂದು ಈ ಶ್ಲೋಕದಲ್ಲಿ ತಿಳಿಸಲಾಗಿದೆ.

**ಪ್ರೌಢಾನೇಕಪ್ರಬಂಧಪ್ರವಚನರಚನಾಲಬ್ಧವಿಸ್ರಬ್ಧಕೀರ್ತೇ-**
**ಸ್ತೇ ಕಿಂ ನ್ಯಾಯಾಮೃತಸ್ಯಾವಿವರಣವಿಧಿನಾ ರಾಘವೇಂದ್ರಾಯಶಸ್ಸ್ಯಾತ್ ।**
**ಯದ್ರಾಜ್ಯಪ್ರತ್ಯವೇಸಾಖಿಲಭುವನಪತೇಃ ರಾಘವಸ್ಯೇವ ಕೀರ್ತಿಃ**
**ಲಬ್ಧೈವ ಪ್ರತ್ಯುತಾಲಂ ಗುರುಚರಣಕೃತಾಮೋದನಿರ್ವಾಹಜನ್ಯಾ ॥ ೩೪ ॥**

**ಅನ್ವಯಾರ್ಥ :** ರಾಘವೇಂದ್ರ = ಭೋ ಶ್ರೀರಾಘವೇಂದ್ರಯತಿಚಂದ್ರಮರೇ ! ಪ್ರೌಢಾನೇಕಪ್ರಬಂಧಪ್ರವಚನರಚನಾಲಬ್ಧವಿಸ್ರಬ್ಧಕೀರ್ತೇಃ – ಪ್ರೌಢಾನೇಕ = ಅನೇಕ

ಪ್ರೌಢವಾದ, **ಪ್ರಬಂಧ** = ಗ್ರಂಥಗಳಿಗೆ, **ಪ್ರವಚನರಚನಾ** = ವ್ಯಾಖ್ಯಾನ ಮಾಡುವುದ-ರಿಂದ, **ಲಬ್ಧ** = ಹೊಂದಲ್ಪಟ್ಟ, **ವಿಸ್ರಬ್ಧ** = ಅಪಾರವಾದ, **ಕೀರ್ತೇಃ** = ಕೀರ್ತಿಯುಳ್ಳ, **ತೇ** = ನಿಮಗೆ, **ನ್ಯಾಯಾಮೃತಸ್ಯ** = ನ್ಯಾಯಾಮೃತವೆಂಬ ಗ್ರಂಥಕ್ಕೆ, **ಅವಿವರಣವಿಧಿನಾ** = ವ್ಯಾಖ್ಯಾನ ಬರೆಯದಿರುವ ಕಾರಣದಿಂದ, **ಅಯಶಃ** = ಅಪಕೀರ್ತಿಯು, **ಸ್ಯಾತ್ ಕಿಂ** = ಉಂಟಾಗುವುದೇನು ? **ಪ್ರತ್ಯುತ** = ಅಪಕೀರ್ತಿಯು ಬಾರದೇ, **ಯದ್ರಾಜ್ಯಪ್ರಚ್ಯವೇನ** – **ಯದ್** = ಯಾವ ಕಾರಣದಿಂದ, **ರಾಜ್ಯಪ್ರಚ್ಯವೇನ** = ಭೂಮಂಡಲಾಧಿಪತ್ಯವನ್ನು ತ್ಯಜಿಸುವುದರಿಂದ, **ಅಖಿಲಭುವನಪತೇಃ** = ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಾದ, **ರಾಘುವಸ್ಯ** = ಶ್ರೀರಾಮಚಂದ್ರನಿಗೆ, **ಇವ** = (ಪಿತೃವಾಕ್ಯಪರಿಪಾಲನೆಯಿಂದ ತಂದೆಗೆ ಸಂತೋಷವುಂಟಾಗುವಂತೆ ಮಾಡಿದ್ದರಿಂದ) ಕೀರ್ತಿಯೇ ಬಂದಂತೆ, **ಗುರುಚರಣಕೃತಾ-ಮೋದನಿರ್ವಾಹಜನ್ಯಾ** – **ಗುರುಚರಣಕೃತ** = ಪರಮಗುರುಗಳಾದ ಶ್ರೀವಿಜಯೀಂದ್ರ-ತೀರ್ಥರಿಂದ ರಚಿಸಲ್ಪಟ್ಟ, **ಆಮೋದ** = ಆಮೋದವೆಂಬ ವ್ಯಾಖ್ಯಾನದ, **ನಿರ್ವಾಹ** = ಪ್ರಚಾರಸ್ಥಾಪನೆಗಳಿಂದ, **ಜನ್ಯಾ** = ಉತ್ಪನ್ನವಾದ, **ಕೀರ್ತಿಃ** = ಕೀರ್ತಿಯೇ, **ಅಲಂ** = ಚೆನ್ನಾಗಿ, **ಲಬ್ಧಾ ಏವ** = ದೊರಕಿಸಲ್ಪಟ್ಟಿರುತ್ತದೆ.

**ತಾತ್ಪರ್ಯಾರ್ಥ :** ಭೋ ಶ್ರೀರಾಘವೇಂದ್ರಯತಿವರ್ಯರೇ ! ಈಗಾಗಲೇ ಅನೇಕ ಪ್ರೌಢಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಬರೆದಿರುವುದರಿಂದ ಅಸದೃಶವಾದ ಕೀರ್ತಿಯನ್ನು ಪಡೆದಿರುವ ತಮಗೆ ಶ್ರೀವ್ಯಾಸರಾಜರ ನ್ಯಾಯಾಮೃತವೆಂಬ ಒಂದು ಗ್ರಂಥಕ್ಕೆ ವ್ಯಾಖ್ಯಾನ ಬರೆಯದಿರುವ ಮಾತ್ರಕ್ಕೆ ಅಸಾಮರ್ಥ್ಯರೂಪ ಅಪಕೀರ್ತಿಯು ಬರುವದೇನು ? ಖಂಡಿತ ಅಪಕೀರ್ತಿಯು ಬರಲಾರದು. ಏಕೆಂದರೆ ರಾಜ್ಯವನ್ನೇ ತ್ಯಜಿಸಿ ಕಾಡಿಗೆ ಹೋದ ಅಖಿಲಭುವನಾಧಿಪನಾದ ಶ್ರೀರಾಮಚಂದ್ರನು ಪಿತೃವಾಕ್ಯಪರಿಪಾಲನೆ-ಯಿಂದ ತನ್ನ ತಂದೆಗೆ ಸಂತೋಷವುಂಟಾಗುವಂತೆ ಮಾಡಿದ್ದರಿಂದ ಅವನಿಗೆ ಕೀರ್ತಿಯೇ ಬಂದಂತೆ ನಿಮ್ಮ ಪರಮಗುರುಗಳಾದ ಶ್ರೀವಿಜಯೀಂದ್ರತೀರ್ಥರು ಈಗಾಗಲೇ ನ್ಯಾಯಾಮೃತಕ್ಕೆ ಬರೆದಿರುವ ಗುರ್ವಾಮೋದ, ಮಧ್ಯಮಾಮೋದ ಮತ್ತು ಲಘ್ವಾಮೋದ ಎಂಬ ವ್ಯಾಖ್ಯಾನತ್ರಯವನ್ನು ಪಾಠಪ್ರವಚನಗಳಿಂದ ಲೋಕದಲ್ಲಿ ಚೆನ್ನಾಗಿ ಸ್ಥಾಪನೆ ಮಾಡಿ ಪ್ರಚಾರ ಮಾಡಿದ್ದರಿಂದ ನಿಮಗೆ ಕೀರ್ತಿಯೇ ಪ್ರಾಪ್ತವಾಗಿದೆ.

**ವಿವರಣೆ :** ಸದಾಕಾಲದಲ್ಲಿ ಅಖಿಲಾಂಡಕೋಟಿಬ್ರಹ್ಮಾಂಡನಾಯಕನಾಗಿರುವವನು ಅಯೋಧ್ಯೆಯನ್ನು ತ್ಯಜಿಸಿ ಹದಿನಾಲ್ಕು ವರ್ಷ ವನವಾಸಕ್ಕೆ ಹೋದನು ಎಂದು ಹೇಳುವುದು ಸಮಂಜಸವಾಗುವದೇ ? ಇಂಥವನಿಗೆ ಅಯೋಧ್ಯೆಯ ರಾಜ್ಯವನ್ನು ತ್ಯಜಿಸಿದ್ದರಿಂದ ಯಾವ ದೋಷವೂ ಬರಲಾರದು. ಪ್ರತ್ಯುತ ಪಿತೃವಾಕ್ಯಪರಿಪಾಲನೆ ಮಾಡಿ ತಂದೆಯನ್ನು ಋಣದಿಂದ ಮುಕ್ತನನ್ನಾಗಿ ಮಾಡಿದವನೆಂದು ಕೀರ್ತಿಯೇ

ಬಂದಿತು. ಅದರಂತೆ ಅನೇಕ ಪ್ರೌಢವ್ಯಾಖ್ಯಾನಗಳನ್ನು ರಚಿಸಿ ಈಗಾಗಲೇ ಪ್ರಸಿದ್ಧರಾಗಿರುವ ಶ್ರೀರಾಘವೇಂದ್ರರು ನ್ಯಾಯಾಮೃತವೆಂಬ ಒಂದು ಗ್ರಂಥಕ್ಕೆ ವ್ಯಾಖ್ಯಾನ ಮಾಡದ ಕಾರಣ ಅವರಿಗೆ ಅಸಾಮರ್ಥ್ಯರೂಪ ಅಪಕೀರ್ತಿಯು ಬರಲಾರದು. ಆದರೆ ಪರಮಗುರುಗಳು ಈಗಾಗಲೇ ಮೂರು ವ್ಯಾಖ್ಯಾನಗಳನ್ನು ರಚಿಸಿರುವಾಗ ಮತ್ತೆ ವ್ಯಾಖ್ಯಾನ ರಚಿಸಲು ಅವಕಾಶವಿಲ್ಲ ಮತ್ತು ಹಾಗೆ ರಚಿಸುವದು ಯುಕ್ತವೂ ಅಲ್ಲ ಎಂದು ತಿಳಿದು ಇದ್ದ ಆ ವ್ಯಾಖ್ಯಾನಗಳನ್ನೇ ಪ್ರಚಾರಮಾಡಿದ್ದರಿಂದ ಶ್ರೀರಾಘವೇಂದ್ರರು ಕೀರ್ತಿಯನ್ನೇ ಪಡೆದರು ಎಂದು ಈ ಶ್ಲೋಕದ ಭಾವವಾಗಿದೆ.

**ಗುಣಪ್ರಕಾಶ :** ಶ್ರೇಷ್ಠ ಗ್ರಂಥರಚನೆಯಿಂದ ಕರ್ತೃವಿಗೆ ಕೀರ್ತಿ ಬರುವದನ್ನು ಕಂಡಿದ್ದೇವೆ. ಶ್ರೀರಾಯರು ನ್ಯಾಯಾಮೃತ ವೆಂಬ ಶ್ರೀವ್ಯಾಸರಾಜರ ಗ್ರಂಥಕ್ಕೆ ವ್ಯಾಖ್ಯಾನ ಬರೆಯದಿದ್ದರೂ ಅವರು ಯಾವ ಅಪಕೀರ್ತಿಗೂ ಗುರಿಯಾಗದೇ ಕೀರ್ತಿಶಾಲಿಗಳೇ ಆದರು ಎಂಬುದನ್ನು ಶ್ರೀರಾಮಚಂದ್ರನು ಪಿತೃವಾಕ್ಯಪರಿಪಾಲನೆಗಾಗಿ ವನವಾಸಕ್ಕೆ ಹೋದ ದೃಷ್ಟಾಂತದಿಂದ ಸಮರ್ಥಿಸಿದ್ದಾರೆ.

'**ಪ್ರೌಢಾನೇಕಪ್ರಬಂಧಪ್ರವಚನರಚನಾಲಬ್ಧವಿಸ್ರಬ್ಧಕೀರ್ತೇಃ**' ಎಂಬಲ್ಲಿ ಶ್ರೀರಾಯರು ಅನೇಕ ಪ್ರೌಢಗ್ರಂಥಗಳ ಕರ್ತೃಗಳೆಂದೂ ಹಾಗೂ ಗ್ರಂಥಕರಣದಿಂದ ಜಗತ್ತಿನಲ್ಲಿ ಪ್ರಸಿದ್ಧರಾದವರೆಂದೂ ಸ್ತುತಿಸಲಾಗಿದೆ.

ನ್ಯಾಯಾಮೃತಕ್ಕೆ ಶ್ರೀರಾಯರ ಪರಮಗುರುಗಳಾದ ಶ್ರೀವಿಜಯೀಂದ್ರತೀರ್ಥರು ಲಘ್ವಾಮೋದ, ಮಧ್ಯಮಾಮೋದ ಮತ್ತು ಗುರ್ವಾಮೋದ ಎಂಬ ಮೂರು ವ್ಯಾಖ್ಯಾನಗಳನ್ನು ಈಗಾಗಲೇ ರಚಿಸಿದ್ದರಿಂದ ಮತ್ತೊಂದು ವ್ಯಾಖ್ಯಾನವನ್ನು ರಚಿಸುವ ಅವಶ್ಯಕತೆ ಇರಲಿಲ್ಲ. ಅಲ್ಲದೇ ಪರಮ ಗುರುಗಳೇ ಎಲ್ಲವನ್ನೂ ವ್ಯಾಖ್ಯಾನಿಸಿರುವಾಗ ತಾವು ಪ್ರತ್ಯೇಕ ವ್ಯಾಖ್ಯಾನಿಸುವದು ಯುಕ್ತವಲ್ಲ ಎಂದು ಮುಂತಾಗಿ ವಿಚಾರಿಸಿ ಶ್ರೀರಾಯರು ನ್ಯಾಯಾಮೃತಕ್ಕೆ ವ್ಯಾಖ್ಯಾನವನ್ನು ಬರೆಯಲಿಲ್ಲ. ಇದರಿಂದ ಶ್ರೀರಾಯರ ಗುರುಭಕ್ತಿ ಮತ್ತು ವಿನಯಗುಣಗಳು ಪ್ರಕಾಶಿತವಾಗುವವು.

ಒಂದು ಗ್ರಂಥಕ್ಕೆ ಗುರುಗಳು ವ್ಯಾಖ್ಯಾನಿಸಿರುವಾಗ ಅದರ ಮೇಲೆ ಮತ್ತೆ ವ್ಯಾಖ್ಯಾನ ಬರೆಯಬಾರದು ಎಂಬ ಸಾಮಾನ್ಯ ನೀತಿಯ ಸೂಚನೆಯೂ ಇಲ್ಲಿ ದೊರೆಯುತ್ತದೆ.

**೩೫. ಅವತಾರಿಕಾ :** ಈ ಶ್ಲೋಕದಲ್ಲಿ ಶ್ರೀರಾಘವೇಂದ್ರರು ಶ್ರೀಕೃಷ್ಣಚಾರಿತ್ರ-ಮಂಜರೀ, ಶ್ರೀರಾಮಚಾರಿತ್ರಮಂಜರೀ ಇವೇ ಮೊದಲಾದ ಗ್ರಂಥಗಳನ್ನು ರಚಿಸಿದವರೆಂದು ವರ್ಣಿಸಲಾಗಿದೆ. ("ಶ್ರೀಕೃಷ್ಣಚಾರಿತ್ರ ರಾಮಚಾರಿತ್ರಾದಿಗ್ರಂಥ-ಕರ್ತೃತ್ವೇನ ಸ್ತೌತಿ ವಾಚೇತಿ ಎಂದು ಶ್ರೀವಸುಧೇಂದ್ರತೀರ್ಥರ ವ್ಯಾಖ್ಯಾನದಲ್ಲಿದೆ.

ಇಲ್ಲಿರುವ ಆದಿ ಪದದಿಂದ ಮಹಾಭಾರತತಾತ್ಪರ್ಯನಿರ್ಣಯಭಾವಸಂಗ್ರಹ, ಪ್ರಾತಃ ಸಂಕಲ್ಪಗದ್ಯ, ಇವೇ ಮೊದಲಾದ ಗ್ರಂಥಗಳನ್ನು ಮತ್ತು ಇನ್ನೂ ಉಪಲಬ್ಧವಾಗದಿರುವ ಸಂಗ್ರಹಾತ್ಮಕವಾದ ಸಂಕ್ಷಿಪ್ತ ಚಾರಿತ್ರಿಕ ಗ್ರಂಥಗಳನ್ನು ಗ್ರಹಿಸಬಹುದು.)

**ವಾಚಾ ಸಂಕ್ಷಿಪ್ತಯಾ ಯದ್ಬಹುಚರಿತಮುಪಾವರ್ಣಯಸ್ತ್ವಂ ಮುರಾರೇಃ**
**ಕಿಂಚ ಶ್ರೀರಾಘವೇಂದ್ರವ್ರತಿಪ ರಘುಪತೇಸ್ತೇನ ನೋ ವಿಸ್ಮಯೋಽಹಮ್ ।**
**ಕಿಂ ವಾ ದುಸ್ಸಾಧ್ಯಮಸ್ತಿ ತ್ರಿಜಗತಿ ಮಹತಾಮಾತ್ಮನಃ ಪಾಣಿಪದ್ಮೇ**
**ಪಶ್ಯಾಮಂದೋಮರಂದಃ ಕಿಲ ಘಟಜನುಷಾ ಚೋಲಿರಾಕಾರಿ ಸಿಂಧುಃ ॥ ೩೫ ॥**

**ಅನ್ವಯಾರ್ಥ** : **ಶ್ರೀರಾಘವೇಂದ್ರ ವ್ರತಿಪ** = ಶ್ರೀರಾಘವೇಂದ್ರ ಮುನೀಂದ್ರರೇ ! **ಮುರಾರೇಃ** = ಶ್ರೀಕೃಷ್ಣನ, **ಕಿಂಚ** = ಮತ್ತೂ, **ರಘುಪತೇಃ** = ಶ್ರೀರಾಮಚಂದ್ರನ, **ಯದ್ಬಹುಚರಿತಂ** – **ಯತ್** = ಯಾವ, **ಬಹುಚರಿತಂ** = ವಿಸ್ತಾರವಾದ ಚರಿತ್ರೆಗಳು ಇವೆಯೋ ಅವುಗಳನ್ನು, **ತ್ವಂ** = ನೀವು, **ಸಂಕ್ಷಿಪ್ತಯಾ** = ಸಂಕ್ಷಿಪ್ತವಾದ, **ವಾಚಾ** = ವಾಕ್ಯಗಳಿಂದ ಸ್ವಲ್ಪದರಲ್ಲಿ, **ಉಪಾವರ್ಣಯಃ** = ವರ್ಣಿಸಿರುವಿರಿ, **ತೇನ** = ಇಂಥ ನಿಮ್ಮ ಕಾರ್ಯದಿಂದ, **ಅಹಂ** = ನಾನೇನೂ, **ನೋ ವಿಸ್ಮಯೀ** = ಆಶ್ಚರ್ಯಗೊಳ್ಳುವದಿಲ್ಲ. ಏಕೆಂದರೆ, **ಮಹತಾಂ** = ಮಹಾತ್ಮರಾದವರಿಗೆ, **ತ್ರಿಜಗತಿ** = ಮೂರ್ಲೋಕಗಳಲ್ಲಿ, **ದುಃಸಾಧ್ಯಂ** = ಕಷ್ಟಸಾಧ್ಯವಾದುದು ಅಥವಾ ಅಸಾಧ್ಯವಾದುದು, **ಕಿಂ ವಾ ಅಸ್ತಿ** = ಯಾವುದಾದರೂ ಇರುವದೇನು ? (ಅಥವಾ **ಕಿಂ ವಾ ದುಸ್ಸಾಧ್ಯಮಸ್ತಿ** = ಯಾವುದು ತಾನೇ ದುಸ್ಸಾಧ್ಯವಾಗಿದೆ ?) **ಪಶ್ಯ** = ಈಗ ನೋಡಿ, **ಘಟಜನುಷಾ** – **ಘಟ** = ಕುಂಭದಲ್ಲಿ, **ಜನುಷಾ** = ಜನ್ಮವೆತ್ತಿದ ಅಗಸ್ತ್ಯ ಋಷಿಗಳಿಂದ, **ಅಮಂದಃ ಸಿಂಧುಃ** = ಅಪಾರವಾದ ಸಮುದ್ರವು, **ಆತ್ಮನಃ** = ತಮ್ಮ, **ಪಾಣಿಪದ್ಮೇ** = ಕರಕಮಲದಲ್ಲಿಯ, **ಮರಂದಃ** = ಒಂದು ಜೇನುಹನಿಯಂತೆ, **ಚೋಲಿಃ** = ಆಪೋಶನೆ, **ಅಕಾರಿ ಕಿಲ** = ಮಾಡಲ್ಪಟ್ಟಿತಷ್ಟೆ ?

**ತಾತ್ಪರ್ಯಾರ್ಥ** : ಭೋ ಶ್ರೀರಾಘವೇಂದ್ರವ್ರತಿಪರೇ ! ಶ್ರೀಕೃಷ್ಣನ ಮತ್ತು ಶ್ರೀರಾಮಚಂದ್ರನ ವಿಸ್ತಾರವಾದ ಅನೇಕ ಚರಿತ್ರೆಗಳನ್ನು ನೀವು ಅತಿ ಸಂಕ್ಷೇಪದಲ್ಲಿ (ಅಲ್ಪ ವಚನಗಳಲ್ಲಿ) ಹೇಳಿರುವುದೇನಿದೆಯೋ ಅದರಿಂದ ನಮಗಂತೂ ಆಶ್ಚರ್ಯವೇನಿಲ್ಲ. ಮಹಾತ್ಮರಿಗೆ ಮೂರ್ಲೋಕಗಳಲ್ಲಿ ಅಸಾಧ್ಯವಾದುದು ಯಾವುದಿದೆ ! ಕುಂಭಯೋನಿಗಳಾದ ಅಗಸ್ತ್ಯಮುನಿಗಳು ಅಪಾರವಾದ ಸಪ್ತಸಾಗರಗಳನ್ನು ತಮ್ಮ ಬೊಗಸೆಯಲ್ಲಿ ಹಿಡಿದು ಒಂದು ಜೇನುಹನಿಯಂತೆ ಆಪೋಶನ ಮಾಡಿದರಷ್ಟೆ !

**ಗುಣಪ್ರಕಾಶ** : ಬಹುವಿಸ್ತಾರವಾದ ರಾಮಾಯಣ ಚರಿತೆಯನ್ನು ಹನ್ನೆರಡೇ ಶ್ಲೋಕಗಳ ಶ್ರೀರಾಮಚಾರಿತ್ರ್ಯ ಮಂಜರೀ ಎಂಬ ಚಿಕ್ಕ ಗ್ರಂಥದಲ್ಲಿ ಸಂಗ್ರಹಿಸಿ,

ಅದರಂತೆ ಬಹುವಿಸ್ತಾರವಾದ ಮಹಾಭಾರತ ಹಾಗೂ ಮ.ಭಾ.ತಾ. ನಿರ್ಣಯ ಗ್ರಂಥಗಳ ವಿಷಯಗಳನ್ನು ಚಿಕ್ಕದಾದ ೩೨ ಶ್ಲೋಕಗಳ ಮಹಾಭಾರತ ತಾತ್ಪರ್ಯನಿರ್ಣಯ ಭಾವಸಂಗ್ರಹವೆಂಬ ಗ್ರಂಥದಲ್ಲಿ ಸಂಗ್ರಹಿಸಿ ಮತ್ತು ಭಾಗವತದ ಶ್ರೀಕೃಷ್ಣ ಚರಿತ್ರೆಯನ್ನು ಶ್ರೀಕೃಷ್ಣಚಾರಿತ್ರ್ಯ ಮಂಜರೀ ಎಂಬ ೨೮ ಶ್ಲೋಕಗಳ ಚಿಕ್ಕ ಗ್ರಂಥದಲ್ಲಿ ಸಂಗ್ರಹಿಸಿ ಸಜ್ಜನರಿಗೆ ಉಪಕಾರಮಾಡಿದ ಶ್ರೀರಾಯರ ಸಂಗ್ರಹಕೌಶಲ ಮತ್ತು ಕಾರುಣ್ಯವನ್ನು ಈ ಶ್ಲೋಕದಲ್ಲಿ ವರ್ಣಿಸಲಾಗಿದೆ. ವಿಸ್ತಾರವಾದ ರಾಮಾಯಣ, ಮಹಾಭಾರತಾದಿಗಳನ್ನು ಓದಲಾಗದವರಿಗೆ ಶ್ರೀರಾಯರು ಈ ಗ್ರಂಥಗಳನ್ನು ರಚಿಸಿ ಅನುಗ್ರಹಿಸಿದ್ದಾರೆ.

ಶ್ರೀರಾಘವೇಂದ್ರವ್ರತಿಪ ಎಂಬಲ್ಲಿ ಶ್ರೀರಾಯರ ಕಾಂತಿ, ವ್ರತನಿಯಮಗಳನ್ನು ವರ್ಣಿಸಲಾಗಿದೆ. "ತ್ರಿಜಗತಿ ಮಹತಾಂ ಕಿಂ ವಾ ದುಸ್ಸಾಧ್ಯಮಸ್ತಿ" = ಮಹಾತ್ಮರಿಗೆ ಮೂರ್ಲೋಕಗಳಲ್ಲಿ ದುಸ್ಸಾಧ್ಯವಾದುದು ಯಾವುದಿದೆ ? (ಯಾವುದೂ ಇರುವದಿಲ್ಲ) ಎಂದು ಹೇಳುವ ಮೂಲಕ ಶ್ರೀರಾಯರು ಅಗಸ್ತ್ಯಮುನಿಗಳಂತೆ ಮಹಾತ್ಮರೆಂದೂ ಅಗಸ್ತ್ಯರು ಸಪ್ತಸಾಗರಗಳನ್ನು ಆಚಮನ ಪೂರ್ವಕ ಕುಡಿದರೆ, ಶ್ರೀರಾಯರು ವಿಸ್ತಾರವಾದ ರಾಮಾಯಣಾದಿ ಗ್ರಂಥಗಳನ್ನು ಚಿಕ್ಕ ಸ್ತೋತ್ರಗಳಲ್ಲಿ ಸಂಗ್ರಹಿಸಿದರು ಎಂದೂ ಸ್ತುತಿಸಲಾಗಿದೆ.

೩೬. **ಅವತಾರಿಕಾ :** ಶ್ರೀರಾಘವೇಂದ್ರತೀರ್ಥರು, ಶ್ರೇಷ್ಠವಾದ 'ಭಾಟ್ಟಸಂಗ್ರಹ'-ವೆಂಬ ಪೂರ್ವಮೀಮಾಂಸಾಗ್ರಂಥವನ್ನು ರಚಿಸಿದವರೆಂದು ಇಲ್ಲಿ ಸ್ತುತಿಸಲಾಗಿದೆ.

**ತಂತ್ರಿಶ್ರೀನೀಲಕಂಠಾಭಿಧಮಖಿಮಣಿನಾ ಭಟ್ಟತಂತ್ರಾನುಬಂಧೇ**
**ಗ್ರಂಥೇ ತಾವತ್ತ್ವದೀಯೇ ಕರಿಣಿ ಗುಣವಿದಾಽಽರೋಪಿತೇಽಭ್ಯರ್ಹಣಾಯ (ಯೈ) ।**
**ಕೀರ್ತಿಸ್ತೇ ರಾಘವೇಂದ್ರ ವ್ರತಿಸುಮತಿಮಣೇ ನೂನಮನ್ಯೂನವೇಗಾ-**
**ದ್ದಿಙ್ನಾಗಾನಾರುರುಕ್ಷುಃ ಸ್ವಯಮಪಿ ಸಹಸಾ ಧಾವದಷ್ಟೌ ದಿಗಂತಾನ್ ॥೩೬॥**

**ಅನ್ವಯಾರ್ಥ :** **ರಾಘವೇಂದ್ರ ವ್ರತಿಸುಮತಿಮಣೇ** = ಭೋ ಶ್ರೀರಾಘವೇಂದ್ರ ವ್ರತಿಸುಮತಿಮಣಿಗಳೇ, **ಗುಣವಿದಾ** = ಗುಣಗ್ರಾಹಿಗಳಾದ, **ತಂತ್ರಿ** (**ಮಂತ್ರಿ**) **ಶ್ರೀನೀಲಕಂಠಾಭಿಧಮಖಿಮಣಿನಾ** – **ತಂತ್ರಿ** = ತಂತ್ರಶಾಸ್ತ್ರಜ್ಞರಾದ (**ಮಂತ್ರಿ** = ರಾಜನ ಮಂತ್ರಿಗಳಾದ), **ಶ್ರೀನೀಲಕಂಠಾಭಿಧ** = ಶ್ರೀನೀಲಕಂಠ ಎಂಬ ಹೆಸರಿನ, **ಮಖಿಮಣಿನಾ** = ದೀಕ್ಷಿತಶ್ರೇಷ್ಠರಿಂದ, **ತ್ವದೀಯೇ** = ನಿಮ್ಮಿಂದ ರಚಿತವಾದ, **ಭಟ್ಟತಂತ್ರಾನುಬಂಧೇ** = ಭಟ್ಟಸಿದ್ಧಾಂತಾನುಸಾರಿಯಾದ, **ಗ್ರಂಥೇ** = ಭಾಟ್ಟಸಂಗ್ರಹ ಎಂಬ ಗ್ರಂಥವು, **ಅಭ್ಯರ್ಹಣಾಯ** = ನಿಮ್ಮ ಸತ್ಕಾರಕ್ಕಾಗಿ, **ಕರಿಣಿ** = ಆನೆಯ ಮೇಲೆ (ಅಂಬಾರಿಯಲ್ಲಿ), **ಆರೋಪಿತೇ ಸತಿ ತಾವತ್** = ಏರಿಸಲ್ಪಡುತ್ತಿರಲಾಗಿ, **ತೇ ಕೀರ್ತಿಃ** = ನಿಮ್ಮ ಕೀರ್ತಿಯು,

**ದಿಙ್‌ನಾಗಾನ್ ಆರುರುಕ್ಷುಃ** = ಅಷ್ಟದಿಗ್ಗಜಗಳನ್ನೇರಲು ಬಯಸಿದುದಾಗಿ, **ಸ್ವಯಂ ಅಪಿ** = ತಾನೂ ಕೂಡ, **ಸಹಸಾ** = ತಡಮಾಡದೇ, **ಅನ್ಯೂನವೇಗಾತ್** = ಬಹಳವಾದ ವೇಗದಿಂದ (ಅನ್ಯೂನವೇಗಾ = ಬಹು ವೇಗವುಳ್ಳದ್ದಾಗಿ), **ಅಷ್ಟೌ ದಿಗಂತಾನ್** = ಎಂಟು ದಿಕ್ಕುಗಳ ಕೊನೆಯ ಸೀಮೆಗಳನ್ನು ಕುರಿತು, **ನೂನಂ ಅಧಾವತ್** = ಓಡಿ ಹೋಯಿತು.

**ತಾತ್ಪರ್ಯಾರ್ಥ** : ಭೋ ಶ್ರೀರಾಘವೇಂದ್ರವ್ರತಿಶಿರೋಮಣಿಗಳೇ ! ಗುಣಗ್ರಾಹಿಯಾದ ಮತ್ತು ಸ್ವಶಾಸ್ತ್ರಸಿದ್ಧಾಂತಸಂಪತ್ತುಳ್ಳ ನೀಲಕಂಠರೆಂಬ ಹೆಸರಿನ ದೀಕ್ಷಿತ ಶ್ರೇಷ್ಠರು ನಿಮ್ಮನ್ನು ಸನ್ಮಾನಿಸುವುದಕ್ಕಾಗಿ, ನಿಮ್ಮಿಂದ ವಿರಚಿತವಾದ ಭಟ್ಟಸಿದ್ಧಾಂತಾನುಸಾರಿಯಾದ 'ಭಾಟ್ಟಸಂಗ್ರಹ'ವೆಂಬ ಹೆಸರಿನ ಗ್ರಂಥವನ್ನು ಆನೆಯ ಮೇಲೆ ಅಂಬಾರಿಯಲ್ಲಿಟ್ಟು ಗ್ರಾಮದಲ್ಲಿ ಮೆರವಣಿಗೆ ಮಾಡಿಸಲಾಗಿ ನಿಮ್ಮ ಕೀರ್ತಿಯು ಬಹು ವೇಗವುಳ್ಳದ್ದಾಗಿ ಅಷ್ಟದಿಗ್ಗಜಗಳನ್ನು ಏರಲಿಚ್ಛಿಸಿ ತಾನೂ ಕೂಡ ಊಹಿಸಲಾಗದ ವೇಗದಲ್ಲಿ ಅಷ್ಟದಿಗ್ಗಜಗಳಿರುವ ಅಷ್ಟದಿಕ್ಕುಗಳ ಕೊನೆಯನ್ನು ಸೇರಿತು. (ಶ್ರೀರಾಘವೇಂದ್ರರ ಕೀರ್ತಿಯು ದಶದಿಕ್ಕುಗಳಲ್ಲೂ ವ್ಯಾಪಿಸಿತು ಎಂದು ಭಾವ.)

**ಗುಣಪ್ರಕಾಶ** : ಅದ್ವೈತ ಹಾಗೂ ಪೂರ್ವಮೀಮಾಂಸಾ ಶಾಸ್ತ್ರಗಳಲ್ಲಿ ಪ್ರಖ್ಯಾತ ಪಂಡಿತನಾದ ಗುಣಗ್ರಾಹಿಯಾದ ಮಹಾಮಂತ್ರಿ ನೀಲಕಂಠದೀಕ್ಷಿತರಿಂದ ಆನೆಯ ಮೇಲೆ ಅಂಬಾರಿಯಲ್ಲಿಟ್ಟು ಮೆರವಣಿಗೆ ಮಾಡಲ್ಪಟ್ಟ ಭಾಟ್ಟಸಂಗ್ರಹವೆಂಬ ಶ್ರೇಷ್ಠ ಗ್ರಂಥದ ಕರ್ತೃಗಳು ಶ್ರೀರಾಯರು ಎಂದು ಇಲ್ಲಿ ಸ್ತೋತ್ರ ಮಾಡಲಾಗಿದೆ. ಇದರಿಂದ ಶ್ರೀರಾಯರ ಕೀರ್ತಿಯು ಅಷ್ಟದಿಕ್ಕುಗಳಲ್ಲೂ ವ್ಯಾಪಿಸಿತೆಂದೂ ಹೇಳಲಾಗಿದೆ. ಈ ರೀತಿ ಇಲ್ಲಿ ಶ್ರೀರಾಯರ ಕೀರ್ತಿಯ ಸ್ತವನವಿದೆ.

೩೭. **ಅವತಾರಿಕಾ** : ಈ ಶ್ಲೋಕದಲ್ಲಿ ಮಧ್ವಸಿದ್ಧಾಂತವೆಂಬ ಕಲ್ಪವೃಕ್ಷವು ಶ್ರೀರಾಘವೇಂದ್ರರಿಂದ ಫಲಭರಿತವಾಗಿ ಎಲ್ಲ ಸಜ್ಜನರಿಂದ ಸೇವಿಸುವಂತಾಯಿತು ಎಂದು ಬಹು ಹೃದಯಂಗಮವಾದ ವರ್ಣನೆ ಇದೆ.

**ವ್ಯಾಸೇನ ವ್ಯುಪ್ತಬೀಜಃ ಶ್ರುತಿಭುವಿ ಭಗವತ್ಪಾದಲಬ್ಧಾಂಕುರಶ್ರೀಃ**
**ಪ್ರತ್ನೈರೀಷತ್ಪ್ರಭಿನ್ನೋಽಜನಿ ಜಯಮುನಿನಾ ಸಮ್ಯಗುದ್ಭಿನ್ನಶಾಖಃ ।**
**ಮೌನೀಶವ್ಯಾಸರಾಜಾದುದಿತಕಿಸಲಯಃ ಪುಷ್ಪಿತೋಽಯಂ ಜಯೀಂದ್ರಾತ್**
**ಅದ್ಯ ಶ್ರೀರಾಘವೇಂದ್ರಾದ್ವಿಲಸತಿ ಫಲಿತೋ ಮಧ್ವಸಿದ್ಧಾಂತಶಾಖೀ ॥ ೩೭ ॥**

**ಅನ್ವಯಾರ್ಥ** : **ಶ್ರುತಿಭುವಿ** = ವೇದವೆಂಬ ಭೂಮಿಯಲ್ಲಿ, **ವ್ಯಾಸೇನ** = ಶ್ರೀವೇದವ್ಯಾಸರಿಂದ, **ವ್ಯುಪ್ತಬೀಜಃ** = ಬಿತ್ತಲ್ಪಟ್ಟ, ಬೀಜವುಳ್ಳ, **ಭಗವತ್ಪಾದಲಬ್ಧಾಂಕುರಶ್ರೀಃ** – **ಭಗವತ್ಪಾದ** = ಶ್ರೀಮದಾಚಾರ್ಯರ ದೆಸೆಯಿಂದ, **ಲಬ್ಧ** =

ಪ್ರಾಪ್ತವಾದ, **ಅಂಕುರಶ್ರೀಃ** = ಅಂಕುರಸಂಪತ್ತುಳ್ಳ, **ಪ್ರತ್ನೈಃ** = ಪ್ರಾಚೀನಾಚಾರ್ಯರಿಂದ, **ಈಷತ್ ಪ್ರಭಿನ್ನಃ** = ಸ್ವಲ್ಪ ಮೊಳಕೆಗೊಂಡ (ಮಧ್ವಸಿದ್ಧಾಂತವೃಕ್ಷವು), **ಜಯಮುನಿನಾ** = ಶ್ರೀಜಯತೀರ್ಥ ಮುನಿಗಳಿಂದ, **ಸಮ್ಯಕ್** = ಚೆನ್ನಾಗಿ, **ಉದ್ಭಿನ್ನಶಾಖಃ** = ಹೊರಹೊರಟ ಶಾಖೆಗಳುಳ್ಳದ್ದು, **ಅಜನಿ** = ಆಯಿತು (ಮುಂದೆ), **ಮೌನೀಶವ್ಯಾಸ-ರಾಜಾತ್** = ಮುನಿಶ್ರೇಷ್ಠರಾದ ಶ್ರೀವ್ಯಾಸರಾಜರ ದೆಶೆಯಿಂದ, **ಉದಿತಕಿಸಲಯಃ** = ಉದಯಿಸಿದ ಚಿಗುರುಳ್ಳದ್ದೂ (ಪತ್ರಗಳುಳ್ಳದ್ದೂ), **ಜಯೀಂದ್ರಾತ್** = ಶ್ರೀವಿಜಯೀಂದ್ರ-ತೀರ್ಥರಿಂದ, **ಪುಷ್ಪಿತಃ** = ಪುಷ್ಪಿತವಾದದ್ದೂ ಆದ, **ಅಯಂ** = ಈ, **ಮಧ್ವಸಿದ್ಧಾಂತ-ಶಾಖೀ** = ಮಧ್ವಸಿದ್ಧಾಂತವೆಂಬ ವೃಕ್ಷವು, **ಅದ್ಯ** = ಇಂದು, **ಶ್ರೀರಾಘವೇಂದ್ರಾತ್** = ಶ್ರೀರಾಘವೇಂದ್ರಗುರುಸಾರ್ವಭೌಮರ ದೆಶೆಯಿಂದ, **ಫಲಿತ** = ಫಲಭರಿತವಾಗಿ, **ವಿಲಸತಿ** = ಬಹು ಶೋಭಿಸುತ್ತಿದೆ.

**ತಾತ್ಪರ್ಯಾರ್ಥ** : ವೇದವೆಂಬ ಭೂಮಿಯಲ್ಲಿ ಶ್ರೀವೇದವ್ಯಾಸರಿಂದ ಬಿತ್ತಲ್ಪಟ್ಟ ಬೀಜವುಳ್ಳ, ಶ್ರೀಮದಾನಂದತೀರ್ಥಭಗವತ್ಪಾದರಿಂದ ಪ್ರಾಪ್ತವಾದ ಅಂಕುರಸಂಪತ್ತುಳ್ಳ, ಪ್ರಾಚೀನಾಚಾರ್ಯರಿಂದ (ಶ್ರೀಪದ್ಮನಾಭತೀರ್ಥರು, ಶ್ರೀನರಹರಿತೀರ್ಥರು, ಶ್ರೀಮಾಧವ-ತೀರ್ಥರು, ಶ್ರೀ ಅಕ್ಷೋಭ್ಯತೀರ್ಥರು ಇವರೇ ಮೊದಲಾದ ಪ್ರಾಚೀನಾಚಾರ್ಯರಿಂದ) ಸ್ವಲ್ಪ ಮೊಳಕೆಗೊಂಡ, ಶ್ರೀಜಯತೀರ್ಥಮುನಿಗಳಿಂದ ಚೆನ್ನಾಗಿ ಹೊರಹೊರಟ ಶಾಖೆಗಳುಳ್ಳ (ಶಾಖೋಪಶಾಖೆಗಳಾದ), ಮುನಿಶ್ರೇಷ್ಠರಾದ ಶ್ರೀವ್ಯಾಸರಾಜರಿಂದ ಹುಟ್ಟಿದ ಚಿಗರುಳ್ಳ (ಪತ್ರಗಳುಳ್ಳ), ಶ್ರೀವಿಜಯೀಂದ್ರತೀರ್ಥರಿಂದ ಪುಷ್ಪಿತವಾದ ಮಧ್ವಸಿದ್ಧಾಂತ-ವೆಂಬ ಕಲ್ಪವೃಕ್ಷವು ಇಂದು ಶ್ರೀರಾಘವೇಂದ್ರತೀರ್ಥರಿಂದ ಫಲಭರಿತವಾಗಿ ಬಹು ಶೋಭಿಸುತ್ತಿದೆ.

**ಗುಣಪ್ರಕಾಶ** : ಈ ಶ್ಲೋಕದಲ್ಲಿ ಶ್ರೀವೇದವ್ಯಾಸರಿಂದ ಬಿತ್ತಲ್ಪಟ್ಟ ಮಧ್ವ-ಸಿದ್ಧಾಂತದ ಬೀಜವು ಬೆಳೆದು ವೃಕ್ಷವಾಗಿ ಶ್ರೀರಾಯರಿಂದ ಫಲಭರಿತವಾಗಿ ಶೋಭಿಸಿತು ಎಂಬ ವರ್ಣನೆ ಬರುತ್ತದೆ. ಕೃಪಾಪೂರ್ಣರಾದ ಶ್ರೀವೇದವ್ಯಾಸರಿಂದ ಹಿಡಿದು ಶ್ರೀರಾಯರ ವರೆಗಿನ ಜ್ಞಾನಿವರ್ಯರು ಮಧ್ವಸಿದ್ಧಾಂತಾಭಿವೃದ್ಧಿಗೆ ಸಲ್ಲಿಸಿದ ವಿಶಿಷ್ಟ ಕೊಡುಗೆಯ ಸುಂದರ ಚಿತ್ರಣವು ಇಲ್ಲಿ ಕಂಡುಬರುತ್ತದೆ.

**ವಿಶೇಷವಿಚಾರ** : ಶ್ರೀವೇದವ್ಯಾಸರು ಬಿತ್ತಿದ ಬೀಜವು ಹಂತಹಂತವಾಗಿ ಬೆಳೆದು ಮಧ್ವಸಿದ್ಧಾಂತವೆಂಬ ಫಲಭರಿತವಾದ ವೃಕ್ಷವಾಯಿತೆಂಬುದು ಈ ಶ್ಲೋಕದಲ್ಲಿ ತೋರುವ ಮೇಲ್ನೋಟದ ಅರ್ಥವಾಗಿದೆ. ಆದರೆ ಶ್ರೀವೇದವ್ಯಾಸರು ಹಸನಾದ ಶ್ರುತಿಭುವಿಯಲ್ಲಿ ಬಿತ್ತಿದ ಬೀಜವು ವ್ಯಾಸಸಿದ್ಧಾಂತದ ಬೀಜವು. ಆ ಬೀಜವು ಬೆಳೆದು ಮಧ್ವಸಿದ್ಧಾಂತವೃಕ್ಷವಾಗಿರುವುದು ಹೇಗೆ ? ಯಾವ ಬೀಜವು ಬಿತ್ತಲ್ಪಡುವದೋ

ಅದರದೇ ವೃಕ್ಷವಾಗಿರಬೇಕಲ್ಲವೇ ? ಇದು ನಿಜ. ವ್ಯಾಸಸಿದ್ಧಾಂತ ಬೀಜವು ಬೆಳೆದು ಮಧ್ವಸಿದ್ಧಾಂತವೃಕ್ಷವಾಯಿತೆಂದು ಹೇಳುವಲ್ಲಿ 'ಹರಿಯ ಮತವೇ ಹನುಮನ ಮತವು, ಹನುಮನ ಮತವೇ ಹರಿಯ ಮತವು' ಎಂಬ ಸ್ವಾರಸ್ಯಪೂರ್ಣವಾದ ತತ್ತ್ವವು ಅಡಗಿದೆ.

ಈ ಶ್ಲೋಕದಲ್ಲಿ ಶ್ರೀವೇದವ್ಯಾಸರು, ಭಗವತ್ಪಾದರು (ಶ್ರೀಮಧ್ವರು), ಪ್ರತ್ನರು (ಶ್ರೀಪದ್ಮನಾಭತೀರ್ಥ, ನರಹರಿತೀರ್ಥ, ಮಾಧವತೀರ್ಥ, ಅಕ್ಷೋಭ್ಯತೀರ್ಥ, ಶ್ರೀತ್ರಿವಿಕ್ರಮ-ಪಂಡಿತಾಚಾರ್ಯ ಮೊದಲಾದ ಪ್ರಾಚೀನರು), ಶ್ರೀಜಯಮುನಿಗಳು, ಶ್ರೀಮೌನೀಶ-ವ್ಯಾಸರಾಜರು, ಶ್ರೀಜಯೀಂದ್ರರು ಮತ್ತು ಶ್ರೀರಾಘವೇಂದ್ರರು ಅವರುಗಳ ಉಲ್ಲೇಖವಿದೆ. ಇವರೆಲ್ಲ ಮುನಿಗಳು. ದುರ್ಮತಭಂಜನಪೂರ್ವಕ ಶ್ರೀಮದ್ವೈಷ್ಣವ-ಸಿದ್ಧಾಂತ ಪ್ರತಿಷ್ಠಾಪನೆಯೇ ಇವರ ಮುಖ್ಯ ಕಾರ್ಯ. ಈ ಮುನಿಗಳ ಕಾಯಿಕ-ವಾಚಿಕ-ಮಾನಸಿಕ ಕ್ರಿಯೆಗಳಲ್ಲಿ ಸಾಮರಸ್ಯ ಏಕತೆಗಳಿದ್ದುದರಿಂದಲೇ ಇವರೆಲ್ಲರಿಂದ ಮಧ್ವಸಿದ್ಧಾಂತ ವೃಕ್ಷವು ಅಭಿವೃದ್ಧವಾಗಿ ಫಲಭರಿತವಾಗಲು ಸಾಧ್ಯವಾಯಿತು. ಈ ಮುನಿಗಳೆಲ್ಲರ ಮತ ಒಂದೇ. ಈ ಬಗ್ಗೆ ಹೆಚ್ಚಿನ ವಿವರಕ್ಕೆ ನಮ್ಮ ಪೂಜ್ಯ ತೀ.ರೂ.ರು ತಂತ್ರದೀಪಿಕೆಯ ಪ್ರಸ್ತಾವನೆಯಲ್ಲಿ ಬರೆದಿರುವ 'ಮುನಿಮತವಿಗಾನಂ ಅವಿರೋಧಶ್ಚ' ಎಂಬ ಭಾಗವನ್ನು ಅವಲೋಕಿಸಬಹುದು.

ಶ್ರೀವೇದವ್ಯಾಸರು ಬಿತ್ತಿದ ಬೀಜವು ಶ್ರೀಮದಾಚಾರ್ಯರಿಂದ ಅಂಕುರಿತ-ವಾಯಿತು. ಪ್ರತ್ನರಿಂದ ಸ್ವಲ್ಪ ಬೆಳೆಸಲ್ಪಟ್ಟಿತು, ಶ್ರೀಜಯಮುನಿಗಳಿಂದ ಚೆನ್ನಾಗಿ ಶಾಖೆಗಳಾಗುವಂತಾಯಿತು, ಶ್ರೀಮೌನೀಶವ್ಯಾಸರಾಜರಿಂದ ಮೊಗ್ಗುಗಳಾಗುವಂತಾಗಿ ಬೆಳೆಯಿತು, ಶ್ರೀಜಯೀಂದ್ರರಿಂದ ಪುಷ್ಪಿತವಾಯಿತು, ಶ್ರೀರಾಘವೇಂದ್ರರಿಂದ ಫಲಭರಿತ-ವಾದ ವೃಕ್ಷವಾಯಿತು ಎಂದು ಮುಂತಾಗಿ ಈ ಶ್ಲೋಕದಲ್ಲಿ ವರ್ಣಿತವಾಗಿದ್ದು ಇದರ ತಾತ್ಪರ್ಯವೇನು ? "ವ್ಯಾಸೇನ ಶ್ರುತಿಭುವಿ ವ್ಯುಪ್ತಬೀಜಃ" ಅಂದರೆ ಶ್ರೀವೇದವ್ಯಾಸರಿಂದ ಶ್ರುತಿ ಎಂಬ ಭೂಮಿಯಲ್ಲಿ ಬಿತ್ತಲ್ಪಟ್ಟ ಬೀಜವು ಎಂದರ್ಥ. ಹೀಗೆಂದರೇನು ? ಶ್ರೀವೇದವ್ಯಾಸರು ಅನಂತವೇದರಾಶಿಯೊಳಗಿಂದ ಕೆಲಭಾಗಗಳನ್ನು ತೆಗೆದು ಋಗ್ವೇದ, ಯಜುರ್ವೇದ, ಸಾಮವೇದ ಹಾಗೂ ಅಥರ್ವವೇದ ಎಂದು ನಾಲ್ಕು ಭಾಗಗಳನ್ನು ಮಾಡಿದರು. ಈ ರೀತಿ ವಿಭಜಿತವಾದ ವೇದಗಳೇ ಹಸನಾದ ಭೂಮಿ ಇದ್ದಂತೆ. ಈ ವೇದಗಳಲ್ಲಿ ಏನು ಹೇಳಿದೆ ಎಂಬುದನ್ನು ತಿಳಿಸುವದಕ್ಕಾಗಿ ಬ್ರಹ್ಮಸೂತ್ರಗಳನ್ನು ರಚಿಸಿದ್ದೇ ವೇದಭೂಮಿಯಲ್ಲಿ ಬಿತ್ತಿದ ಬೀಜವು. ಬಿತ್ತಿದ ಬೀಜವು ಬೆಳೆದಾಗ ಅದರಲ್ಲಿ ಆ ಭೂಮಿಯ ಗುಣಗಳ ಪರಿಣಾಮವು ಕಂಡುಬರುವದು ಸ್ವಾಭಾವಿಕ. ಇದರಂತೆಯೇ ವೇದಗಳಲ್ಲಿರುವ ಶ್ರೀಹರಿಯ ಗುಣಪರಿಪೂರ್ಣತ್ವ, ದೋಷದೂರತ್ವ, ಜ್ಞೇಯತ್ವ ಮತ್ತು ಗಮ್ಯತ್ವರೂಪ ಧರ್ಮಗಳು ಬ್ರಹ್ಮಸೂತ್ರಗಳಲ್ಲಿಯೂ ಇರುವುದು ಭಗವತ್ಪಾದರಿಗೆ ಮಾತ್ರ ತಿಳಿಯಿತು. ಶ್ರೀವೇದವ್ಯಾಸರು ಬಿತ್ತಿದ ಸಿದ್ಧಾಂತ ಬೀಜವನ್ನು

ಶ್ರೀಮದಾಚಾರ್ಯರು ಮಾತ್ರ ಅರಿತಿದ್ದರಿಂದಲೇ ಆ ಸಿದ್ಧಾಂತಾನುಸಾರವಾಗಿ ಅವರು ಬ್ರಹ್ಮಸೂತ್ರಭಾಷ್ಯ, ಅನುಭಾಷ್ಯ, ಅಣುಭಾಷ್ಯ ಮತ್ತು ನ್ಯಾಯವಿವರಣ ಇವೇ ಮೊದಲಾದ ಗ್ರಂಥಗಳನ್ನು ರಚಿಸಿ ಪದ್ಮನಾಭತೀರ್ಥರೇ ಮೊದಲಾದ ಶಿಷ್ಯರಿಗೆ ಉಪದೇಶಿಸಿದರು. ಶ್ರೀಮದಾಚಾರ್ಯರ ಗ್ರಂಥರಚನೆ ಮತ್ತು ಉಪದೇಶವೆಂದರೆ ವ್ಯಾಸಸಿದ್ಧಾಂತಬೀಜವು ಅಂಕುರಿತವಾದಂತೆ. ಶ್ರೀಪದ್ಮನಾಭತೀರ್ಥರೇ ಮೊದಲಾದ ಪ್ರತ್ನರು ಶ್ರೀವೇದವ್ಯಾಸ ಸಿದ್ಧಾಂತವನ್ನು ಶ್ರೀಮದಾಚಾರ್ಯರ ಮುಖದಿಂದ ಮತ್ತು ಅವರ ಗ್ರಂಥಗಳಿಂದ ತಿಳಿಯಲು ಸಮರ್ಥರಾದರು. ಶ್ರೀಮದಾಚಾರ್ಯರ ಗ್ರಂಥಗಳಿಂದ ವ್ಯಾಸಸಿದ್ಧಾಂತವನ್ನು ತಿಳಿಯಲಾಗದ ಸಜ್ಜನರಿಗೋಸ್ಕರ ಈ ಪ್ರಾಚೀನಮುನಿಗಳು ಶ್ರೀಮದಾಚಾರ್ಯರ ಗ್ರಂಥಗಳಿಗೆ ವ್ಯಾಖ್ಯಾನವನ್ನು ಬರೆದು ಉಪದೇಶಿಸಿ ವ್ಯಾಸಸಿದ್ಧಾಂತವು ತಿಳಿಯುವಂತೆ ಮಾಡಿದರು. ಹೀಗೆ ಮಾಡಿದ್ದನ್ನೇ ಸಿದ್ಧಾಂತವೃಕ್ಷವು ಈಷತ್‌ಪ್ರಭಿನ್ನ-ವಾಯಿತೆಂದು ವರ್ಣಿಸಲಾಗಿದೆ. ಇದೇ ರೀತಿಯಾಗಿ ಶ್ರೀಜಯಮುನಿಗಳು, ಶ್ರೀಮೌನೀಶ-ವ್ಯಾಸರು, ಶ್ರೀಜಯೀಂದ್ರರು ಆ ಆ ಕಾಲದ ಸಜ್ಜನರಿಗೆ ಮತ್ತು ಭವಿಷ್ಯತ್ಕಾಲದ ಯೋಗ್ಯರಾದ ಸುಜೀವಿಗಳಿಗೆ ವ್ಯಾಸಸಿದ್ಧಾಂತವು ಅರ್ಥಾತ್ ಮಧ್ವಸಿದ್ಧಾಂತ ಗ್ರಂಥಗಳು ಅರ್ಥವಾಗುವಂತೆ ಗ್ರಂಥಪ್ರಣಯನಾದಿ ಕಾರ್ಯಗಳನ್ನು ಮಾಡಿದರು. ಇವರ ಈ ಕಾರ್ಯಗಳನ್ನೇ **ಉದ್ಭಿನ್ನಶಾಖಃ, ಉದಿತಕಿಸಲಯಃ, ಪುಷ್ಪಿತಃ** ಎಂದು ಮುಂತಾಗಿ ವರ್ಣಿಸಲಾಗಿದೆ. ಹೀಗೆ ಮಧ್ವಸಿದ್ಧಾಂತವು ಹಂತ ಹಂತವಾಗಿ ಬೆಳೆಯುತ್ತ ಬಂದಿತು. ಶ್ರೀರಾಘವೇಂದ್ರರು ಪೂರ್ವಾಚಾರ್ಯರ ಗ್ರಂಥಗಳಿಗೆ ಟೀಕಾ-ಟಿಪ್ಪಣೆಗಳನ್ನು ಬರೆದು ಆ ಎಲ್ಲ ಗ್ರಂಥಗಳ ಸಾರವನ್ನೇ ತೆಗೆದಿಟ್ಟರು ಮತ್ತು ಅವು ಎಲ್ಲ ಸಜ್ಜನರಿಗೂ ಸುಲಭವಾಗಿ ತಿಳಿಯುವಂತೆ ಮಾಡಿದರು. ಇದರಿಂದ ಸಜ್ಜನರಿಗೆಲ್ಲ ಪಕ್ವವಾದ ಹಣ್ಣಿನ ಮಧುರ ರಸವನ್ನು ಆಸ್ವಾದನೆ ಮಾಡಿದಷ್ಟು ಆನಂದವಾಯಿತು. ಶ್ರೀಮದಾಚಾರ್ಯರು, ಶ್ರೀಜಯತೀರ್ಥರು, ಶ್ರೀವ್ಯಾಸರಾಜರು, ಶ್ರೀಜಯೀಂದ್ರರು ಇವರೇ ಮೊದಲಾದವರ ಗ್ರಂಥಗಳ ಅಧ್ಯಯನಕ್ಕೆ ಶ್ರೀರಾಘವೇಂದ್ರತೀರ್ಥರ ಕೃತಿಗಳು ಅನಿವಾರ್ಯವಾದವು.

ಶ್ರೀರಾಘವೇಂದ್ರತೀರ್ಥರು ಟೀಕಾ-ಟಿಪ್ಪಣೆಗ್ರಂಥಗಳನ್ನು ರಚಿಸಿದ್ದರಿಂದಲೇ ಪ್ರಾಚೀನಗುರುಗಳ ಗ್ರಂಥಗಳಾದ ಅಣುಭಾಷ್ಯ, ಋಗ್ಭಾಷ್ಯಟೀಕಾ, ತತ್ತ್ವಪ್ರಕಾಶಿಕಾ, ನ್ಯಾಯಸುಧಾ, ತಾತ್ಪರ್ಯಚಂದ್ರಿಕಾ, ತರ್ಕತಾಂಡವ, ಪ್ರಮೇಯದೀಪಿಕಾ, ನ್ಯಾಯ-ದೀಪಿಕಾ, ವಾದಾವಲೀ ಮೊದಲಾದ ಗ್ರಂಥಗಳ ಉಪಯುಕ್ತತೆಯು ಹೆಚ್ಚಾಗಿ ಅವು ಇನ್ನೂ ಅಧಿಕವಾಗಿ ಪ್ರಚಾರದಲ್ಲಿ ಬರಲು ಸಾಧ್ಯವಾಯಿತೆಂಬುದನ್ನು ಗುರುಗುಣ-ಸ್ತವನದ ಶ್ಲೋಕಗಳಿಂದ ಈಗಾಗಲೇ ತಿಳಿದಿದ್ದೇವೆ. ಈ ರೀತಿ ಸಾರಸ್ವತಪ್ರಪಂಚಕ್ಕೆ ಶ್ರೀರಾಘವೇಂದ್ರತೀರ್ಥರ ಕೊಡುಗೆ ಅಸದೃಶವಾದುದೆಂದು ಈ ಕೊನೆಯ ಶ್ಲೋಕ-ದಲ್ಲಿಯ ವರ್ಣನೆಯ ತಾತ್ಪರ್ಯವಾಗಿದೆ.

**ಉಪಸಂಹಾರ ಶ್ಲೋಕಗಳು :**

**ಇತಿ ಶ್ರೀರಾಘವೇಂದ್ರಾರ್ಯೋರ್ಭಯವಂಶಾಬ್ಧಿಚಂದ್ರಮಾಃ ।**
**ಉಪೇಂದ್ರಸೂನುರ್ವಾದೀಂದ್ರಶ್ಚಕ್ರೇ ಗುರುಗುಣಸ್ತವಮ್ ॥೩೮॥**

**ಅನ್ವಯಾರ್ಥ :** ಇತಿ = ಈ ಪ್ರಕಾರವಾಗಿ, ಶ್ರೀರಾಘವೇಂದ್ರಾರ್ಯೋರ್ಭಯ-ವಂಶಾಬ್ಧಿಚಂದ್ರಮಾಃ = ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರ ಉಭಯ ವಂಶಕ್ಕೆ ಚಂದ್ರಮನಂತಿರುವ, ಉಪೇಂದ್ರಸೂನುಃ = ಶ್ರೀಉಪೇಂದ್ರತೀರ್ಥ ಗುರುಗಳ ಕರಕಮಲಸಂಜಾತರಾದ, ವಾದೀಂದ್ರಃ = ವಾದೀಂದ್ರರೆನ್ನುವವರು, ಗುರುಗುಣಸ್ತವಂ = ಈ ಗುರುಗುಣಸ್ತವನವನ್ನು, ಚಕ್ರೇ = ರಚಿಸಿದರು.

**ತಾತ್ಪರ್ಯ :** ಈ ಪ್ರಕಾರವಾಗಿ ಶ್ರೀರಾಘವೇಂದ್ರಾರ್ಯರ ಗುರುವಂಶ ಮತ್ತು ಶಿಷ್ಯವಂಶ (ವಿದ್ಯಾಸಂಬಂಧಿಗಳ ವಂಶ ಹಾಗೂ ಆಜ್ಞಾಕಾರಿಗಳ ವಂಶ) ಉಭಯವಂಶ-ವೆಂಬ ಸಮುದ್ರಕ್ಕೆ ಚಂದ್ರಮನಂತಿರುವ, ಶ್ರೀಉಪೇಂದ್ರತೀರ್ಥರ ವರಕುಮಾರಕರಾದ ಶ್ರೀವಾದೀಂದ್ರತೀರ್ಥರು ಈ ಗುರುಗುಣಸ್ತವನವನ್ನು ರಚಿಸಿದರು. (ಶ್ರೀರಾಘವೇಂದ್ರರ ಉಭಯವಂಶದ ಬಗ್ಗೆ ಪರಿಶಿಷ್ಟ-ii ರಲ್ಲಿ ವಿಸ್ತಾರವಾಗಿ ಚರ್ಚಿಸಲಾಗಿದೆ.)

**ಮಾದ್ಯದದ್ವೈತವಿದ್ವಾವದ್ಗರ್ವನಿರ್ವಾಪಣಕ್ಷಮಃ ।**
**ವಾದೀಂದ್ರಯತಿರಾಟ್ ತೇನೇ ಭಕ್ತ್ಯಾ ಗುರುಗುಣಸ್ತವಮ್ ॥೩೯॥**

**ಅನ್ವಯಾರ್ಥ :** ಮಾದ್ಯದದ್ವೈತವಿದ್ವಾವದ್ಗರ್ವನಿರ್ವಾಪಣಕ್ಷಮಃ = ಮದಿಸಿದ ಅದ್ವೈತವಿದ್ವಾಂಸರ ಗರ್ವವನ್ನು ಪರಿಹರಿಸುವಲ್ಲಿ ಸಮರ್ಥರಾದ, ವಾದೀಂದ್ರ-ಯತಿರಾಟ್ = ಶ್ರೀವಾದೀಂದ್ರತೀರ್ಥರೆಂಬ ಯತಿರಾಜರು, ಗುರುಗುಣಸ್ತವಂ = ಈ ಗುರುಗುಣಸ್ತವನವನ್ನು, ಭಕ್ತ್ಯಾ = ಭಕ್ತಿಯಿಂದ, ತೇನೇ = ವಿಸ್ತಾರವಾಗಿ ರಚಿಸಿದರು.

ಮದಿಸಿದ ಅದ್ವೈತವಿದ್ವಾಂಸರ ಗರ್ವವನ್ನು ಪರಿಹರಿಸುವುದರಲ್ಲಿ ಸಮರ್ಥರಾದ ಶ್ರೀವಾದೀಂದ್ರಯತಿರಾಜರು ಈ ಗುರುಗುಣಸ್ತವನವನ್ನು ಭಕ್ತಿಪೂರ್ವಕ ವಿಸ್ತಾರವಾಗಿ ರಚಿಸಿದರು.

**॥ ಇತಿ ಶ್ರೀಮತ್ಸರ್ವತಂತ್ರಸ್ವತಂತ್ರಶ್ರೀಮದುಪೇಂದ್ರತೀರ್ಥಗುರುಪಾದಶಿಷ್ಯೇಣ ಶ್ರೀಮದ್ವಾದೀಂದ್ರತೀರ್ಥೇನ ವಿರಚಿತಂ ಗುರುಗುಣಸ್ತವನಂ ಸಮಾಪ್ತಮ್ ॥**

**॥ ಇಲ್ಲಿಗೆ ಶ್ರೀಮದುಪೇಂದ್ರತೀರ್ಥಗುರುಪಾದರ ಶಿಷ್ಯರಾದ ಶ್ರೀಮದ್ವಾದೀಂದ್ರ-ತೀರ್ಥರು ವಿರಚಿಸಿದ ಗುರುಗುಣಸ್ತವನವು ಸಮಾಪ್ತವಾಯಿತು. ಶ್ರೀಕೃಷ್ಣಾರ್ಪಣಮಸ್ತು ॥**

**ವಿದ್ಯಾರತ್ನವಿದ್ಯಾಭೂಷಣೇತ್ಯಾದಿ ಬಿರುದಾಲಂಕೃತ ಪೂಜ್ಯರಾಘವೇಂದ್ರಾಚಾರ್ಯ ಸ್ವಾ. ಪಂಚಮುಖಿ-ಯವರ ತೃತೀಯ ಪುತ್ರ ಆನಂದತೀರ್ಥನಿಂದ ಶ್ರೀಮದ್ರಾಘವೇಂದ್ರತೀರ್ಥಗುರುಸಾರ್ವಭೌಮರ ಅನುಗ್ರಹಾಕಾಂಕ್ಷಿಯಾಗಿ ಯಥಾಮತಿ ಬರೆಯಲ್ಪಟ್ಟ ಶ್ರೀಗುರುಗುಣಸ್ತವನದ ಕನ್ನಡಾನುವಾದವೂ ಸಮಾಪ್ತವಾಯಿತು. ॥ ಶ್ರೀಕೃಷ್ಣಾರ್ಪಣಮಸ್ತು ॥**

# ಅಧಿಕ ಶ್ಲೋಕಗಳು

ಇದುವರೆಗಿನ ಗುರುಗುಣಸ್ತವನದ ಶ್ಲೋಕಗಳಲ್ಲದೇ ಕೊನೆಗೆ ಗುರುಗುಣಸ್ತವನಕ್ಕೆ ಸೇರಿದ ಇನ್ನೂ ೫ ಅಧಿಕ ಶ್ಲೋಕಗಳು ದೊರೆತಿರುವುದಾಗಿ ಶ್ರೀಪಾದಪುತ್ರ ಶ್ರೀರಾಜಾ ಶ್ರೀಗುರುರಾಜಾಚಾರ್ಯರು ತಮ್ಮ ಗ್ರಂಥದಲ್ಲಿ ಕಾಣಿಸಿದ್ದಾರೆ. ಶ್ರೀಜಯರಾಮಾರ್ಯರ ಗುರುಗುಣಸ್ತವನ ವ್ಯಾಖ್ಯಾನವಿರುವ ಒಂದು ತಾಳಾವಲೀ ಪ್ರತಿಯಲ್ಲಿ ಕಾಣಿಸಿರುವ ಈ ಶ್ಲೋಕಗಳನ್ನು ಆ ಗ್ರಂಥದಿಂದ ಉದ್ಧರಿಸಿದ್ದನ್ನು ಕೆಳಗೆ ಕೊಡಲಾಗಿದೆ.

೧. **ಅವತಾರಿಕಾ :** ಶ್ರೀವಾದೀಂದ್ರತೀರ್ಥರು ತಾವು ರಚಿಸಿದ ಗುರುಗುಣಸ್ತವನವನ್ನು ಪರಿಸಮಾಪ್ತಿಗೊಳಿಸುತ್ತ ಗ್ರಂಥಾಂತ್ಯದಲ್ಲಿ ಆರಾಧ್ಯದೇವತೆಯಾದ ಶ್ರೀಮೂಲರಾಮಚಂದ್ರದೇವರಲ್ಲಿ ಐಹಿಕಾಮುಷ್ಮಿಕ ಸಂಪತ್ತನ್ನು ಕರುಣಿಸುವಂತೆ ಪ್ರಾರ್ಥಿಸುತ್ತಾರೆ.

**ಸಮುದ್ಯತ್ಸ್ವಾಲೋಕಕ್ಷಣರಚಿತವಾಚಂಯಮವಧೂ-**
**ಶಿಲಾಭಾವಾಭಾವಸ್ಫುಟವಿದಿತಸಂಸಿದ್ಧಮಹಿಮಾ ।**
**ಮಹೀಕನ್ಯಾಕಾಂತಃ ಕರಕಲಿತಕೋದಂಡವಿಶಿಖಃ**
**ಅಭಿರಾಮಃ ಶ್ರೀರಾಮಃ ಶ್ರಿಯಮಪರಿಮೇಯಾಂ ದಿಶತು ನಃ ॥ ೧ ॥**

**ಅನ್ವಯಾರ್ಥ :** **ಸಮುದ್ಯತ್ಸ್ವಾಲೋಕಕ್ಷಣರಚಿತವಾಚಂಯಮವಧೂಶಿಲಾಭಾವಾಭಾವಸ್ಫುಟವಿದಿತಸಂಸಿದ್ಧಮಹಿಮಾ** – **ಸಮುದ್ಯತ್** = ವಿಕಸಿತವಾದ, **ಸ್ವ** = ತನ್ನ, **ಆಲೋಕ** = ಕೃಪಾಕಟಾಕ್ಷವೀಕ್ಷಣೆಯ, **ಕ್ಷಣ** = ಕ್ಷಣದಲ್ಲೇ, **ರಚಿತ** = ಉಂಟುಮಾಡಲ್ಪಟ್ಟ, **ವಾಚಂಯಮ** = ಮೌನಿಯಾದ ಗೌತಮರ, **ವಾಚಂಯಮ** = ಜಡದಂತೆ ಮೂಕವಾಗಿದ್ದ, **ವಧೂ** = ಸ್ತ್ರೀಯ, **ಶಿಲಾಭಾವಾಭಾವ** = ಶಿಲಾಭಾವದ ಅಭಾವವಾದ ಸ್ತ್ರೀತ್ವದಿಂದ, **ಸ್ಫುಟ** = ಸ್ಪಷ್ಟವಾಗಿ, **ವಿದಿತ** = ತಿಳಿಯಲ್ಪಟ್ಟ, **ಸಂಸಿದ್ಧ** = ಸ್ವತಸ್ಸಿದ್ಧವಾದ, **ಮಹಿಮಾ** = ಮಹಿಮೆಯುಳ್ಳ, **ಮಹೀಕನ್ಯಾಕಾಂತಃ** – **ಮಹೀ** = ಭೂದೇವಿಯ, **ಕನ್ಯಾ** = ಮಗಳಾದ ಸೀತಾದೇವಿಯ, **ಕಾಂತಃ** = ಪತಿಯಾದ, **ಕರಕಲಿತಕೋದಂಡವಿಶಿಖಃ** – **ಕರ** = ಕೈಗಳಲ್ಲಿ, **ಕಲಿತ** = ಧರಿಸಲ್ಪಟ್ಟ, **ಕೋದಂಡ** = 'ಕೋದಂಡ' ಧನುಸ್ಸು ಮತ್ತು **ವಿಶಿಖ** = ಬಾಣ ಇವುಗಳುಳ್ಳ, **ಅಭಿರಾಮಃ** = ಅತಿಮನೋಹರನಾದ, **ಶ್ರೀರಾಮಃ** = ಶ್ರೀರಾಮಚಂದ್ರನು, **ನಃ** = ನಮಗೆ, **ಅಪರಿಮೇಯಾಂ** = ಅಪರಿಮಿತವಾದ, **ಶ್ರಿಯಂ** = ಸಂಪತ್ತನ್ನು, **ದಿಶತು** = ಕೊಡಲಿ.

**ತಾತ್ಪರ್ಯ :** ಗೌತಮರ ಶಾಪದಿಂದ ಶಿಲೆಯಾಗಿ ಬಿದ್ದಿದ್ದ ಅವರ ಪತ್ನಿಯಾದ ಅಹಲ್ಯೆಯನ್ನು ತನ್ನ ಕೃಪಾಕಟಾಕ್ಷದಿಂದ ಶಾಪಮುಕ್ತಳನ್ನಾಗಿ ಮಾಡಿ ಪುನಃ ಸ್ತ್ರೀತ್ವವನ್ನು ಕರುಣಿಸಿದ, ಕೈಯಲ್ಲಿ ಕೋದಂಡಧನುಸ್ಸು ಮತ್ತು ಬಾಣಗಳನ್ನು ಧರಿಸಿದ, ಮನೋಹರನಾದ ಸೀತಾಪತಿ ಶ್ರೀರಾಮಚಂದ್ರನು ನಮಗೆ ಅಪರಿಮಿತವಾದ ಐಹಿಕಾಮುಷ್ಮಿಕ ಸಂಪತ್ತನ್ನು ಕರುಣಿಸಲಿ.

**೨. ಅವತಾರಿಕಾ :** ಶ್ರೀಲಕ್ಷ್ಮೀನಾರಾಯಣಮುನಿಗಳೇ (ಶ್ರೀಶ್ರೀಪಾದರಾಜರು) ಮೊದಲಾದ ಅನೇಕ ಯತಿಶ್ರೇಷ್ಠರಿಗೆ ವಿದ್ಯಾಗುರುಗಳಾಗಿದ್ದ ಶ್ರೀವಿಬುಧೇಂದ್ರತೀರ್ಥರನ್ನು ಸ್ತುತಿಸುತ್ತಾರೆ.

**ಅಮೀ ಲಕ್ಷ್ಮೀನಾರಾಯಣಮುನಿಮುಖಾಶೇಷಯತಯೋ**
**ಯತೋ ವಿದ್ಯಾಮ್ಮುದ್ಧಾಮಧಿಜಗುರಧಿಷ್ಠಾನಪತಯಃ ।**
**ಮುಹುರ್ಮೋಹೋದಂಚತ್ಪರಮತಪರೀಭಾವಚತುರಃ**
**ಸ ಮೇ ಭೂಯಃ ಶ್ರೇಯೋ ದಿಶತು ವಿಬುಧೇಂದ್ರವ್ರತಿಪತಿಃ ॥ ೨ ॥**

**ಅನ್ವಯಾರ್ಥ :** **ಅಧಿಷ್ಠಾನಪತಯಃ** = ರಾಜಗುರುಗಳೂ ಹಾಗೂ ಮಹಾಸಂಸ್ಥಾನಾಧಿಪತಿಗಳೂ ಆಗಿದ್ದ, **ಅಮೀ** = ಈ, **ಲಕ್ಷ್ಮೀನಾರಾಯಣಮುನಿಮುಖಾಶೇಷಯತಯಃ** – **ಲಕ್ಷ್ಮೀನಾರಾಯಣ** = ಶ್ರೀಲಕ್ಷ್ಮೀನಾರಾಯಣಮುನಿಗಳೇ, **ಮುಖ** = ಪ್ರಮುಖರಾದ, **ಅಶೇಷ** = ಅನೇಕ, **ಯತಯಃ** = ಯತಿಗಳು, **ಯತಃ** = ಯಾರಿಂದ, **ಉದ್ಧಾಂ** = ಅಪ್ರತಿಹತವಾದ ಹಾಗೂ, **ವಿದ್ಯಾಂ** = ಸತ್ಪರಂಪರೆಯಿಂದ ಬಂದ ಸಕಲ ವಿದ್ಯೆಯನ್ನು, **ಅಧಿಜಗುಃ** = ಪಡೆದರೋ, **ಮುಹುಃ** = ಪುನಃ ಪುನಃ, **ಮೋಹೋದಂಚತ್ಪರಮತಪರೀಭಾವಚತುರಃ** – **ಮೋಹೋದಂಚತ್** = ಮೋಹವನ್ನುಂಟು ಮಾಡುವ, **ಪರಮತ** = ಪರಮತಗಳನ್ನು, **ಪರೀಭಾವ** = ಸೋಲಿಸುವಲ್ಲಿ, **ಚತುರಃ** = ಚತುರರಾದ, **ಸಃ ವಿಬುಧೇಂದ್ರವ್ರತಿಪತಿಃ** = ಆ ವಿಬುಧೇಂದ್ರರೆಂಬ ಯತಿಶ್ರೇಷ್ಠರು, **ಮೇ** = ನನಗೆ, **ಭೂಯಃ** = ಬಹಳವಾದ, **ಶ್ರೇಯಃ** = ಶ್ರೇಯಸ್ಸನ್ನು, **ದಿಶತು** = ಅನುಗ್ರಹಿಸಲಿ.

**ತಾತ್ಪರ್ಯ :** ಶ್ರೀಶ್ರೀಪಾದರಾಜರೆಂದು ಪ್ರಸಿದ್ಧರಾಗಿರುವ ಶ್ರೀಲಕ್ಷ್ಮೀನಾರಾಯಣ ಮುನಿಗಳೇ ಮೊದಲಾದ ಯತಿವರ್ಯರು ಶ್ರೀವಿಬುಧೇಂದ್ರತೀರ್ಥರಲ್ಲಿ (ನಂತರ ಶ್ರೀಜಿತಾಮಿತ್ರತೀರ್ಥರಲ್ಲಿ) ಸಕಲ ಶಾಸ್ತ್ರಗಳ ಅಧ್ಯಯನ ಮಾಡಿ ಸದ್ವಿದ್ಯೆಯನ್ನು ಪಡೆದವರಾಗಿದ್ದರು. ಈಗಿನ ಸದ್ವಿದ್ಯಾಪರಂಪರೆಗೆ ಶ್ರೀವಿಬುಧೇಂದ್ರತೀರ್ಥರೇ ಪ್ರಮುಖ ಕಾರಣರು. '**ಆಕೇರಲಂ ತಥಾಸೇತುಂ ಆಗಂಗಂ ಚಾಹಿಮಾಲಯಮ್ । ನಿರಾಕೃತಾದ್ವೈತಶೈವಂ ವಿಬುಧೇಂದ್ರಗುರುಂ ಭಜೇ ॥**' ಎಂಬ ಚರಮಶ್ಲೋಕದಿಂದ ವರ್ಣಿತರಾದ

ಶ್ರೀವಿಬುಧೇಂದ್ರತೀರ್ಥರು ಭರತಭೂಮಿಯಲ್ಲಿ ಎಲ್ಲೆಡೆ ಸಂಚರಿಸಿ ಪರವಾದಿಗಳ ಸದ್ದಡಗಿಸಿದ್ದರು. ಇಂಥ ಗುರುವರ್ಯರು ನಮಗೆ ಬಹಳವಾದ ಸಂಪತ್ತನ್ನು ಕೊಡಲಿ.

೩. **ಅವತಾರಿಕಾ :** ಕರ್ಣಾಟಕ ವಿದ್ಯಾಸಿಂಹಾಸನಾಧೀಶ್ವರರಾದ ಶ್ರೀವ್ಯಾಸರಾಜ-ಗುರುಸಾರ್ವಭೌಮರನ್ನು ಈಗ ಸ್ತುತಿಸುತ್ತಾರೆ –

**ಪರಪದರತಿಪಾರ್ಥಃ ಪಾಲಿತಛಾತ್ರಸಾರ್ಥಃ**
**ಪಟುವಿದಿತನಯಾರ್ಥಃ ಪಾಣಿದತ್ತಾಖಿಲಾರ್ಥಃ ।**
**ಪರವಿಜಯಸಮರ್ಥಃ ಪಾವಿತಾಶೇಷತೀರ್ಥಃ**
**ಪರಿಮಿಲಿತಪುಮರ್ಥಃ ಪಾತು ಮಾಂ ವ್ಯಾಸತೀರ್ಥಃ** ॥ ೩ ॥

**ಅನ್ವಯಾರ್ಥ :** **ಪರಪದರತಿಪಾರ್ಥಃ** = ಪರಮಾತ್ಮನ ಪಾದಪದ್ಮಗಳಲ್ಲಿಯ ಆಸಕ್ತಿಯ ವಿಷಯದಲ್ಲಿ ಪಾರ್ಥನಂತಿರುವ, **ಪಾಲಿತಛಾತ್ರಸಾರ್ಥಃ** = ಪಾಲಿಸಲ್ಪಟ್ಟ ವಿದ್ಯಾರ್ಥಿ ಸಮೂಹವುಳ್ಳ, **ಪಟುವಿದಿತನಯಾರ್ಥಃ** = ಚೆನ್ನಾಗಿ ತಿಳಿಯಲ್ಪಟ್ಟ ಅರ್ಥಶಾಸ್ತ್ರವುಳ್ಳ, **ಪಾಣಿದತ್ತಾಖಿಲಾರ್ಥಃ** = ವರಹಸ್ತ ಪ್ರದರ್ಶನ ಮಾತ್ರದಿಂದಲೇ ಅನುಗ್ರಹಿಸಲ್ಪಟ್ಟ ಆರಾಧಕರ ಅಖಿಲಾರ್ಥಗಳುಳ್ಳ, **ಪರವಿಜಯಸಮರ್ಥಃ** = ಪರಮತ-ದವರನ್ನು ಸೋಲಿಸಿ ವಿಜಯ ಪಡೆಯುವಲ್ಲಿ ಸಮರ್ಥರಾದ, **ಪಾವಿತಾಶೇಷತೀರ್ಥಃ** = ಪವಿತ್ರಗೊಳಿಸಲ್ಪಟ್ಟ ಅಶೇಷತೀರ್ಥಗಳುಳ್ಳ, **ಪರಿಮಿಲಿತಪುಮರ್ಥಃ** = ಒಂದೆಡೆ ಸೇರಿ ಕೊಂಡಿರುವ ಪುರುಷಾರ್ಥಗಳುಳ್ಳ, **ವ್ಯಾಸತೀರ್ಥಃ** = ಶ್ರೀವ್ಯಾಸತೀರ್ಥಗುರುಸಾರ್ವ-ಭೌಮರು, **ಮಾಂ ಪಾತು** = ನನ್ನನ್ನು ರಕ್ಷಿಸಲಿ.

**ತಾತ್ಪರ್ಯಾರ್ಥ :** ಸದಾಕಾಲದಲ್ಲಿಯೂ ಪರಮಾತ್ಮನ ಪಾದಕಮಲಗಳನ್ನೇ ಸ್ಮರಿಸುವ, ಸಹಸ್ರಾರು ವಿದ್ಯಾರ್ಥಿಗಳನ್ನು ಹಾಗೂ ಶಿಷ್ಯರನ್ನು ಪಾಲಿಸಿದ, ಅರ್ಥಶಾಸ್ತ್ರ-ವನ್ನು ಚೆನ್ನಾಗಿ ಅರಿತು ರಾಜ್ಯಭಾರವನ್ನು ನಿರ್ವಹಿಸಲು ಸಮರ್ಥರಾಗಿದ್ದ, ತಮ್ಮ ವರಹಸ್ತದಿಂದ ಅನೇಕ ಶಿಷ್ಯರ ಇಷ್ಟಾರ್ಥಗಳನ್ನು ಪೂರೈಸಿದ, ಪರವಾದಿಗಳನ್ನು ಸೋಲಿಸಿ ಜಯಶೀಲರಾದ, ಸಂಚಾರದಲ್ಲಿ ಅನೇಕ ತೀರ್ಥಗಳನ್ನೇ ಪವಿತ್ರಗೊಳಿಸಿದ, ಚತುರ್ವಿಧ ಪುರುಷಾರ್ಥಗಳನ್ನು ಕೊಡಲು ಸಮರ್ಥರಾದ, ಶ್ರೀವ್ಯಾಸತೀರ್ಥಗುರುಸಾರ್ವಭೌಮರು ನನ್ನನ್ನು ರಕ್ಷಿಸಲಿ.

೪. **ಅವತಾರಿಕಾ :** ಶ್ರೀರಾಘವೇಂದ್ರತೀರ್ಥರನ್ನು ನಮಿಸುತ್ತಾರೆ.

**ಯೇನೋದಾರಗುಣೇನ ಶ್ರುತಿಗಣಸೂತ್ರಾಣಿ ಭಾಷ್ಯತಟ್ಟೀಕೇ ।**
**ತಟ್ಟೀಕೇರಿತಸರ್ವಂ ವಿವೃತಂ ತಂ ನೌಮಿ ರಾಘವೇಂದ್ರಗುರುಮ್** ॥ ೪ ॥

**ಅನ್ವಯಾರ್ಥ** : **ಉದಾರಗುಣೇನ** = ಔದಾರ್ಯಾದಿ ಗುಣಗಳಿಂದ ಕೂಡಿದ, **ಯೇನ** = ಯಾವ ಶ್ರೀರಾಘವೇಂದ್ರಗುರುಗಳಿಂದ, **ಶ್ರುತಿಗಣಸೂತ್ರಾಣಿ** = ವೇದ ಸಮೂಹಗಳು, ಬ್ರಹ್ಮಸೂತ್ರಗಳು ಮತ್ತು **ಭಾಷ್ಯತಟ್ಟೀಕೇ – ಭಾಷ್ಯ** = ಗೀತಾಭಾಷ್ಯ, ಸೂತ್ರಭಾಷ್ಯಾದಿಗಳು ಮತ್ತು, **ತಟ್ಟೀಕೇ** = ಅವುಗಳ ಮೇಲಿನ ಟೀಕಾ ಗ್ರಂಥಗಳು, **ತಟ್ಟೀಕೇರಿತಸರ್ವಂ** = ಟೀಕಾಗ್ರಂಥಗಳಲ್ಲಿ ಹೇಳಲ್ಪಟ್ಟ ಸರ್ವವೂ, **ವಿವೃತಂ** = ವಿವರಿಸಲ್ಪಟ್ಟಿರುವದೋ, **ತಂ ರಾಘವೇಂದ್ರಗುರುಂ** = ಅಂತಹ ಶ್ರೀರಾಘವೇಂದ್ರತೀರ್ಥ ಗುರುಗಳನ್ನು, **ನೌಮಿ** = ನಮಸ್ಕರಿಸುತ್ತೇನೆ.

**ತಾತ್ಪರ್ಯ** : ಔದಾರ್ಯಾದಿ ಗುಣಗಳಿಂದ ಕೂಡಿದ ಶ್ರೀರಾಘವೇಂದ್ರ-ತೀರ್ಥರು, ವೇದತ್ರಯ, ಬ್ರಹ್ಮಸೂತ್ರಗಳು ಮತ್ತು ಸೂತ್ರಭಾಷ್ಯ, ಗೀತಾಭಾಷ್ಯಾದಿಗಳ ಮೇಲಿನ ಟೀಕಾಗ್ರಂಥಗಳು ಮೊದಲಾದವುಗಳಿಗೆ ವ್ಯಾಖ್ಯಾನಗಳನ್ನು ಬರೆದು ಸಜ್ಜನ ವೃಂದಕ್ಕೆ ಮಹದುಪಕಾರವನ್ನು ಮಾಡಿರುತ್ತಾರೆ. ಇಂಥ ಶ್ರೀರಾಘವೇಂದ್ರಗುರುಸಾರ್ವ-ಭೌಮರನ್ನು ನಮಿಸುತ್ತೇನೆ.

೫. **ಅವತಾರಿಕಾ** : ಸ್ವಗುರುಗಳಾದ ಶ್ರೀಉಪೇಂದ್ರತೀರ್ಥರನ್ನು ಸ್ತುತಿಸುತ್ತಾರೆ.

**ಸುಮತೀಂದ್ರವರಾಪ್ತಭಾವುಕಃ ಸುಮನೋವೃಂದಸಮೃದ್ಧಿದಾಯಕಃ ।**
**ಮಮ ಚೇತಸಿ ಮೌನಿನಾಯಕಃ ರಮತಾಂ ಶ್ರೀಮದುಪೇಂದ್ರದೇಶಿಕಃ ॥ ೫ ॥**

**ಅನ್ವಯಾರ್ಥ** : **ಸುಮತೀಂದ್ರವರಾಪ್ತಭಾವುಕಃ – ಸುಮತೀಂದ್ರವರ** = ಶ್ರೀಸುಮತೀಂದ್ರತೀರ್ಥ ಗುರುವರರ ಅನುಗ್ರಹದಿಂದ, **ಆಪ್ತ** = ಹೊಂದಲ್ಪಟ್ಟ, **ಭಾವುಕಃ** = ಸಕಲಶ್ರೇಯಸ್ಸುಗಳುಳ್ಳ, **ಸುಮನೋವೃಂದಸಮೃದ್ಧಿದಾಯಕಃ – ಸುಮನೋ-ವೃಂದ** = ಸಹೃದಯಿಗಳಾದ ಸಜ್ಜನ ವೃಂದಕ್ಕೆ, **ಸಮೃದ್ಧಿ** = ಸಕಲ ಸಮೃದ್ಧಿಗಳನ್ನು, **ದಾಯಕಃ** = ಅನುಗ್ರಹಿಸುವವರಾದ, **ಮೌನಿನಾಯಕಃ** = ಮುನಿಶ್ರೇಷ್ಠರಾದ, **ಶ್ರೀಮದುಪೇಂದ್ರದೇಶಿಕಃ** = ಶ್ರೀಮದುಪೇಂದ್ರತೀರ್ಥಯತಿವರ್ಯರು, **ಮಮ ಚೇತಸಿ** = ನನ್ನ ಮನಸ್ಸಿನಲ್ಲಿ, **ರಮತಾಂ** = ರಾರಾಜಿಸಲಿ.

**ತಾತ್ಪರ್ಯ** : ಶ್ರೀಉಪೇಂದ್ರತೀರ್ಥರು ಗುರುಗಳಾದ ಶ್ರೀಸುಮತೀಂದ್ರತೀರ್ಥ ಶ್ರೀಪಾದರಲ್ಲಿ ಸಕಲ ಶಾಸ್ತ್ರಗಳ ಅಧ್ಯಯನ ಮಾಡಿ ಅವರ ಪೂರ್ಣಾನುಗ್ರಹಕ್ಕೆ ಪಾತ್ರರಾಗಿದ್ದರಿಂದ ಸರ್ವ ಶ್ರೇಯಸ್ಸುಗಳನ್ನು ಪಡೆದವರಾಗಿದ್ದರು. ಪರಮ ಉದಾರಿಗಳಾದ ಶ್ರೀಉಪೇಂದ್ರತೀರ್ಥರು ಸಜ್ಜನರ ಇಷ್ಟಾರ್ಥಗಳನ್ನು ತಡವಿಲ್ಲದೇ ಪೂರೈಸುತ್ತಿದ್ದರು. ಮುನಿಶ್ರೇಷ್ಠರಾದ ಇಂಥ ಶ್ರೀಮದುಪೇಂದ್ರತೀರ್ಥರು ಸದಾಕಾಲ ನಮ್ಮ ಮನಸ್ಸಿನಲ್ಲಿ ರಾರಾಜಿಸಲಿ.

**ಇತಿ ಶ್ರೀರಾಘವೇಂದ್ರಾರ್ಯೋರ್ಭಯವಂಶಾಬ್ಧಿಚಂದ್ರಮಾಃ ।**
**ಉಪೇಂದ್ರಸೂನುರ್ವಾದೀಂದ್ರಶ್ಚಕ್ರೇ ಗುರುಗುಣಸ್ತವನಮ್ ॥ ೬ ॥**

ಈ ಶ್ಲೋಕದ ಅನ್ವಯಾರ್ಥ, ತಾತ್ಪರ್ಯಾರ್ಥಗಳನ್ನು ಈ ಹಿಂದೆಯೇ ಕೊಡಲಾಗಿದೆ.

ಇವಿಷ್ಟು ತಾಳಾವಲಿಯಲ್ಲಿರುವ ಗುರುಗುಣಸ್ತವನದ ಅಧಿಕ ಶ್ಲೋಕಗಳು. ಕೊನೆಗೆ ವ್ಯಾಖ್ಯಾಕಾರರು ಕೆಳಗಿನ ಶ್ಲೋಕದೊಂದಿಗೆ ತಮ್ಮ ವ್ಯಾಖ್ಯಾನವನ್ನು ಉಪಸಂಹರಿಸುತ್ತಾರೆ –

**ಇತಿ ಶ್ರೀಧೀರೇಂದ್ರವ್ರತಿವಿರಚಿತಾಖ್ಯಾ ವರಗುರೋಃ**
**ಗುಣಾಖ್ಯಸ್ತೋತ್ರಸ್ಯಾತುಲಮತಿಭಿರುದ್ಧೃತ್ಯ ವಿವಿಧೈಃ ।**
**ಗರಿಷ್ಠೈಸ್ಸಂವಾಕ್ಯೈರ್ಮನುಜದುರಿತಾದ್ರಿಪ್ರದಹನಾ–**
**ನಲೈರ್ಭಾನೋಃ ಕೋಟ್ಯಾಂತರನಿಕರಪೂರ್ಣೈರ್ಭುವಿ ಸದಾ ॥ ೭ ॥**

**ಅನ್ವಯಾರ್ಥ** : **ಮನುಜದುರಿತಾದ್ರಿಪ್ರದಹನಾನಲೈಃ** – **ಮನುಜ** = ಮನುಷ್ಯರ, **ದುರಿತಾದ್ರಿ** = ದುರಿತಗಳೆಂಬ ಗಿಡಗಳನ್ನು (ಅದ್ರಯೋ ದ್ರುಮಶೈಲಾರ್ಕಾಃ । ಅಮರ ೩-೩೧೯), **ಪ್ರದಹನ** = ಸುಟ್ಟು ಭಸ್ಮ ಮಾಡುವಲ್ಲಿ, **ಅನಲೈಃ** = ಕಾಡ್ಗಿಚ್ಚಿನಂತಿರುವ, **ಭಾನೋಃ ಕೋಟ್ಯಾಂತರನಿಕರಪೂರ್ಣೈಃ** – **ಭಾನೋಃ** = ಸೂರ್ಯನ, **ಕೋಟ್ಯಾಂತರ** = ಅನೇಕ ಕೋಟಿ, **ನಿಕರ** = ಕಿರಣ ಸಮೂಹಗಳಿಂದ, **ಪೂರ್ಣೈಃ** = ತುಂಬಿರುವ, **ಅತುಲಮತಿಭಿಃ** = ಅಸದೃಶ ಪ್ರತಿಭಾಪೂರ್ಣರಾದ ಶ್ರೀಮದ್ವಾದೀಂದ್ರ-ತೀರ್ಥರಿಂದ, **ವಿವಿಧೈಃ** = ನಾನಾವಿಧವಾದ, **ಗರಿಷ್ಠೈಃ** = ಉತ್ತಮ, **ಸಂವಾಕ್ಯೈಃ** = ಸೂಕ್ತಿಗಳಿಂದ ವರ್ಣಿತವಾದ, **ವರಗುರೋಃ** = ಶ್ರೇಷ್ಠಗುರುವೃಂದದ, **ಗುಣಾಖ್ಯ-ಸ್ತೋತ್ರಸ್ಯ** = ಗುಣಸ್ತವನವೆಂಬ ಸ್ತೋತ್ರಕ್ಕೆ, **ಶ್ರೀಧೀರೇಂದ್ರವ್ರತಿವಿರಚಿತಾಖ್ಯಾ ಇತಿ** = ಶ್ರೀಧೀರೇಂದ್ರತೀರ್ಥಯತಿವಿರಚಿತ ವ್ಯಾಖ್ಯಾನವು ಸಮಾಪ್ತವಾಯಿತು.

**ತಾತ್ಪರ್ಯ** : ಅಪ್ರತಿಮ ಪ್ರತಿಭಾಶಾಲಿಗಳಾದ, ಸಜ್ಜನರ ದುರಿತಗಳೆಂಬ ವೃಕ್ಷಗಳಿಗೆ ಕಾಡ್ಗಿಚ್ಚಿನಂತಿರುವ, ಕೋಟ್ಯಾವಧಿಸೂರ್ಯರ ಕಿರಣಗಳಂತೆ ತೇಜಸ್ವಿಗಳಾದ ಶ್ರೀಮದ್ವಾದೀಂದ್ರತೀರ್ಥರು ನಾನಾವಿಧವಾದ ಸಾಲಂಕಾರಭರಿತವಾದ ತಮ್ಮ ಸೂಕ್ತಿ-ಗಳಿಂದ ದ್ವಾದಶ ಗುರುಗಳ ಗುಣಸ್ತವನವನ್ನು ಮಾಡಿ ರಚಿಸಿದ **ಗುರುಗುಣಸ್ತವನ** ಎಂಬ ಖಂಡಕಾವ್ಯಕ್ಕೆ ಶ್ರೀಧೀರೇಂದ್ರತೀರ್ಥರು ಬರೆದ ವ್ಯಾಖ್ಯಾನವು ಸಮಾಪ್ತವಾಯಿತು.

**ವಿಶೇಷವಿಚಾರ** : ವ್ಯಾಖ್ಯಾನದ ಪ್ರಾರಂಭದಲ್ಲಿ '**ತಚ್ಛಿಷ್ಯೋ ಜಯರಾಮನಾಮಕ-ಸುಧೀಃ ವ್ಯಾಕರ್ತುಮುತ್ಕಂಠತೇ ॥**' ಎಂದೂ, ಅಂತ್ಯದಲ್ಲಿ "**ಇತಿ ಶ್ರೀಯತಿಕುಲತಿಲಕ ವಾದೀಂದ್ರಪೂಜ್ಯ ಚರಣಾಂತೇವಾಸಿ ಜಯರಾಮಾರ್ಯೇಣ ವಿರಚಿತಾ ಗುರುಗುಣನುತಿ-**

ವ್ಯಾಖ್ಯಾ ಸಮಾಪ್ತಾ" ಎಂದೂ ಇರುವದನ್ನು ಗಮನಿಸಿದರೆ ಗುರುಗುಣಸ್ತವನದ ಈ ವ್ಯಾಖ್ಯಾನಕಾರರು ಜಯರಾಮಾರ್ಯರೇ ಎಂಬುದು ನಿಶ್ಚಿತ. ಆದರೆ ಹೊಸದಾಗಿ ದೊರಕಿರುವ ಈ ಮೇಲಿನ ಶ್ಲೋಕಗಳ ಅಂತ್ಯದ ವ್ಯಾಖ್ಯಾನೋಪಸಂಹಾರ ಶ್ಲೋಕದಲ್ಲಿ 'ಇತಿ ಶ್ರೀಧೀರೇಂದ್ರವ್ರತಿವಿರಚಿತಾಖ್ಯಾ' ಎಂದು ಶ್ರೀಧೀರೇಂದ್ರತೀರ್ಥರ ಉಲ್ಲೇಖವಿದೆ. ಇದಕ್ಕೇನು ಸಮಾಧಾನ ? ಶ್ರೀಜಯರಾಮಾರ್ಯರು ತುರೀಯಾಶ್ರಮವನ್ನು ಸ್ವೀಕರಿಸಿ ಶ್ರೀಧೀರೇಂದ್ರತೀರ್ಥರೆಂದಾದ ಮೇಲೆ ಶ್ರೀವಾದೀಂದ್ರತೀರ್ಥರಿಂದ ಬೇರೆ ಬೇರೆ ಸಂದರ್ಭಗಳಲ್ಲಿ ರಚಿಸಲ್ಪಟ್ಟ ೫ ಶ್ಲೋಕಗಳನ್ನು ಗುರುಗುಣಸ್ತವನದ ಅಂಗವೆಂದು ಗ್ರಹಿಸಿ ಕೊನೆಗೆ ತಮ್ಮ ಉಪಸಂಹಾರ ಶ್ಲೋಕವನ್ನು ಸೇರಿಸಿರಬೇಕೆಂದು ತಿಳಿಯುವುದೇ ಇದಕ್ಕೆ ಸಮಾಧಾನವೆಂದು ತೋರುತ್ತದೆ. ಶ್ರೀವಸುಧೇಂದ್ರತೀರ್ಥರು ಈ ಅಧಿಕಶ್ಲೋಕಗಳನ್ನು ತಮ್ಮ ವ್ಯಾಖ್ಯಾನದಲ್ಲಿ ಪರಿಗಣಿಸಿಲ್ಲ. ಉಪಲಬ್ಧವಿರುವ ಎರಡೂ ವ್ಯಾಖ್ಯಾನಗಳನ್ನು ಅವಲೋಕಿಸಿದಾಗ ಶ್ರೀವಾದೀಂದ್ರತೀರ್ಥರ ಗುರುಗುಣಸ್ತವನದ ಮೂಲವು ೩೭ ಶ್ಲೋಕಗಳನ್ನು ಮಾತ್ರ ಒಳಗೊಂಡಿರುವದೆಂದು ನಿರ್ಧರಿಸಬಹುದು.

**ಉಪಸಂಹಾರ :** ಗುರುಗುಣಸ್ತವನದ ೩೭ ಶ್ಲೋಕಗಳ ಮತ್ತು ಈ ಶ್ಲೋಕಗಳಲ್ಲಿಯ ವಿಶೇಷಣ ಪದಗಳ ವಿಶ್ಲೇಷಣೆಯಿಂದ ಇಲ್ಲಿ ವರ್ಣಿತವಾದ ಗುರುಗಳ ಗುಣಗಳನ್ನು ಈ ರೀತಿ ಸಂಗ್ರಹಿಸಬಹುದು. ಮೂಲ ಗುರುಗಳಾದ ಶ್ರೀವೇದವ್ಯಾಸರಿಂದ ಪ್ರಾರಂಭಿಸಿ ಶ್ರೀರಾಯರ ವರೆಗಿನ ಗುರುಗಳ ಗುಣಸ್ತವನದಲ್ಲಿ, ಜ್ಞಾನಾನಂದಾದಿ ಗುಣಗಳು, ಸರ್ವಜ್ಞತ್ವ, ಪ್ರತಿಭಾ, ಸ್ವಾತಂತ್ರ್ಯ, ಲೋಕಕೃಪಾ, ಶೌಚ, ಐಶ್ವರ್ಯ, ಭಕ್ತ್ಯಾದಿ, ತೇಜಸ್ಸು, ಧೈರ್ಯ, ವಾದಕೌಶಲ, ಪ್ರೌಢಿಮೆ, ಚಾತುರ್ಯ, ಕಲಾನೈಪುಣ್ಯ, ಯಮ, ದಮ, ಮಾಧುರ್ಯ, ಪಟುತಾ, ಕ್ಷೇಮಪ್ರದಾತೃತ್ವ, ಕಾಂತಿ ಇವೇ ಮೊದಲಾದ ಗುಣಗಳ ಸ್ತವನವನ್ನು ಕಾಣುತ್ತೇವೆ. ಶ್ರೀವಾದೀಂದ್ರರು ತಮ್ಮ ಜ್ಯೇಷ್ಠಗುರುಗಳಾದ ಶ್ರೀಸುಮತೀಂದ್ರತೀರ್ಥರ ಅಪಾರ ಜ್ಞಾನ ಹಾಗೂ ಪ್ರತಿಭೆಗಳನ್ನು ಶ್ರೀಉಪೇಂದ್ರತೀರ್ಥರ ಹರಿಭಕ್ತಿ, ಗುರುಭಕ್ತಿ, ಜ್ಞಾನ, ಪ್ರತಿಭಾ, ಗುರುಶುಶ್ರೂಷಾದಿ ಗುಣಗಳನ್ನು ೧೧ನೆಯ ಶ್ಲೋಕದಲ್ಲಿ **(ಯೇ ರಾಮವ್ಯಾಸಪಾದ ...)** ವರ್ಣಿಸಿದ್ದಾರೆ.

ಶ್ರೀರಾಯರ ಗುಣಸ್ತವನದಲ್ಲಿ ಶ್ರೇಷ್ಠಗ್ರಂಥಕರ್ತೃತ್ವರೂಪವಾದ ಗುಣದ (ಗ್ರಂಥಪ್ರಣಯನ) ವರ್ಣನೆಯು ಪ್ರಮುಖವಾಗಿದ್ದರೂ, ಶ್ಲೋಕಗಳಲ್ಲಿರುವ ವಿಶೇಷಣಗಳಿಂದ ಇತರ ಕೆಲವು ಗುಣಗಳ ವರ್ಣನೆಯೂ ಕಂಡುಬರುತ್ತದೆ. ಶ್ರೀರಾಯರಲ್ಲಿರುವ ಇಷ್ಟಪ್ರದತ್ವ, ದಯಾ, ತಪಸ್ಸು, ಯಮ, ದಮ, ಆಹ್ಲಾದಕತ್ವ, ಅಮಿತ ತೇಜಸ್ಸು, ಅನಿತರಸಾಧಾರಣ ಪ್ರತಿಭೆ, ಮನಃಶುದ್ಧಿ, ವಾಕ್‌ಶುದ್ಧಿ, ಕ್ರಿಯಾಶೌಚ, ವಿನಯ, ಬಾಹ್ಯಶುದ್ಧಿ, ಗ್ರಂಥಪ್ರಣಯನ ಚಾತುರ್ಯ, ವ್ಯಾಖ್ಯಾನಕೌಶಲ, ಜ್ಞಾನಾಖ್ಯ ತೇಜಸ್ಸು,

ಮೋಕ್ಷಪ್ರದಾತೃತ್ವ, ವಾಯ್ವಾವೇಶತ್ವ, ಗ್ರಹಣಧಾರಣ ಪಟುತಾ, ಜ್ಞಾನ, ಹರಿಗುರು ಭಕ್ತಿ, ವೈರಾಗ್ಯ, ಸಂಪ್ರದಾಯ ಪ್ರವರ್ತಕತ್ವ, ಕುಲೀನತೆ, ಕಾರುಣ್ಯ, ಕೃಪಾ ಇವೇ ಮೊದಲಾದ ಗುಣಗಳ ಗಾನವೂ ಈ ಸ್ತವನದಲ್ಲಿ ಕಂಡುಬರುತ್ತದೆ.

ಗುರುಗುಣಸ್ತವನದಲ್ಲಿ ಶ್ರೀರಾಯರನ್ನು ಸಂಬೋಧಿಸುವ ಪ್ರಮುಖವಾದ ವಿಶೇಷಣಗಳನ್ನು ಮತ್ತು ಅವು ಎಷ್ಟುಸಲ ಪ್ರಯೋಗಿಸಲ್ಪಟ್ಟಿವೆ ಎಂಬುದನ್ನು ಕೆಳಗೆ ಕಂಸಿನಲ್ಲಿ ಕೊಡಲಾಗಿದೆ.

೧. ಧೀರಶ್ರೀರಾಘವೇಂದ್ರವ್ರತಿವರ (೫ ಸಲ), ೨. ರಾಘವೇಂದ್ರವ್ರತಿವರ (೨ ಸಲ), ೩. ಧೀರಶ್ರೀರಾಘವೇಂದ್ರ (೩ ಸಲ), ೪. ರಾಘವೇಂದ್ರ (೪ ಸಲ), ೫. ರಾಘವೇಂದ್ರವ್ರತೀಂದ್ರ (೨ ಸಲ), ೬. ರಾಘವೇಂದ್ರವ್ರತಿಸುಮತಿಮಣಿ (೨ ಸಲ), ೭. ರಾಘವೇಂದ್ರವ್ರತೀಂದುಃ (೧ ಸಲ), ೮. ಶ್ರೀರಾಘವೇಂದ್ರ ವ್ರತಿಪ (೧ ಸಲ).

॥ ಶ್ರೀಕೃಷ್ಣಾರ್ಪಣಮಸ್ತು ॥



ಶ್ರೀಮತೋ ರಾಘವೇಂದ್ರಸ್ಯ ನಮಾಮಿ ಪದಪಂಕಜೇ ।
ಕಾಮಿತಾಶೇಷಕಲ್ಯಾಣಕಲನಾಕಲ್ಪಪಾದಪೌ ॥

ಚಿತ್ತೇ ಚೇನ್ಮೃದುತಾ ಶಿರೀಷಸದೃಶೀ ಹೈಯ್ಯಂಗವೀನಂ ಶಿಲಾ
ಗಾಂಭೀರ್ಯಂ ಯದಿ ಯಸ್ಯ ಸೋಽಂಧುರುದಧಿಃ ಶಾಸ್ತ್ರೇಷು ಚೇತ್ಪಾಂಡಿತೀ ।
ಆಚಾರ್ಯೋ ವಿಬುಧೇಶಿತುಃ ಕಲಯತೇ ವಿದ್ಯಾರ್ಥಿತಾಮಾದರಾತ್
ಔದಾರ್ಯಂ ಯದಿ ಕಲ್ಪಪಾದಪಮುಖಾಃ ಸಂಭಾವಯಂತೇಽರ್ಥಿತಾಮ್ ॥

ತಸ್ಮಾನ್ಮಹಾಮಹಿಮ್ನೇಽಸ್ಮೈ ಮನಃ ಸ್ಪೃಹಯತೇ ಮಮ ।
ತದ್ಗೌರವೇಣ ಮತ್ಕಾವ್ಯಮಂಗೀಕುರ್ವಂತು ಸಜ್ಜನಾಃ ॥

— ರಾ.ವಿ. ಸರ್ಗ ೧.

## ಪರಿಶಿಷ್ಟ – i

## ತವ ತನಯಮಣಿಃ (ಶ್ಲೋಕ ೨೮)

ಈ ಶ್ಲೋಕದಲ್ಲಿ ಶ್ರೀವಾದೀಂದ್ರತೀರ್ಥರು ಲಕ್ಷ್ಮೀನಾರಾಯಣಾಚಾರ್ಯರನ್ನು ಶ್ರೀರಾಯರ ಪುತ್ರಶ್ರೇಷ್ಠ ಎಂದು ವರ್ಣಿಸಿದ್ದಾರೆ. ಇಲ್ಲಿ ಕವಿಗಳು ಲಕ್ಷ್ಮೀನಾರಾಯಣಾ-ಚಾರ್ಯರಿಗೆ ಶ್ರೀರಾಯರ ಪೂರ್ವಾಶ್ರಮದ ಪುತ್ರತ್ವವನ್ನು ಹೇಳಿದ್ದಾರೆಯೋ ಅಥವಾ ಆಶ್ರಮಾನಂತರದ ಪುತ್ರತ್ವವನ್ನು ಹೇಳಿದ್ದಾರೆಯೋ ಎಂಬ ಬಗ್ಗೆ ಈಗ ಚರ್ಚಿಸಲಾಗುತ್ತದೆ –

ಒಬ್ಬ ಜ್ಞಾನಿಗೆ ೧) ತಂದೆ, ತಾಯಿ, ೨) ಪತ್ನಿ, ೩) ಪುತ್ರರು, ೪) ಬಂಧುಗಳು ಮೊದಲಾದ ಸಂಬಂಧಿಗಳಿರುವರೆಂದು ತಿಳಿಯೋಣ. ಆಗ ಇವನಲ್ಲಿ ಕ್ರಮವಾಗಿ ಪುತ್ರತ್ವ, ಪತಿತ್ವ, ಪಿತೃತ್ವ, ಬಂಧುತ್ವ ಮೊದಲಾದ ಧರ್ಮಗಳು ಬರುತ್ತವೆ. ಅಂದರೆ ಈ ಸಂಬಂಧಿಗಳೊಂದಿಗೆ ಇವನಿಗೆ ಕ್ರಮವಾಗಿ ಪುತ್ರತ್ವೇನ, ಪತಿತ್ವೇನ, ಪಿತೃತ್ವೇನ, ಬಂಧುತ್ವೇನ ಸಂಬಂಧಗಳುಂಟಾಗುತ್ತವೆ. ಹಾಗೂ ಈ ಸಂಬಂಧಿಗಳಿಗೆ ಇವನೊಂದಿಗೆ ಕ್ರಮವಾಗಿ ಪಿತೃತ್ವೇನ, ಪತ್ನಿತ್ವೇನ, ಪುತ್ರತ್ವೇನ, ಬಂಧುತ್ವೇನ ಸಂಬಂಧಗಳಿರುತ್ತವೆ. ಈ ಜ್ಞಾನಿಯು ವಿರಕ್ತನಾಗಿ ಸನ್ಯಾಸಾಶ್ರಮವನ್ನು ಸ್ವೀಕರಿಸಿದಾಗ ಈ ಪರಸ್ಪರ ಸಂಬಂಧಗಳು ಹೇಗೆ ಉಳಿಯುತ್ತವೆ ಎಂಬುದನ್ನು ನೋಡೋಣ –

**ಯದಾ ವಿರಕ್ತಃ ಪುರುಷಃ ಪ್ರಜಾಯತೇ ತದೈವ ಸನ್ಯಾಸವಿಧಿಃ ಶ್ರುತೌ ಶ್ರುತಃ ||** — "ಪುರುಷನು ವಿರಕ್ತನಾದ ಕೂಡಲೇ ಶ್ರುತಿಯು ಸಂನ್ಯಾಸವನ್ನು ವಿಧಿಸುತ್ತದೆ" ಎಂಬ ಪ್ರಮಾಣದಂತೆ ಸನ್ಯಾಸಾಶ್ರಮ ಸ್ವೀಕಾರಕ್ಕೆ ಮುಂಚೆ ವೈರಾಗ್ಯವು ಅತ್ಯವಶ್ಯ. "**ಸರ್ವೇಷಾ-ಮಭಯಂ ದತ್ವಾ ವಿರಕ್ತಃ ಪ್ರವ್ರಜೇದ್ಧರಿಮ್ |**" — 'ವಿರಕ್ತನಾದವನು ಎಲ್ಲರಿಗೂ ಅಭಯವನ್ನು ಕೊಟ್ಟು ಶ್ರೀಹರಿಯನ್ನು (ಮೋಕ್ಷವನ್ನು) ಹೊಂದುವುದಕ್ಕಾಗಿ ಸನ್ಯಾಸಾಶ್ರಮ-ವನ್ನು ಸ್ವೀಕರಿಸಬೇಕು' ಎಂದು ಶ್ರೀಮದಾಚಾರ್ಯರು 'ಯತಿಪ್ರಣವಕಲ್ಪ'ದಲ್ಲಿ ತಿಳಿಸಿದ್ದಾರೆ. **ವಿರಕ್ತಃ** ಅಂದರೆ **ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು** (ಗೀತಾ ೧೩-೧೦) – ಪುತ್ರದಾರ ಗೃಹಾದಿಗಳಲ್ಲಿ ವೈರಾಗ್ಯ (ಸ್ನೇಹಾಭಾವ)ವುಳ್ಳವನಾಗಿರಬೇಕು ಎಂದು ಗೀತೆಯಿಂದ ತಿಳಿಯುವದು.

ಪ್ರವ್ರಜೇದ್ಧರಿಂ ಎಂಬಲ್ಲಿ ವಿರಕ್ತನು ಸನ್ಯಾಸಾಶ್ರಮವನ್ನು ಸ್ವೀಕರಿಸಬೇಕು ಎಂದು ಹೇಳಿ ಸನ್ಯಾಸಾಶ್ರಮವನ್ನು ಹೊಂದುವ ಕ್ರಮವನ್ನು ಪಾಂಚರಾತ್ರಾಗಮದಲ್ಲಿ ಹೀಗೆ ತಿಳಿಸಲಾಗಿದೆ –

**ಜೀವಶ್ರಾದ್ಧಂ ತಥಾ ಕ್ಷೌರಂ ಶಾಕಲಂ ಹೋಮಜಾಗರಮ್ ।**
**ಕೃತ್ವಾ ಪರೇದ್ಯುಃ ಪುಂಸೂಕ್ತವಿರಜಾಖ್ಯಸಹೋಮಕೇ ॥**
**ಷಟ್ ಕೃತ್ವಾ ಸನ್ನ್ಯಸೇದ್ ಬ್ರಹ್ಮಚಾರ್ಯಥವಾ ಗೃಹೀ ॥**

ಬ್ರಹ್ಮಚಾರಿಯು ಅಥವಾ ಗೃಹಸ್ಥಾಶ್ರಮಿಯು ಜೀವಶ್ರಾದ್ಧ (ಆತ್ಮಶ್ರಾದ್ಧ), ವಪನಕರ್ಮ, ಶಾಕಲಹೋಮಗಳನ್ನು ಮಾಡಿ, ರಾತ್ರಿ ಜಾಗರ ಮಾಡಿ, ಮರುದಿನ ಪುರುಷಸೂಕ್ತ ಹೋಮ, ವಿರಜಾಹೋಮಗಳನ್ನು ಮಾಡಿ ನಂತರ ಸಂನ್ಯಾಸಾಶ್ರಮವನ್ನು ಸ್ವೀಕರಿಸಬೇಕು. ವಿರಜಾ ಹೋಮವನ್ನು (**ಪ್ರಾಣಾಪಾನವ್ಯಾನೋದಾನಸಮಾನಾ ಮೇ ಶುಧ್ಯಂತಾಮ್ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಂ ಸ್ವಾಹಾ । ಪ್ರಾಣಾದಿಭ್ಯಃ ಇದಂ ... ॥** ಎಂದು ಮುಂತಾಗಿ) ಮಾಡಿ ಮನೆಯಿಂದ ಹೊರಗೆ ಹೊರಡುವ ಪೂರ್ವದಲ್ಲಿ ಮನೆಯಲ್ಲಿರುವ ಪುತ್ರಾದಿಗಳನ್ನು ಕುರಿತು – "**ಸರ್ವೇ ಭವಂತು ವೇದಾಢ್ಯಾಃ ಸರ್ವೇ ಭವಂತು ಸೋಮಪಾಃ । ಸರ್ವೇ ಪುತ್ರಮುಖಂ ದೃಷ್ಟ್ವಾ ಸರ್ವೇ ಭವಂತು ಭಿಕ್ಷುಕಾಃ ॥** — "ಎಲ್ಲರೂ ವೇದಾಧ್ಯಯನ ಮಾಡುವವರಾಗಿರಿ, ಎಲ್ಲರೂ ಸೋಮಯಜ್ಞ ಮಾಡುವವರಾಗಿರಿ, ಎಲ್ಲರೂ ಮಗನ ಮುಖವನ್ನು ನೋಡಿ (ಪ್ರಜಾವೃದ್ಧಿ ಮಾಡಿ) ಸನ್ನ್ಯಾಸಿಗಳಾಗಿರಿ" ಈ ಪ್ರಕಾರದ ಆಶೀರ್ವಾದವನ್ನು ಪುತ್ರಾದಿಗಳಿಗೆ ಮಾಡಿ, **ನ ಮೇ ಕಶ್ಚಿನ್ನಾಹಂ ಕಸ್ಯಚಿತ್ ಪುತ್ರಾದೀನುಕ್ತ್ವಾ ವಿಸೃಜೇತ್** – ಅಂದರೆ 'ಇನ್ನು ಮುಂದೆ ನಾನು ಯಾರಿಗೂ ಸಂಬಂಧಪಟ್ಟವನಲ್ಲ ಮತ್ತು ನನ್ನ ಸಂಬಂಧಿಗಳು ಯಾರೂ ಇರುವದಿಲ್ಲ' ಎಂದು ಹೇಳುತ್ತ ಪುತ್ರಾದಿಗಳನ್ನು ತ್ಯಜಿಸಬೇಕು. ಅನಂತರ ಜಲಾಶಯಕ್ಕೆ ಹೋಗಿ ಬೊಗಸೆಯಲ್ಲಿ ನೀರನ್ನು ಹಿಡಿದುಕೊಂಡು – "**ಪುತ್ರೇಷಣಾ ವಿತ್ತೇಷಣಾ ಲೋಕೇಷಣಾ ಸರ್ವೇಷಣಾ ಮಯಾ ಪರಿತ್ಯಕ್ತಾ ಅಭಯಂ ಸರ್ವಭೂತೇಭ್ಯಃ ಸ್ವಾಹಾ**" ಅಂದರೆ 'ನಾನು ಪುತ್ರ, ವಿತ್ತ (ಸಂಪತ್ತು) ಜಗತ್ತು ಮತ್ತು ಎಲ್ಲದರ ಇಚ್ಛೆಯನ್ನು ತ್ಯಜಿಸಿದ್ದೇನೆ. ಎಲ್ಲ ಪ್ರಾಣಿಗಳಿಗೂ ಅಭಯವನ್ನು ಕೊಡುತ್ತೇನೆ' ಎಂದು ಮುಂತಾಗಿ ಹೇಳುತ್ತ ನೀರನ್ನು ಜಲಾಶಯದಲ್ಲಿ ಬಿಡಬೇಕು.

ಈ ಮೇಲಿನ ವಿವರಣೆಯಿಂದ ಸನ್ನ್ಯಾಸಿಯಾದವನು ಆಶ್ರಮಪೂರ್ವದ ಸಂಬಂಧಿಗಳೊಂದಿಗೆ ಯಾವ ಸಂಬಂಧವನ್ನೂ ಇಟ್ಟುಕೊಂಡಿರುವದಿಲ್ಲವೆಂಬ ವಿಷಯವು ತಿಳಿಯುವದು. ಸನ್ನ್ಯಾಸಿಯ ವಿಷಯ ಹಾಗಿರಲಿ. ಆದರೆ ಪೂರ್ವಾಶ್ರಮದ ಸಂಬಂಧಿಗಳು ಇವನೊಂದಿಗಿನ ಸಂಬಂಧವನ್ನು ಬಿಟ್ಟಿರುವದಿಲ್ಲವಲ್ಲ ಎಂಬ ಪ್ರಶ್ನೆಯು ಉಳಿಯುವದು. ಉಭಯಪಕ್ಷಗಳಲ್ಲಿ ಒಂದು ಪಕ್ಷದವರು ಸಂಬಂಧವನ್ನು ಕಡಿದುಕೊಂಡಾಗ ಇನ್ನೊಂದು ಪಕ್ಷದವರು ಉಳಿಸಿಕೊಳ್ಳುವ ಸಂಬಂಧವು ಅರ್ಥಹೀನ. ಇದಲ್ಲದೇ ಸನ್ನ್ಯಾಸಿಗೇ ಇಷ್ಟವಾಗದ ಸಂಬಂಧವನ್ನು ಪೂರ್ವಾಶ್ರಮದ ಸಂಬಂಧಿಗಳು ಉಳಿಸಿಕೊಳ್ಳುವದು ಯಾವ ಪುರುಷಾರ್ಥಕ್ಕಾಗಿ ? ಈ ತರಹದ ಸಂಬಂಧಗಳನ್ನು ಉಳಿಸಿಕೊಂಡು

ಸನ್ಯಾಸಿಯೊಂದಿಗೆ ವ್ಯವಹರಿಸುವುದರಿಂದ ಆ ಸನ್ಯಾಸಿಗೆ ಪುತ್ರೇಷಣಾ, ದಾರೇಷಣಾ, ವಿತ್ತೇಷಣಾದಿಗಳನ್ನು ಪುನಃ ತಂದುಕೊಟ್ಟಂತಾಗಿ ಅವನ ಸನ್ಯಾಸವ್ರತವನ್ನು ಭಂಗ ಮಾಡಿದ ಅನರ್ಥಕ್ಕೆ ಗುರಿಯಾಗಬೇಕಾಗುತ್ತದೆ. (ಇತರ ಸಂಬಂಧಿಗಳ ಮಾತಿರಲಿ. ಎಲ್ಲರನ್ನೂ ಬಿಟ್ಟರೂ ಸಂನ್ಯಾಸಿಯಾದವನೇ ತನ್ನ ತಾಯಿಗೆ ಮಾತ್ರ ನಮಸ್ಕಾರ ಮಾಡುತ್ತಿರುವದು ಕಂಡುಬರುವದಲ್ಲವೆಂದರೆ ಈ ತರಹದ ಮಾತೃವಂದನವು ಮಾತ್ರ ಶ್ರುತಿವಿಹಿತವಾಗಿರುವದೆಂಬುದನ್ನು ಆಕ್ಷೇಪಕರು ಅರಿಯಬೇಕು.) ಹೀಗೆಂದ ಮಾತ್ರಕ್ಕೆ ಪೂರ್ವಾಶ್ರಮದ ಸಂಬಂಧಿಗಳಿಗೂ ಸನ್ಯಾಸಿಗೂ ಯಾವ ಸಂಬಂಧವೂ ಇಲ್ಲವೆಂದು ತಿಳಿಯಬಾರದು. ಇವರೆಲ್ಲರೂ ಸನ್ಯಾಸಿಯ ಶಿಷ್ಯರಾಗುವದರಿಂದ ಎಲ್ಲರಂತೆ ಸನ್ಯಸ್ತ ಗುರುವಿನೊಂದಿಗೆ ಶಿಷ್ಯತ್ವೇನ ಸಂಬಂಧವುಳ್ಳವರಾದರೆ ಗುರುವು ಈ ಸಂಬಂಧಿಗಳೊಂದಿಗೆ ಗುರುತ್ವೇನ ಸಂಬಂಧವುಳ್ಳವನಾಗುತ್ತಾನೆ. ವಿಶಿಷ್ಟಸಂದರ್ಭಗಳಲ್ಲಿ ಮಾತ್ರ ಗುರು-ಶಿಷ್ಯರ ಮಧ್ಯದಲ್ಲಿ ಪಿತೃತ್ವ-ಪುತ್ರತ್ವರೂಪದ ಸಂಬಂಧವೂ ಉಂಟಾಗುವದೆಂಬುದು ಮುಂದಿನ ವಿವರಣೆಯಿಂದ ಸ್ಪಷ್ಟವಾಗುವದು.

ಪುತ್ರತ್ವವು ಏಳು ವಿಧವಾಗಿರುತ್ತದೆಯೆಂದು ಪುರಾಣವಚನದಿಂದ ತಿಳಿಯುತ್ತದೆ —

**ವರಜೋ ವೀರ್ಯಜಶ್ಚೈವ ಕ್ಷೇತ್ರಜಃ ಪಾಲಕಸ್ತಥಾ ।**
**ವಿದ್ಯಾಮಂತ್ರಸುತೌ ಚೈವ ಗೃಹೀತಃ ಸಪ್ತಮಃ ಸುತಃ ॥ ೭೦ ॥**

*— ಬ್ರಹ್ಮವೈವರ್ತ ಪು೦. ಪ್ರಕೃತಖಂಡ ಅ. ೫೯*

ವರಜ, ವೀರ್ಯಜ, ಕ್ಷೇತ್ರಜ, ಪಾಲಕ, ವಿದ್ಯಾಸುತ, ಮಂತ್ರಸುತ ಮತ್ತು ಗೃಹೀತ ಎಂದು ಪುತ್ರರಲ್ಲಿ ಏಳು ಪ್ರಕಾರಗಳು. ಇದರಲ್ಲಿ ವರಜ (ವರಕುಮಾರಕ) ವಿದ್ಯಾಸುತ ಮತ್ತು ಮಂತ್ರಸುತ ಇವು ಮಾತ್ರ ಸಂನ್ಯಾಸಿಗಳಿಗೆ ಅನ್ವಯಿಸುತ್ತವೆ. ಹೇಗೆಂದರೆ ಸಂನ್ಯಾಸಿಗಳಾದ ಗುರುವಿನಿಂದ ಸಂನ್ಯಾಸ ಸ್ವೀಕರಿಸಿದ ಶಿಷ್ಯನು ವರಕುಮಾರಕನೆಂದು ಕರೆಯಲ್ಪಡುತ್ತಾನೆ. ಗುರುಗಳಲ್ಲಿ ಶಾಂತಿಪಾಠಪೂರ್ವಕ ವಿದ್ಯಾಧ್ಯಯನ ಮಾಡಿದವನು ವಿದ್ಯಾಪುತ್ರನಾದರೆ ಗುರೂಪದೇಶಪೂರ್ವಕ ಗುರುಗಳಿಂದ ಮಂತ್ರವನ್ನು ಸ್ವೀಕರಿಸಿದವನು ಮಂತ್ರಪುತ್ರನಾಗುತ್ತಾನೆ. 'ವರಪುತ್ರ' ಎಂಬುದು ಒಬ್ಬ ಗುರುವಿನ ಸಾಕ್ಷಾತ್ ಶಿಷ್ಯನೊಬ್ಬನಿಗೆ ಮಾತ್ರ ಸಂಬಂಧಿಸಿರುತ್ತದೆ. 'ವಿದ್ಯಾಪುತ್ರ' ಎಂಬುದು ಗುರುಗಳಲ್ಲಿ ಶಾಂತಿಪಾಠಪೂರ್ವಕ ವಿದ್ಯೆಯನ್ನು ಸ್ವೀಕರಿಸಿದವರೆಲ್ಲರಿಗೂ, ಅದರಂತೆ 'ಮಂತ್ರಪುತ್ರ' ಎಂಬುದು ಗುರುಗಳಿಂದ ಉಪದೇಶಪೂರ್ವಕ ಮಂತ್ರ ಸ್ವೀಕರಿಸಿದವರೆಲ್ಲರಿಗೂ ಅನ್ವಯಿಸುತ್ತದೆ. ಗುರುವು ಯತಿಯಾಗಿದ್ದರೆ ಅವರ ಎಲ್ಲ ವರಪುತ್ರರೂ, ವಿದ್ಯಾಪುತ್ರರೂ ಮತ್ತು ಮಂತ್ರಪುತ್ರರೂ ಶ್ರೀಪಾದಪುತ್ರರಾಗುತ್ತಾರೆ; ಯತಿಯಾಗಿರದಿದ್ದರೆ ಗುರುಪುತ್ರರಾಗುತ್ತಾರೆ. ಗುರುಗಳಿಂದ ವಿದ್ಯೆಯನ್ನಾಗಲೀ

ಮಂತ್ರೋಪದೇಶವನ್ನಾಗಲೀ ಸ್ವೀಕರಿಸದಿದ್ದರೆ ಅಂಥವರು ಯತಿಗಳ ಪೂರ್ವಾಶ್ರಮದ ಪುತ್ರರಾಗಿದ್ದರೂ ಶ್ರೀಪಾದಪುತ್ರ ಎಂದು ಕರೆಯಲ್ಪಡಲು ಅರ್ಹರಾಗುವದಿಲ್ಲ.

ಪ್ರಕೃತದಲ್ಲಿ ಲಕ್ಷ್ಮೀನಾರಾಯಣಾಚಾರ್ಯರನ್ನು "ತವ ತನಯಮಣಿಃ" ಎಂದು ಹೇಳಿದ್ದನ್ನು "ತವ ಆತ್ಮಜಶ್ರೇಷ್ಠಃ", "ಪುತ್ರಶ್ರೇಷ್ಠಃ" ಎಂದು ಕ್ರಮವಾಗಿ ಇಬ್ಬರೂ ವ್ಯಾಖ್ಯಾನಕಾರರು ವ್ಯಾಖ್ಯಾನಿಸಿದ್ದಾರೆ. ಈ ಪದಗಳಿಗೆ **ಆತ್ಮಜೇಷು ಶ್ರೇಷ್ಠಃ** ಅಥವಾ **ಪುತ್ರೇಷು ಶ್ರೇಷ್ಠಃ** ಎಂದು ತತ್ಪುರುಷ ಸಮಾಸ ಮಾಡಿ ಪುತ್ರ ಶಬ್ದಕ್ಕೆ ಔರಸಪುತ್ರನೆಂದು ಇಟ್ಟುಕೊಂಡಾಗ ಇನ್ನೊಂದು ಬಾಧಕವಿದೆ. ಹೇಗೆಂದರೆ ಶ್ರೀರಾಯರಿಗೆ ಪೂರ್ವಾಶ್ರಮದ ಮಗ ಇರುವದು ಒಬ್ಬನೇ. ಈ ಕಾರಣದಿಂದಲೂ ಮತ್ತು ಸನ್ಯಾಸಿಗಳು ಔರಸಪುತ್ರಾದಿ-ಗಳನ್ನೆಲ್ಲ ತ್ಯಜಿಸಿ ಬಿಟ್ಟಿರುವುದರಿಂದಲೂ 'ಶ್ರೀಪಾದಪುತ್ರ' ಎಂಬ ಪದದ ವ್ಯವಹಾರವು ಮೇಲಿನ ಅರ್ಥದಲ್ಲಿ ಶಾಸ್ತ್ರಶುದ್ಧವಲ್ಲ. ಆದ್ದರಿಂದ ಕವಿಗಳಿಗೆ ಲಕ್ಷ್ಮೀನಾರಾಯಣಾ-ಚಾರ್ಯರನ್ನು ಶ್ರೀರಾಯರ ಪೂವಾಶ್ರಮ ಪುತ್ರತ್ವೇನ ವರ್ಣಿಸುವದು ಅಭಿಪ್ರೇತವಾಗಿರದೇ ಲಕ್ಷ್ಮೀನಾರಾಯಣಾಚಾರ್ಯರಿಗೆ ಆಶ್ರಮಾನಂತರದ ಪುತ್ರತ್ವವನ್ನೇ ಹೇಳುವದು ಅಭಿಪ್ರೇತವಾಗಿರುವದು ಸ್ಪಷ್ಟವಾಗುತ್ತದೆ. ಹೇಗೆಂದರೆ – ಶ್ರೀಲಕ್ಷ್ಮೀ-ನಾರಾಯಣಾರ್ಯರು ಶ್ರೀರಾಯರಿಂದ ಸಕಲ ಶಾಸ್ತ್ರಾರ್ಥಗಳನ್ನು ಅಧ್ಯಯನ ಮಾಡಿದವರು ಮತ್ತು ಮಂತ್ರೋಪದೇಶ ಪಡೆದವರು. ಈ ರೀತಿಯಾಗಿ ಲಕ್ಷ್ಮೀನಾರಾಯಣಾಚಾರ್ಯರು ಶ್ರೀರಾಯರಿಗೆ ವಿದ್ಯಾಪುತ್ರರೂ ಹೌದು ಮತ್ತು ಮಂತ್ರಪುತ್ರರೂ ಹೌದು. ಅಷ್ಟೇ ಅಲ್ಲ ಶ್ರೀರಾಯರ ಅನೇಕ ವಿದ್ಯಾಪುತ್ರರಲ್ಲಿ ಮತ್ತು ಮಂತ್ರಪುತ್ರರಲ್ಲಿ ಲಕ್ಷ್ಮೀನಾರಾಯಣಾರ್ಯರು ಶ್ರೇಷ್ಠರಾಗಿದ್ದರು. ಈ ಅರ್ಥದಲ್ಲಿಯೇ ಇಲ್ಲಿ "ತವ ತನಯಮಣಿಃ" ಎಂಬ ಶಬ್ದ ಪ್ರಯೋಗವಾಗಿದೆಯೆಂದು ತಿಳಿಯಬೇಕು. ಹೀಗೆ ಅರ್ಥಮಾಡಿದಾಗ ಆತ್ಮಜೇಷು ಶ್ರೇಷ್ಠಃ, ಪುತ್ರೇಷು ಶ್ರೇಷ್ಠಃ ಎಂದು ತತ್ಪುರುಷ ಸಮಾಸ ಮಾಡಿದಾಗಲೂ ಬಾಧಕವಿಲ್ಲ.

ಗುರುಗುಣಸ್ತವನದ ಕರ್ತೃಗಳಾದ ಶ್ರೀವಾದೀಂದ್ರತೀರ್ಥರೇ ಉಪಸಂಹಾರದಲ್ಲಿ **"ಇತಿ ಶ್ರೀರಾಘವೇಂದ್ರಾರ್ಯೋಭಯವಂಶಾಬ್ಧಿಚಂದ್ರಮಾಃ । ಉಪೇಂದ್ರಸೂನುಃ ವಾದೀಂದ್ರಶ್ಚಕ್ರೇ ಗುರುಗುಣಸ್ತವಮ್ ॥"** ಎಂಬಲ್ಲಿ ತಮ್ಮನ್ನು **'ಉಪೇಂದ್ರಸೂನುಃ'** ಎಂದು ಹೇಳಿಕೊಂಡಿದ್ದಾರೆ. ತಾವು ಶ್ರೀಉಪೇಂದ್ರತೀರ್ಥರ ವರಕುಮಾರರಾಗಿರುವುದ-ರಿಂದ, ಮತ್ತು ಶ್ರೀಉಪೇಂದ್ರತೀರ್ಥರಿಂದ ವಿದ್ಯೆ ಹಾಗೂ ಮಂತ್ರೋಪದೇಶಗಳನ್ನು ಪಡೆದುದರಿಂದ ಶ್ರೀಉಪೇಂದ್ರತೀರ್ಥರ **ಸೂನುಃ** ಅಂದರೆ ವರಜಪುತ್ರರು, ವಿದ್ಯಾಪುತ್ರರು ಮತ್ತು ಮಂತ್ರಸುತರು ಎಂದು ಶ್ರೀವಾದೀಂದ್ರತೀರ್ಥರು ಹೇಳಿಕೊಂಡದ್ದು ಯುಕ್ತವೇ ಆಗಿದೆ.

———*———

## ಪರಿಶಿಷ್ಟ – *ii*

## ಉಭಯವಂಶಾಬ್ಧಿಚಂದ್ರಮಾಃ (ಶ್ಲೋಕ ೩೮)

ಉಪಸಂಹಾರ ಶ್ಲೋಕದಲ್ಲಿರುವ "ಶ್ರೀರಾಘವೇಂದ್ರಾರ್ಯೋಭಯವಂಶಾಬ್ಧಿ-ಚಂದ್ರಮಾಃ" ಎಂಬುದನ್ನು ಹೇಗೆ ಅರ್ಥೈಸಬೇಕು ಎಂಬುದನ್ನು ಈಗ ಚರ್ಚಿಸಲಾಗುತ್ತದೆ –

'**ಶ್ರೀರಾಘವೇಂದ್ರಾರ್ಯೋಭಯವಂಶಾಬ್ಧಿಚಂದ್ರಮಾಃ**' ಎನ್ನುವಲ್ಲಿ ಶ್ರೀರಾಘವೇಂ-ದ್ರಾರ್ಯರ **ಉಭಯವಂಶ** ಯಾವುದು ಎಂಬುದನ್ನು ಮೊದಲು ತಿಳಿದುಕೊಳ್ಳಬೇಕು. ಶ್ರೀರಾಯರ ಪೂರ್ವಾಶ್ರಮ ವಂಶ ಮತ್ತು ಆಶ್ರಮಾನಂತರ ಮಹಾಸಂಸ್ಥಾನದ ಯತಿವಂಶ ಹೀಗೆ ಈ ಎರಡು ವಂಶಗಳು ಶ್ರೀರಾಯರ ಉಭಯವಂಶವೆಂದು ಹೇಳಿ ಇಂಥ ಉಭಯವಂಶವೆಂಬ ಅಬ್ಧಿಗೆ ಚಂದ್ರಮರಂತಿದ್ದವರು ಶ್ರೀವಾದೀಂದ್ರತೀರ್ಥರು ಎಂದು ಸಾಮಾನ್ಯವಾಗಿ ಎಲ್ಲರೂ ಹೇಳುತ್ತಾರೆ. ಶ್ರೀರಾಯರ ಪೂರ್ವಾಶ್ರಮದ ವಂಶ-ವೆಂಬ ಅಬ್ಧಿಗೆ ಚಂದ್ರಮನಂತಿದ್ದವರು ಶ್ರೀವಾದೀಂದ್ರತೀರ್ಥರ ಪೂರ್ವಾಶ್ರಮದಲ್ಲಿಯ ಶ್ರೀನಿವಾಸಾಚಾರ್ಯರು. ಶ್ರೀರಾಯರ ಮಹಾಸಂಸ್ಥಾನದ ವಂಶವೆಂಬ ಅಬ್ಧಿಗೆ ಚಂದ್ರಮನಂತಿದ್ದವರು ಶ್ರೀವಾದೀಂದ್ರತೀರ್ಥರು. ಶ್ರೀರಾಯರ ಉಭಯವಂಶವನ್ನು ಮೇಲಿನಂತೆ ಗ್ರಹಿಸಿದರೂ ಈ ಉಭಯ ವಂಶಾಬ್ಧಿಗೆ ಶ್ರೀವಾದೀಂದ್ರತೀರ್ಥರು ಚಂದ್ರಮರಾಗಲಿಲ್ಲ. ಶ್ರೀರಾಯರ ಆಶ್ರಮಾನಂತರದ ಮಹಾಸಂಸ್ಥಾನವೆಂಬ ವಂಶಾಬ್ಧಿಗೆ ಮಾತ್ರ ಚಂದ್ರಮರಾಗಿದ್ದಾರೆ. ಏಕೆಂದರೆ ಆತ್ಮಶ್ರಾದ್ಧ, ವಿರಜಾ ಹೋಮಮಾಡಿ '**ನ ಮೇ ಕಶ್ಚಿನ್ನಾಹಂ ಕಸ್ಯಚಿತ್ ಪುತ್ರಾದೀನುಕ್ತ್ವಾ ವಿಸೃಜೇತ್**' – ಎಂದು ಹೇಳಿ ಪೂರ್ವಾಶ್ರಮದ ಎಲ್ಲ ಸಂಬಂಧವನ್ನೂ ಪರಿತ್ಯಜಿಸಿ ಸನ್ಯಸ್ತನಾದ ವ್ಯಕ್ತಿಗೆ ಆಶ್ರಮಪೂರ್ವದ ವಂಶ ಸಂಬಂಧವನ್ನು ಕಲ್ಪಿಸುವದು ಸಮಂಜಸವಾಗಲಾರದು (ಪ್ರಾತಃಸಂಕಲ್ಪದಲ್ಲಿ '**ದೇಹ-ಸಂಬಂಧಿಭಿಃ**' ಎಂಬುದಕ್ಕೆ ಶ್ರೀರಾಯರ ಪೂರ್ವಾಶ್ರಮದ ಸಂಬಂಧಿಗಳಿಂದ ಎಂದು ಅರ್ಥಮಾಡಬಾರದು. ಏಕೆಂದರೆ ಈ ಪದವು ಶ್ರೀರಾಯರಿಗೆ ಅನ್ವಿತವಾಗುವದೇ ಇಲ್ಲ. ಈ ಗದ್ಯದಲ್ಲಿ ಶ್ರೀರಾಯರು ತಾವು ಒಬ್ಬರೇ ಮಾಡುವ ಪ್ರಾತಃಸಂಕಲ್ಪವನ್ನು ತಿಳಿಸುತ್ತಿಲ್ಲ. ಸಕಲ ವೈಷ್ಣವರು ಯಾವ ಅನುಸಂಧಾನದೊಂದಿಗೆ ಪ್ರಾತಃಕಾಲದಲ್ಲಿ ಸಂಕಲ್ಪಮಾಡಬೇಕೆಂಬುದನ್ನು ತಿಳಿಸಲು ಈ ಗದ್ಯವನ್ನು ರಚಿಸಿದ್ದಾರೆ ಎಂಬುದನ್ನು ಎಲ್ಲರೂ ಗಮನಿಸಬೇಕು). ಆಶ್ರಮಪೂರ್ವದ ಯಾವ ಸಂಬಂಧವೂ ಆಶ್ರಮಾನಂತರ ಉಳಿಯುವದಿಲ್ಲವಾದ್ದರಿಂದ ಆಶ್ರಮಪೂರ್ವದ 'ವಂಶಚಂದ್ರಮಸ್ತ್ವ'ವನ್ನು ಶ್ರೀನಿವಾಸಾ-ಚಾರ್ಯರಲ್ಲಿ ಹೇಳಬೇಕಲ್ಲದೇ ಆಶ್ರಮಾನಂತರದ ಶ್ರೀವಾದೀಂದ್ರತೀರ್ಥರಲ್ಲಿ ಹೇಳಲು ಬರುವದಿಲ್ಲ. ಹಾಗಾದರೆ ಉಭಯವಂಶಾಬ್ಧಿಚಂದ್ರಮಸ್ತ್ವವನ್ನು ಶ್ರೀವಾದೀಂದ್ರತೀರ್ಥರಲ್ಲಿ ಸಮನ್ವಯ ಮಾಡಬೇಕಾದರೆ ಅಂದರೆ ಉಭಯವಂಶಾಬ್ಧಿಚಂದ್ರಮಸ್ತ್ವಕ್ಕೆ ಶ್ರೀವಾದೀಂದ್ರ-

ತೀರ್ಥರು ಅಧಿಷ್ಠಾನವಾಗಬೇಕಾದರೆ 'ಶ್ರೀರಾಘವೇಂದ್ರಾರ್ಯೋಭಯವಂಶ' ಎಂಬ ಪದಕ್ಕೆ ಯುಕ್ತವಾಗುವ ಅರ್ಥವನ್ನು ಹೇಳಬೇಕು. ಶ್ರೀರಾಘವೇಂದ್ರಾರ್ಯರ ಉಭಯವಂಶಗಳಾವವು ? "ವಂಶೋ ದ್ವಿಧಾ ವಿದ್ಯಯಾ ಜನ್ಮನಾ ಚ" (ಗು.ಗು.ಜ. ವ್ಯಾ.೧೭) ಎಂಬ ಪ್ರಮಾಣದಂತೆ ವಂಶವು ವಿದ್ಯಾವಂಶ ಮತ್ತು ಜನ್ಮವಂಶ ಎಂದು ಎರಡು ವಿಧವಾಗಿರುತ್ತದೆ. ಸನ್ಯಸ್ತರಾದ ಶ್ರೀರಾಘವೇಂದ್ರರ ಪೂರ್ವಾಶ್ರಮದ ಜನ್ಮವಂಶವನ್ನು ತೆಗೆದುಕೊಳ್ಳುವಂತಿಲ್ಲವೆಂಬುದು ಹಿಂದಿನ ವಿವರಣೆಯಿಂದ ಸ್ಪಷ್ಟವಾಗಿರಬಹುದು. ಇನ್ನು ಉಳಿದ ವಿದ್ಯಾವಂಶವನ್ನೇ ಹಿಡಿಯಬೇಕಾಗುತ್ತದೆ. ಶ್ರೀರಾಯರ ಉಭಯವಂಶ ಅಂದರೆ ಶ್ರೀವೆಂಕಟನಾಥಾರ್ಯರ ಆಶ್ರಮಾನಂತರದ ವಿದ್ಯಾವಂಶ ಅಂದರೆ ಶ್ರೀರಾಘವೇಂದ್ರಾರ್ಯರಿಗೇ ಸಂಬಂಧಿಸಿರುವ ಎರಡು ವಿದ್ಯಾವಂಶಗಳನ್ನು ತೆಗೆದುಕೊಳ್ಳಬೇಕು. ಎಲ್ಲ **ಸಂನ್ಯಾಸಿ (ಯತಿ)ಗಳಿಗೆ ಎರಡೇ ವಂಶಗಳು ಸಂಬಂಧಪಟ್ಟಿರುತ್ತವೆ — ಒಂದು ಗುರುವಂಶ ಇನ್ನೊಂದು ಶಿಷ್ಯವಂಶ.** ಹಂಸನಾಮಕ ಪರಮಾತ್ಮನಿಂದ ಹಿಡಿದು ಆ ಯತಿಗಳವರೆಗೆ ಮಹಾಸಂಸ್ಥಾನಾಧಿಪತಿಗಳಾಗಿ ಹೋಗಿರುವ ಎಲ್ಲ ಗುರುಗಳು ಗುರುವಂಶದಲ್ಲಿ ಬಂದರೆ ಯತಿಗಳ ಆಜ್ಞಾಕಾರಿಗಳು, ಅವರಲ್ಲಿ ಅಧ್ಯಯನ ಮಾಡಿದ ವಿದ್ಯಾಸಂಬಂಧಿಗಳು ಮತ್ತು ಮಂತ್ರೋಪದೇಶ ಪಡೆದವರು ಇವರೆಲ್ಲ ಶಿಷ್ಯವಂಶದಲ್ಲಿ ಬರುತ್ತಾರೆ. ಪ್ರಕೃತದಲ್ಲಿ ಪರಮಹಂಸರಾಗಿರುವ ಶ್ರೀರಾಘವೇಂದ್ರಾರ್ಯರ ಗುರುವಂಶದಲ್ಲಿ, ಹಂಸನಾಮಕ ಪರಮಾತ್ಮ, ಚತುರ್ಮುಖ ಬ್ರಹ್ಮ, ಸನಕತೀರ್ಥ, ಸನಂದನತೀರ್ಥ, ಸನತ್ಕುಮಾರತೀರ್ಥ, ಸನಾತನತೀರ್ಥ, ದೂರ್ವಾಸ-ತೀರ್ಥ, ಜ್ಞಾನನಿಧಿತೀರ್ಥ, ಗರುಡವಾಹನತೀರ್ಥ, ಕೈವಲ್ಯತೀರ್ಥ, ಜ್ಞಾನೇಶತೀರ್ಥ, ಪರತೀರ್ಥ, ಸತ್ಯಪ್ರಜ್ಞತೀರ್ಥ, ಪ್ರಾಜ್ಞತೀರ್ಥ, ಅಚ್ಯುತಪ್ರೇಕ್ಷಾಚಾರ್ಯ, ಮಧ್ವಾಚಾರ್ಯ (ಆನಂದತೀರ್ಥ), ಪದ್ಮನಾಭತೀರ್ಥ, ನರಹರಿತೀರ್ಥ, ಮಾಧವತೀರ್ಥ, ಅಕ್ಷೋಭ್ಯತೀರ್ಥ, ಜಯತೀರ್ಥ, ವಿದ್ಯಾಧಿರಾಜತೀರ್ಥ, ಕವೀಂದ್ರತೀರ್ಥ, ವಾಗೀಶತೀರ್ಥ, ರಾಮಚಂದ್ರ-ತೀರ್ಥ, ವಿಬುಧೇಂದ್ರತೀರ್ಥ, ಜಿತಾಮಿತ್ರತೀರ್ಥ, ರಘುನಂದನತೀರ್ಥ, ಸುರೇಂದ್ರ-ತೀರ್ಥ, ವಿಜಯೀಂದ್ರತೀರ್ಥ ಮತ್ತು ಸುಧೀಂದ್ರತೀರ್ಥ ಇವರು ಜ್ಯೇಷ್ಠಗುರು-ಗಳಾಗಿದ್ದಾರೆ. ನಂತರದ ಯೋಗೀಂದ್ರತೀರ್ಥ, ಸೂರೀಂದ್ರತೀರ್ಥ, ಸುಮತೀಂದ್ರತೀರ್ಥ ಮತ್ತು ಉಪೇಂದ್ರತೀರ್ಥ ಇವರುಗಳು ಶ್ರೀರಾಯರ ಶಿಷ್ಯಯತಿಗಳಾಗಿದ್ದಾರೆ. [ಹಂಸನಾಮಕ ಪರಮಾತ್ಮನಿಂದ ಪ್ರಾರಂಭವಾಗಿರುವ ಈ ಗುರುವಂಶದಲ್ಲಿ ಶ್ರೀರಾಯರ ತನಕ ಕೇವಲ ೩೧ ಯತಿಗಳು ಮತ್ತು ಶ್ರೀವಾದೀಂದ್ರತೀರ್ಥರ ವರೆಗೆ ಕೇವಲ ೩೬ ಯತಿಗಳಾಗಿರುವರೆಂದರೆ ಆಶ್ಚರ್ಯವಾಗುವದು ! ಮಧ್ಯದಲ್ಲಿ ಸಾವಿರಾರು ಯತಿಗಳ ಹೆಸರುಗಳು ಸಿಗದೇ ಬಿಟ್ಟು ಹೋಗಿರಲು ಸಾಕು. ಈ ಗುರುವಂಶವೃಕ್ಷವನ್ನು ಪಂಚಾಂಗದಲ್ಲಿ ಕೊಟ್ಟಿರುವ ಶ್ರೀಮಠದ ಗುರು ಪೀಳಿಗೆಯನ್ನನುಸರಿಸಿ ಕೊಡಲಾಗಿದೆ. ಇರಲಿ.] ಪ್ರಕೃತ ಶ್ರೀರಾಘವೇಂದ್ರರ ಉಭಯವಂಶವನ್ನು ತಿಳಿದುಕೊಂಡಂತಾಯಿತು.

ಶ್ರೀರಾಘವೇಂದ್ರಾರ್ಯೋಭಯವಂಶಾಬ್ಧಿಚಂದ್ರಮ ಎಂದರೆ ಶ್ರೀವಾದೀಂದ್ರತೀರ್ಥರು ಶ್ರೀರಾಯರ ಗುರುವಂಶ ಮತ್ತು ಶಿಷ್ಯವಂಶಕ್ಕೆ ಚಂದ್ರನಂತೆ ಆಹ್ಲಾದಕಾರರು ಹಾಗೂ ಅಬ್ಧಿಗೆ ಚಂದ್ರನಂತೆ ಅಭಿವರ್ಧಕರು ಎಂದರ್ಥ. ಗುರುವಂಶಕ್ಕೆ ಆಹ್ಲಾದಕಾರರು ಎಂದರೆ ಶ್ರೀವಾದೀಂದ್ರತೀರ್ಥರು ಸಕಲದುರ್ಮತ ಭಂಜನಪೂರ್ವಕ ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾದಿ ಕಾರ್ಯಗಳಿಂದ ಹಂಸನಾಮಕ ಪರಮಾತ್ಮನಿಂದ ಹಿಡಿದು ಶ್ರೀಸುಧೀಂದ್ರತೀರ್ಥರ ವರೆಗಿನ ಎಲ್ಲ ಗುರುಗಳು ಪ್ರಸನ್ನರಾಗುವಂತೆ ಮಾಡಿದ್ದರು. ಗುರುವಂಶ ಅಭಿವರ್ಧಕರು ಅಂದರೆ ತಾವಿರುವಾಗಲೇ ಶ್ರೀವಸುಧೇಂದ್ರತೀರ್ಥರನ್ನು ಶಿಷ್ಯನನ್ನಾಗಿ ಮಾಡಿಕೊಂಡು ಗುರುವಂಶವು ಅವಿಚ್ಛಿನ್ನವಾಗಿ ಬೆಳೆಯುವಂತೆ ಮಾಡಿದರು. (ಶ್ರೀವಾದೀಂದ್ರತೀರ್ಥರು ಕ್ರಿ.ಶ. ೧೭೪೫ ರಲ್ಲೇ ಶ್ರೀವಸುಧೇಂದ್ರತೀರ್ಥರಿಗೆ ಆಶ್ರಮ-ವನ್ನಿತ್ತು ಕ್ರಿ. ೧೭೫೦ ರ ವರೆಗೆ ಗುರುಶಿಷ್ಯರು ಜೊತೆ ಜೊತೆಯಾಗಿದ್ದರು.)

ಶ್ರೀರಾಯರ ನಂತರ ಪೀಠಾಧಿಪತಿಗಳಾಗಿರುವ ಶ್ರೀಯೋಗೀಂದ್ರತೀರ್ಥರು, ಶ್ರೀಸೂರೀಂದ್ರತೀರ್ಥರು, ಶ್ರೀಸುಮತೀಂದ್ರತೀರ್ಥರು ಮತ್ತು ಶ್ರೀಉಪೇಂದ್ರತೀರ್ಥರು ಹಾಗೂ ಇವರಲ್ಲದೇ ಶ್ರೀರಾಘವೇಂದ್ರಾರ್ಯರ ಆಜ್ಞಾಕಾರಿಗಳು, ವಿದ್ಯಾಸಂಬಂಧಿಗಳು ಮತ್ತು ಮಂತ್ರೋಪದೇಶ ಪಡೆದವರನ್ನು ಶ್ರೀರಾಯರ ಶಿಷ್ಯವಂಶದಲ್ಲಿ ಗಣನೆ ಮಾಡಿದ್ದೇವೆ. ಶ್ರೀವಾದೀಂದ್ರತೀರ್ಥರ ಕಾಲದಲ್ಲಿರುವ ಶ್ರೀರಾಘವೇಂದ್ರಯತಿವರ್ಯರ ಶಿಷ್ಯವಂಶವೆಂದರೆ ಶ್ರೀರಾಯರ ಎಲ್ಲ ಭಕ್ತರು ಅಂದರೆ ಶ್ರೀರಾಯರ ಆದೇಶಗಳನ್ನು ಪರಿಪಾಲಿಸುವವರು, ಶ್ರೀರಾಯರ ಗ್ರಂಥಗಳ ಅಧ್ಯಯನ ಅಧ್ಯಾಪನಾದಿಗಳನ್ನು ಮಾಡುವ ಶ್ರೀರಾಯರ ವಿದ್ಯಾಸಂಬಂಧಿಗಳು, ಶ್ರೀರಾಯರ ಮಠದ ಪೀಠಾಧಿಪತಿಗಳಿಂದ ಮಂತ್ರೋಪದೇಶ ಪಡೆದು ಆ ಕಾಲದಲ್ಲಿ ಜೀವಿಸಿರುವ ಶ್ರೀರಾಯರ ಭಕ್ತರು, ಮುಂತಾದವರು.

ಶ್ರೀವಾದೀಂದ್ರತೀರ್ಥರು ಸರ್ವಮೂಲ, ಸುಧಾ ಪರಿಮಳಾದಿ ಗ್ರಂಥಗಳ ಪಾಠ ಪ್ರವಚನ, ಗ್ರಂಥರಚನಾದಿಗಳಿಂದ ಶ್ರೀರಾಯರ ಶಿಷ್ಯವಂಶದ ಶ್ರೀಯೋಗೀಂದ್ರ-ತೀರ್ಥರಿಂದ ಹಿಡಿದು ಶ್ರೀಉಪೇಂದ್ರತೀರ್ಥರ ವರೆಗಿನ ತಮ್ಮ ಎಲ್ಲ ಗುರುಗಳು ಪ್ರಸನ್ನರಾಗುವಂತೆ ಮಾಡಿದ್ದರು ಮತ್ತು ಮಂತ್ರೋಪದೇಶಗಳಿಂದ, ಅನುಗ್ರಹಗಳಿಂದ, ಶ್ರೀರಾಯರ ಉಳಿದ ಶಿಷ್ಯವಂಶಕ್ಕೆ ಆಹ್ಲಾದಕಾರಿಗಳಾಗಿದ್ದರು. ಅನೇಕ ಶಿಷ್ಯರನ್ನು ಪಂಡಿತರನ್ನಾಗಿ ಮಾಡಿ ವಿದ್ಯಾಭಿವೃದ್ಧಿಯನ್ನು ಮಾಡುವ ಮೂಲಕ ಶಿಷ್ಯವಂಶದ ಅಭಿವರ್ಧಕರೂ ಆಗಿದ್ದರು.

ಈ ಪ್ರಕಾರವಾಗಿ ಶ್ರೀವಾದೀಂದ್ರತೀರ್ಥರು ಶ್ರೀರಾಘವೇಂದ್ರಾರ್ಯೋಭಯವಂಶಾಬ್ಧಿ ಚಂದ್ರಮರಾಗಿದ್ದಾರೆ ಎಂದು ತಿಳಿಯುವದು ಹೆಚ್ಚು ಸಮಂಜಸವಾಗುವದೆಂದು ಭಾವಿಸಿದ್ದೇನೆ.

ಅಥವಾ ಗುರುಗುಣಸ್ತವನದ ೧೬ನೆಯ ಶ್ಲೋಕದಲ್ಲಿ ತಿಳಿಸಿದಂತೆ ಶ್ರೀರಾಘವೇಂದ್ರ-ತೀರ್ಥರು ವೇದಾಂತಸಾಮ್ರಾಜ್ಯದಲ್ಲಿ ಮತ್ತು ಸಾರಸ್ವತಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತ-ರಾಗಿದ್ದಾರೆ. ಆದ್ದರಿಂದ ಈ ಎರಡು ಸಾಮ್ರಾಜ್ಯಕ್ಕೆ ಸಂಬಂಧಿಸಿದ ವಂಶಗಳನ್ನೇ ಶ್ರೀರಾಯರ ಉಭಯವಂಶಗಳೆಂದು ಗ್ರಹಿಸಬಹುದು. ವೇದಾಂತಸಾಮ್ರಾಜ್ಯದ ವಂಶವನ್ನು ಆಶ್ರಮನಂತರದ 'ಜನ್ಮವಂಶ' (ಕರಕಮಲಸಂಜಾತ ಇತ್ಯಾದಿ ಹೇಳುವುದರಿಂದ) ಎಂದು ತಿಳಿಯಲು ಯಾವ ಅಭ್ಯಂತರವೂ ಇಲ್ಲ. ಇದರಿಂದ "ವಂಶೋದ್ವಿಧಾ ವಿದ್ಯಯಾ ಜನ್ಮನಾ ಚ" ಎಂಬಲ್ಲಿ ತಿಳಿಸಿದಂತೆ ಆಶ್ರಮಾನಂತರದ ಜನ್ಮವಂಶ ಮತ್ತು ವಿದ್ಯಾವಂಶಗಳು ಶ್ರೀರಾಯರ ಉಭಯವಂಶಗಳೆಂದು ತಿಳಿಯಬಹುದು. ಈ ಜನ್ಮವಂಶವು ಕೇವಲ ಪರಮಹಂಸರಿಂದ ಯುಕ್ತವಾಗಿದ್ದರೆ ಸಾರಸ್ವತಸಾಮ್ರಾಜ್ಯದ ವಂಶದಲ್ಲಿ ಪರಮಹಂಸ-ರಿಂದ ಅತಿರಿಕ್ತರಾದ ಎಲ್ಲ ಜ್ಞಾನಿಗಳಿರುತ್ತಾರೆ. ಶ್ರೀರಾಯರ ಇಂಥ ಉಭಯವಂಶಾಬ್ಧಿಗೆ ಶ್ರೀವಾದೀಂದ್ರತೀರ್ಥರು ಚಂದ್ರಮರಂತಿದ್ದರೆಂದೂ ಹೇಳಬಹುದು.

ಇದೇ ಸಂದರ್ಭದಲ್ಲಿ ಇನ್ನೊಂದು ವಿಷಯವನ್ನು ಸುಜನರ ವಿವೇಚನೆಗೆ ಬಿಡಲು ಬಯಸುತ್ತೇನೆ. ಅದೇನೆಂದರೆ, ದೇವಸ್ಥಾನಗಳಲ್ಲಿ, ಮಠಗಳಲ್ಲಿ ಸಾಯಂಕಾಲದ ದೀಪಾರಾಧನೆ ಪೂಜೆ ಮಹಾಮಂಗಳಾರುತಿಗಳಾದ ಮೇಲೆ ಸ್ವಸ್ತಿವಾಚನವನ್ನು ಹೇಳಲಾಗುತ್ತದೆ – "ಸ್ವಸ್ತಿ ಮಂತ್ರಾರ್ಥಾಃ ಸತ್ಯಾಃ ಸಫಲಾಃ ಸಂತು ಇತಿ ಭವಂತೋ ಮಹಾಂತೋಽನುಗೃಹ್ಣಂತು ।" ಎಂದು ಸ್ವಸ್ತಿವಾಚಕನು ಹೇಳಿದಾಗ ಶ್ರೋತ್ರಿಯ ಬ್ರಾಹ್ಮಣರು 'ತಥಾಸ್ತು' ಎಂದು ಅನ್ನುವರು. ಅನಂತರ ಗುರುಗಳಿಗೆ ಸ್ವಸ್ತಿಪ್ರಾರ್ಥನೆ ನಡೆಯುತ್ತದೆ — "ಅನೇನ ಸಾಯಂಕಾಲದೀಪಾರಾಧನೇನ ಭಗವಾನ್ ಶ್ರೀಮದ್ರಾಘವೇಂದ್ರ-ತೀರ್ಥಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಸೀತಾಪತಿ ಶ್ರೀಮನ್ಮೂಲ-ರಾಮಚಂದ್ರಃ ಸುಪ್ರೀತಃ ಸುಪ್ರಸನ್ನೋ ವರದೋ ಭೂತ್ವಾ .... ನಕ್ಷತ್ರೇ .... ರಾಶೌ ಜಾತಾನಾಂ ಶ್ರೀಶ್ರೀಮತ್ .... ತೀರ್ಥಶ್ರೀಪಾದಾನಾಂ ಸಶಿಷ್ಯಾಣಾಂ ಸಪರಿವಾರಾಣಾಂ ಕ್ಷೇಮಸ್ಥೈರ್ಯವಿಜಯವೀರ್ಯಾಯುರಾರೋಗ್ಯಐಶ್ವರ್ಯಾಭಿವೃದ್ಧಿಪ್ರದೋ ಭೂಯಾದಿತಿ ಭವಂತೋ ಮಹಾಂತಃ ಪ್ರಾರ್ಥಯಂತು" ಎಂದು ಸ್ವಸ್ತಿವಾಚಕನು ಹೇಳಿದಾಗ ಶ್ರೋತ್ರಿಯರು 'ತಥಾಸ್ತು' ಎಂದೆನ್ನುವರು.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ **ಗುರುಗಳ ನಕ್ಷತ್ರ ಮತ್ತು ರಾಶಿಗಳ ಉಚ್ಚಾರಣೆ.** ಗುರುಗಳ ಆಶ್ರಮಪೂರ್ವದ ಜನ್ಮನಕ್ಷತ್ರ ಹಾಗೂ ಜನ್ಮರಾಶಿಗಳನ್ನು ಉಚ್ಚರಿಸಿ ಸ್ವಸ್ತಿಪ್ರಾರ್ಥನೆ ಮಾಡುವದನ್ನು ನೋಡುತ್ತೇವೆ. ಇದು ಎಷ್ಟು ಸಮಂಜಸ ? ಆತ್ಮಶ್ರಾದ್ಧಮಾಡಿಕೊಂಡು ಶುಭಮುಹೂರ್ತದಲ್ಲಿ ಗುರುಗಳಿಂದ ಆಶ್ರಮಸ್ವೀಕರಿಸಿ ಗುರುಗಳ ಕರಕಮಲಸಂಜಾತರಾಗಿ ಹೊಸಜನ್ಮ ಪಡೆದ ಸನ್ಯಾಸಿಗಳಿಗೆ ಆಶ್ರಮಪೂರ್ವದ

ನಕ್ಷತ್ರರಾಶಿಗಳು ಅನ್ವಿತವಾಗಲಾರವು. ಯಾವ ಶುಭಮುಹೂರ್ತದಲ್ಲಿ ಸನ್ಯಾಸವಾಗಿದೆಯೋ ಆ ಶುಭಘಳಿಗೆಯ ಕುಂಡಲಿ ಪ್ರಕಾರ ನಕ್ಷತ್ರರಾಶಿಗಳನ್ನು ಹೇಳಬೇಕು. ಹಾಗೆ ಹೇಳಿದಾಗಲೇ ಸ್ವಸ್ತಿವಾಚನವು ಸಫಲವಾಗುವದು.

ಶ್ರೀಸುಧೀಂದ್ರತೀರ್ಥರು ವೆಂಕಟನಾಥಾರ್ಯರಿಗೆ ಆಶ್ರಮಪ್ರದಾನ ಮಾಡಿದ ವರ್ಣನೆಯನ್ನು ಶ್ರೀರಾಘವೇಂದ್ರವಿಜಯದಲ್ಲಿ ಕಾಣುತ್ತೇವೆ –

**ಲಗ್ನೇ ಲಗ್ನಗುಣೇ ನಿಲಿಂಪಗುರುಣಾ ದೃಷ್ಟೇ ವಿಮೃಷ್ಟೇ ದ್ವಿಜೈ-**
**ರೇನಂ ಸಂಮದಭಾಗಧೀಹಿ ಭಗವೋ ಬ್ರಹ್ಮೇತ್ಯುದೀರ್ಯ ಸ್ಥಿತಮ್ ।**
**ಆಲೋಕ್ಯೋಪದಿದೇಶ ದೇಶಿಕವರಸ್ತಸ್ಮೈ ಸ ತಾರಂ ಪುರಾ**
**ಸ್ವಪ್ನೇಽಸ್ವಪ್ನದುರಾಪವೈಭವನಿಧಿರ್ಲಬ್ಧಾಂ ದದೌ ಚಾಭಿಧಾಮ್ ॥ ೭೦ ॥**

— *ರಾ.ವಿ. ಸರ್ಗ ೬*

ಆಶ್ರಮಪ್ರದಾನಸಮಯದ ಕುಂಡಲಿಯೇ ಶ್ರೀಸುಧೀಂದ್ರತೀರ್ಥರ ಕರಕಮಲ ಸಂಜಾತರಾದ ಶ್ರೀರಾಘವೇಂದ್ರತೀರ್ಥರ ಜನ್ಮಕುಂಡಲಿಯಾಗುವದು. ಈ ಜನ್ಮಕುಂಡಲಿಯಲ್ಲಿರುವ ನಕ್ಷತ್ರಾದಿಗಳೇ ಶ್ರೀರಾಯರ ನಕ್ಷತ್ರರಾಶಿಗಳಾಗುವವು. ಇದಕ್ಕನುಸಾರವಾಗಿಯೇ ಸ್ವಸ್ತಿಪ್ರಾರ್ಥನೆಯನ್ನು ಮಾಡಬೇಕು. ಇದರಂತೆಯೇ ಇತರ ಸನ್ಯಸ್ತಗುರುಗಳ ಸ್ವಸ್ತಿಪ್ರಾರ್ಥನೆ ಮಾಡಬೇಕೆಂದು ನನ್ನ ವಿಚಾರವಾಗಿದೆ. ಈ ವಿಷಯವನ್ನು ಜ್ಞಾನವೃದ್ಧರು ಸರಿಯಾಗಿ ವಿವೇಚಿಸಿ ನಿರ್ಣಯಿಸಬೇಕು.

———*———

### ಪರಿಶಿಷ್ಟ – *iii*

## ಗುರುಗುಣಸ್ತವನದಲ್ಲಿ ಗುರುಪ್ರಾರ್ಥನೆಗಳು

ಗುರುಗುಣಸ್ತವನದ ಪ್ರಾರಂಭದ ಶ್ಲೋಕಗಳಲ್ಲಿ ಕಂಡು ಬರುವ ಪ್ರಾರ್ಥನಾ ವಾಕ್ಯಗಳನ್ನು ಸಂಗ್ರಹಿಸಿ ಕೆಳಗೆ ಕೊಡಲಾಗಿದೆ.

೧. **ಪಾತು ಶ್ರೀನೇತುರಸ್ಮಾನ್ಸಪದಿ ಬುಧಜನತ್ರಾಣದಕ್ಷಃ ಕಟಾಕ್ಷಃ । (೧)**
ಬುಧಜನರ ರಕ್ಷಣೆಯಲ್ಲಿ ದಕ್ಷವಾದ ಶ್ರೀಪತಿಯ ಕಟಾಕ್ಷವು ನಮ್ಮನ್ನು ಕೂಡಲೇ ರಕ್ಷಿಸಲಿ.

೨. **ಮಾಕೃಥಾ ಮಯಿ ಪುನರ್ದುರ್ಗೇ ವಿಸರ್ಗೇ ಮತಿಮ್ । (೨)**

ಹೇ ಲೋಕಜನನಿ ದುರ್ಗೆಯೇ ! ಕಷ್ಟಕಾಲದಲ್ಲಿ ನನ್ನನ್ನು ಬಿಡುವ ಮನಸ್ಸು ಮಾಡಬೇಡ.

೨. **ಚೇತೋ ನ ಪ್ರಜಹಾತು ಜಾತುಚಿದಿಹ ಸ್ವರ್ಗೇऽಪವರ್ಗೇऽಪಿ ನಃ । (೨)**
ಹೇ ಶ್ರೀಭೂದುರ್ಗಾತ್ಮಕಳಾದ ಲೋಕಜನನಿಯೇ ! ಈ ಲೋಕದಲ್ಲಿ, ಸ್ವರ್ಗದಲ್ಲಿ ಮತ್ತು ಮೋಕ್ಷದಲ್ಲಿ ಎಲ್ಲಿದ್ದಾಗಲೂ ನಮ್ಮ ಮನಸ್ಸು ನಿನ್ನನ್ನು ಅಗಲಿ ಹೋಗದಿರಲಿ.

೩. **ನಿಸರ್ಗೇಹಿತಂ ಕಾರುಣ್ಯಂ ಕುರು । (೨)**
ಹೇ ಶ್ರೀಭೂದುರ್ಗಾತ್ಮಳಾದ ಲೋಕಜನನಿಯೇ ! ನಮ್ಮ ಸ್ವಭಾವಾಪೇಕ್ಷಿತ-ವಾದುದನ್ನು ಕರುಣಿಸು.

೪. **ಭೂಯಾತ್ಕೀಶಾವನೀಶವ್ರತಿತನುರನಿಲಃ ಶ್ರೇಯಸೇ ಭೂಯಸೇ ನಃ । (೩)**
ಹನುಮಭೀಮಮಧ್ವರೂಪೀ ಮುಖ್ಯಪ್ರಾಣನು ನಮಗೆ ಬಹಳವಾದ ಶ್ರೇಯಸ್ಸನ್ನುಂಟು ಮಾಡಲಿ.

೫. **ರೂಪೇ ಲೋಕೈಕದೀಪೇ ಪ್ರಸರತು ಹೃದಯಂ ಮಾಮಕಂ ಮಧ್ವನಾಮ್ನಿ । (೪)**
ಲೋಕೈಕದೀಪರಾದ ಶ್ರೀಮಧ್ವಾಚಾರ್ಯರಲ್ಲಿ ನನ್ನ ಮನಸ್ಸು ಸದಾ ಆಸಕ್ತವಾಗಿರಲಿ.

೬. **ಜೀಯಾದನ್ಯೈರಜಯ್ಯಃ ತ್ರಿಭುವನವಿದಿತಾಶ್ಚರ್ಯಚರ್ಯೋ ಜಯಾರ್ಯಃ । (೫)**
ಅನ್ಯರಿಂದ ಅಜಯ್ಯರಾದ ಹಾಗೂ ತ್ರಿಲೋಕಗಳಲ್ಲಿ ಪ್ರಸಿದ್ಧವಾದ ಚಿತ್ರವಿಚಿತ್ರ ಚರಿತ್ರೆಗಳುಳ್ಳ ಶ್ರೀಜಯತೀರ್ಥ ಗುರುವರ್ಯರು ಅತ್ಯಂತ ಜಯಶೀಲರಾಗಿರಲಿ (ಜಯಶೀಲರಾಗಿಯೇ ಇದ್ದಾರೆ.) ನಮಗೆ ಜಯವನ್ನುಂಟುಮಾಡಲಿ ಎಂದು ಭಾವ.

೭. **ಶ್ರೇಯೋ ಭೂಯೋ ವಿದಧ್ಯಾತ್ಸುಮಹಿತಮಹಿಮಾ ಸಂಪ್ರತಿ ವ್ಯಾಸರಾಜಃ । (೬)**
ಮಹಾಮಹಿಮರಾದ ಶ್ರೀವ್ಯಾಸರಾಜ ಗುರುಸಾರ್ವಭೌಮರು ಈಗ ನಮಗೆ ಬಹಳವಾದ ಶ್ರೇಯಸ್ಸನ್ನುಂಟು ಮಾಡಲಿ.

೯. **ಪುಷ್ಣಾತು ಶ್ರೀಜಯೀಂದ್ರಃ ತ್ರಿಭುವನವಿದಿತಃ ಸರ್ವತಂತ್ರಸ್ವತಂತ್ರಃ । (೭)**
ತ್ರಿಲೋಕಗಳಲ್ಲಿಯೂ ಅತಿಪ್ರಸಿದ್ಧರಾದ, ಸರ್ವಶಾಸ್ತ್ರಗಳಲ್ಲಿ ಅಜೇಯವಾದ ಅಸಾಧಾರಣ ಪಾಂಡಿತ್ಯವುಳ್ಳ ಮತ್ತು ಪರಾನಪೇಕ್ಷರಾದ ಶ್ರೀವಿಜಯೀಂದ್ರ-ತೀರ್ಥರು ನಮ್ಮನ್ನು ಪೋಷಿಸಲಿ.

೧೦. **ವಿಖ್ಯಾತ ಶ್ರೀಸುಧೀಂದ್ರವ್ರತಿಪತಿರತುಲಂ ಭದ್ರಮುನ್ನಿದ್ರಯೇನ್ನಃ । (೯)**
ವಿಖ್ಯಾತರಾದ ಶ್ರೀಸುಧೀಂದ್ರತೀರ್ಥರೆಂಬ ಯತಿಶ್ರೇಷ್ಠರು ನಮಗೆ ಅತುಲವಾದ ಕ್ಷೇಮ (ಮಂಗಳ)ವನ್ನುಂಟುಮಾಡಲಿ.

೧೧. ಧೀರ ಶ್ರೀರಾಘವೇಂದ್ರಃ ಸ ದಿಶತು ಸತತಂ ಭವ್ಯಮವ್ಯಾಹತಂ ನಃ । (೧೦)
ಮಹಾಜ್ಞಾನಿಗಳಾದ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು ನಮಗೆ ಸ್ಥಿರವಾದ ಮಂಗಳವನ್ನುಂಟುಮಾಡಲಿ.



## ಪರಿಶಿಷ್ಟ – *iv*

# ಗುರುಗುಣಸ್ತವನದಲ್ಲಿಯ ಸುಭಾಷಿತಗಳು ಹಾಗೂ ನೀತಿವಾಕ್ಯಗಳು

೧. ಪಾತು ಶ್ರೀನೇತುರಸ್ಮಾನ್ ಸಪದಿ ಬುಧಜನತ್ರಾಣದಕ್ಷಃ ಕಟಾಕ್ಷಃ ॥೧॥

೨. ಭೂಯಾತ್ಕೀಶಾವನೀಶಪ್ರತಿತನುರನಿಲಃ ಶ್ರೇಯಸೇ ಭೂಯಸೇ ನಃ ॥೩॥

೩. ರೂಪೇ ಲೋಕೈಕದೀಪೇ ಪ್ರಸರತು ಹೃದಯಂ ಮಾಮಕಂ ಮಧ್ವನಾಮ್ನಿ ॥೪॥

೪. ಜೀಯಾದನ್ಯೈರಜೇಯಃ ತ್ರಿಭುವನವಿದಿತಾಶ್ಚರ್ಯಚರ್ಯೋ ಜಯಾರ್ಯಃ ॥೫॥

೫. ಶ್ರೀರಾಮವ್ಯಾಸದಾಸೋ ವಿಲಸತಿ ವಿಬುಧೇಂದ್ರಾಭಿಧಃ ಸಂಯಮೀಂದ್ರಃ ॥೬॥

೬. ಶ್ರೇಯೋ ಭೂಯೋ ವಿದಧ್ಯಾತ್ಸುಮಹಿತಮಹಿಮಾ ಸಂಪ್ರತಿ ವ್ಯಾಸರಾಜಃ ॥೭॥

೭. ಪುಷ್ಣಾತು ಶ್ರೀಜಯೀಂದ್ರಸ್ತ್ರಿಭುವನವಿದಿತಃ ಸರ್ವತಂತ್ರಃ ಸ್ವತಂತ್ರಃ ॥೮॥

೮. ವಿಖ್ಯಾತಶ್ರೀಸುಧೀಂದ್ರವ್ರತಿಪತಿರತುಲಂ ಭದ್ರಮುನ್ನಿದ್ರಯೇನ್ನಃ ॥೯॥

೯. ಧೀರಶ್ರೀರಾಘವೇಂದ್ರಃ ಸದಿಶತು ಸತತಂ ಭವ್ಯಮವ್ಯಾಹತಂ ನಃ ॥೧೦॥

೧೦. ಯೋಗೋ ಯಃ ಕರ್ಮನಾಮಾ ಕವಿಭಿರಭಿಹಿತಃ ಯಶ್ಚ ವಿಜ್ಞಾನ ಸಂಜ್ಞಃ ।
ಶಕ್ತೋ ನಾಸಿದ್ಧಕಾಯಃ ತನುಮತಿರನಯೋಸ್ತಾವದಾವರ್ಜನೇಽಹಂ ॥

೧೧. ವಂಧ್ಯೈವಾತಃ ಪ್ರತಿಜ್ಞಾ ತದತುಲನಿಖಿಲಾಶ್ಚರ್ಯಚರ್ಯಾಭಿಧಾನೇ ।
ಸ್ಥಾನೇಥಾಪಿ ಕ್ವಚಿತ್ಸ್ಯಾದಿಹ ಪುನರುದಧಿಸ್ನಾನಸಂಕಲ್ಪವತ್ಸಾ ॥೧೪॥

೧೨. ಚಿತ್ತೇ ನಾಯುಕ್ತಮರ್ಥಂ ಕಲಯತಿ ಸಹಸಾ ನಾಭಿಧತ್ತೇ ನ ಸದ್ಭಿಃ
ಸಾಕಂ ಮೀಮಾಂಸತೇ ವಾ ನ ಲಿಖತಿ ವಚಸೋದ್ಘಾಟಯತ್ಯಾಶಯಂ ಸ್ವಮ್ ।
ಉಕ್ತಂ ನೋ ವಕ್ತಿ ಭೂಯಃ ಕ್ವಚಿದಪಿ ಲಿಖಿತಂ ನೈವ ನಿರ್ಮಾರ್ಷ್ಟಿ ತಸ್ಮಾತ್
ಅಸ್ಮಾಭಿಃ ಸತ್ಪ್ರಬಂಧಪ್ರಣಯನವಿಷಯೇ ಸ್ತೂಯತೇ ರಾಘವೇಂದ್ರಃ ॥೧೫॥

೧೩. ಲೋಕೇ ಸಾಧು ವ್ಯಧಾಯಿ ಶ್ರುತಗುಣ ಭವತಾಽಽಚಾರ್ಯಚರ್ಯಾನುವೃತ್ತಿಃ ||೨೪||

೧೪. ನ ಸ್ಯಾದೀಶಪ್ರಸಾದೋ ಗುರುವರಕರುಣಾಮಂತರೇಣೇತಿ ರೂಢೋ |
ಧೀರಶ್ರೀರಾಘವೇಂದ್ರ ವ್ರತಿವರ ಸುದೃಢಶ್ಚೈತಸಸ್ತೇ ವಿಪಾಕಃ ||೨೬||

೧೫. ಯಾವದ್ವೇದಾಂತಖಂಡಪ್ರವಚನಕೃತಿನಿ ಪ್ರೇಮ ಭೂಮಾ ನ ತಾದೃಕ್
ಸರ್ವಾಮ್ನಾಯಪ್ರವಕ್ತರ್ಯನುಪಮಚರಿತೇ ರಾಘವೇಂದ್ರವ್ರತೀಂದ್ರೇ |
ಇತ್ಯೇತದ್ದೇಹಭಾಜಾಮತಿವಿಶದರುಚೌ ಜಾಗರೂಕೇಽಪಿ ಲೋಕೇ
ರಾಕಾಚಂದ್ರೇ ದ್ವಿತೀಯಾಶಶಿಶಕಲನತಿನ್ಯಾಯಮೇವಾನುರುಂಧೇ ||೩೦||

೧೬. ನೂನಂ ವಾಕ್ಯಾನುರೋಧಿ ಪ್ರಕರಣಮಖಿಲಂ ನ್ಯೇಯಮಿತ್ಯುಕ್ತಮುಚ್ಚೈಃ |
ಪ್ರಾಚಾಂ ವಾಚಂಯಮೇನ ಪ್ರಕಟಿತವಿಭವಾನಂತವೇದಾಂತವಾಚಾ |

೧೭. ಬ್ರೂಹಿ ಶ್ರೀರಾಘವೇಂದ್ರವ್ರತಿವಿಬುಧಮಣೇ ಕಸ್ತ್ವದನ್ಯೋ ವದಾನ್ಯಃ ||೩೩||

೧೮. ಕಿಂ ವಾ ದುಸ್ಸಾಧ್ಯಮಸ್ತಿ ತ್ರಿಜಗತಿ ಮಹತಾಮಾತ್ಮನಃ ಪಾಣಿಪದ್ಮೇ |
ಯಸ್ಯಾಮಂದೋ ಮರಂದಃ ಕಿಲ ಘಟಜನುಷಾ ಚೋಲಿರಾಕಾರಿ ಸಿಂಧುಃ ||೩೫||

೧೯. ವ್ಯಾಸೇನ ವ್ಯುಪ್ತಬೀಜಃ ಶ್ರುತಿಭುವಿ ಭಗವತ್ಪಾದಲಬ್ಧಾಂಕುರಶ್ರೀಃ
ಪತ್ರೈರೀಷತ್ಪ್ರಭಿನ್ನೋಽಜನಿ ಜಯಮುನಿನಾ ಸಮ್ಯಗುದ್ಭಿನ್ನಶಾಖಃ |
ಮೌನೀಶವ್ಯಾಸರಾಜಾದುದಿತಕಿಸಲಯಃ ಪುಷ್ಪಿತೋಽಯಂ ಜಯೀಂದ್ರಾತ್
ಅದ್ಯ ಶ್ರೀರಾಘವೇಂದ್ರಾದ್ವಿಲಸತಿ ಫಲಿತೋ ಮಧ್ವಸಿದ್ಧಾಂತಶಾಖೀ ||೩೭||



## ಪರಿಶಿಷ್ಟ – *೮*

# ಗುರುಗುಣಸ್ತವನದಲ್ಲಿ ಕಂಡು ಬರುವ ಲೌಕಿಕ ನ್ಯಾಯಗಳು

**ಶ್ಲೋಕ ೧)** **ಖಲೇ ಕಪೋತನ್ಯಾಯಃ :** ಧಾನ್ಯವನ್ನು ಶೇಖರಿಸಿಡುವ ಕಣದಲ್ಲಿ ಒಂದು ಪಾರಿವಾಳವು ಬಂದರೆ ಅದನ್ನನುಸರಿಸಿ ಆಗಲೇ ಅನೇಕ ಪಾರಿವಾಳಗಳು ಬರುವವು. ಆ ಕಣವನ್ನು ಒಂದು ಪಾರಿವಾಳವು ಬಿಟ್ಟು ಹೋದರೆ ಉಳಿದೆಲ್ಲ ಪಾರಿವಾಳ ಹಕ್ಕಿಗಳೂ ಆಗಲೇ ಬಿಟ್ಟು ಹೋಗುವವು ಎಂಬ ನ್ಯಾಯವಿರುವದು. ಇದರಂತೆ ಶ್ರೀಪತಿಯ ಕಟಾಕ್ಷವೊಂದು ತಮ್ಮ ಮೇಲೆ ಬೀಳಲಿ ಇದರಿಂದ ಇತರೆಲ್ಲ ಜ್ಞಾನ, ಭಕ್ತಿ ವೈರಾಗ್ಯಾದಿ ಸಂಪತ್ತುಗಳು

ತಾವೇ ಪ್ರಾಪ್ತವಾಗುವವು ಮತ್ತು ಶ್ರೀಪತಿಯ ಕಟಾಕ್ಷವು ಸ್ಥಿರವಾಗಿರಲಿ ಎಂದು ಕವಿಯ ಆಶೆಯಾಗಿದೆ.

ಈ ಶ್ಲೋಕದಲ್ಲಿ **ಕಾಕಾಕ್ಷಿ ಗೋಲಕ ನ್ಯಾಯವನ್ನೂ** ಗುರುತಿಸಬಹುದು. ಹೇಗೆಂದರೆ ಕಾಗೆಯ ಒಂದೇ ಅಕ್ಷಿಗೋಲಕವು ಆದರ ಎರಡೂ ಗುಡ್ಡಿಗಳಲ್ಲಿ ಸಂಚರಿಸುವುದರಿಂದ ಆದು ತನ್ನ ಎಡಬಲಪಕ್ಕಗಳಲ್ಲಿರುವ ವಸ್ತುಗಳನ್ನು ನೋಡಲು ಸಮರ್ಥವಾಗಿರುವದು. ಇದರಂತೆ ಶ್ರೀಪತಿಯ ಕಟಾಕ್ಷವು ಬುಧಜನರ ಮೇಲೆ ಬಿದ್ದು ರಕ್ಷಿಸುವಂತೆ ನಮ್ಮ ಮೇಲೆಯೂ ಬಿದ್ದು ನಮ್ಮನ್ನು ರಕ್ಷಿಸಲಿ ಎಂಬುದು ಕವಿಯ ಆಶೆಯಾಗಿದೆ. (ಶ್ರೀಪತಿಗೆ ಅನಂತ ಕಟಾಕ್ಷಗಳಿದ್ದರೂ ಇಲ್ಲಿ ಒಂದೇ ಕಟಾಕ್ಷವೆಂದು ಇಟ್ಟುಕೊಂಡು ವಿನೋದಕ್ಕಾಗಿ ಹೀಗೆ ಹೇಳಲಾಗಿದೆ.)

**ಶ್ಲೋಕ ೬)** **'ಗಂಜಾಗೇಹ'ನ್ಯಾಯಃ** (ಶ್ರೀಜಯರಾಮಾರ್ಯರ ವ್ಯಾಖ್ಯಾನ) : ಶ್ರೀವಿಬುಧೇಂದ್ರತೀರ್ಥರನ್ನು ವರ್ಣಿಸುವಾಗ **"ಸೇನಾನಾಸೀರ"** ಎಂಬ ಪದಬರುತ್ತದೆ. ನಾಸೀರ ಎಂಬ ಪದಕ್ಕೆ ಸೇನಾಮುಖ ಎಂಬ ಅರ್ಥವಿರುವಾಗ ಪುನಃ ಸೇನಾನಾಸೀರ ಎಂದು ತಿಳಿದರೆ 'ಸೇನಾನಾಸೀರ' ಎಂಬಲ್ಲಿಯ ಸೇನಾ ಶಬ್ದವು ವ್ಯರ್ಥವಾಗುವದಿಲ್ಲವೇ ಎಂದು ಶಂಕಿಸಿದರೆ ನಾಸೀರ ಎಂಬ ಪದಕ್ಕೆ ಸೇನಾಮುಖ ಎಂದು ಅರ್ಥ ಮಾಡದೇ 'ಗಂಜಾಗೇಹ ನ್ಯಾಯ'ದಂತೆ 'ಮುಖ್ಯ' ಎಂದಿಷ್ಟೇ ಅರ್ಥ ಮಾಡಬೇಕೆಂದು ವ್ಯಾಖ್ಯಾನಕಾರರು ತಿಳಿಸುತ್ತಾರೆ.

'ಗಂಜಾಗೇಹ' ಎಂಬಲ್ಲಿ ಗಂಜಾ ಎಂದರೇ ಮದಿರಾಗೃಹ ಎಂದು ಅರ್ಥವಾಗುವಾಗ ಪುನಃ 'ಗೇಹ' ಶಬ್ದ ವ್ಯರ್ಥವಾಗುವದು. ಆದ್ದರಿಂದ ಗಂಜಾ ಎಂದರೆ ಮದಿರಾ ಎಂದಿಷ್ಟೇ ಅರ್ಥಮಾಡಬೇಕು ಎಂದು ತಿಳಿಸುವುದೇ 'ಗಂಜಾಗೇಹನ್ಯಾಯ'.

**ವಿಶೇಷ :** ಇಂಥದೇ ಒಂದು ಶಬ್ದಪ್ರಯೋಗವು ಕಾಲಿದಾಸನಿಂದ 'ಸಕೀಚಕೈಃ ಮಾರುತಪೂರ್ಣರಂಧ್ರೈಃ' ಎಂಬಲ್ಲಿ ಮಾಡಲ್ಪಟ್ಟಿದೆ. ಇದರ ಸಾರ್ಥಕ್ಯವನ್ನು ವ್ಯಾಖ್ಯಾನಕಾರ **ವಿಶಿಷ್ಟವಾಚಕಪದಸ್ಯ ವಿಶೇಷಣಪದಸಮಭಿವ್ಯಾಹಾರೇ ವಿಶೇಷ್ಯಮಾತ್ರಬೋಧಕತ್ವಂ** ಎಂದು ಹೇಳುತ್ತಾ ಸಮರ್ಥಿಸಿದ್ದಾರೆ.

ಈ ೬ನೆಯ ಶ್ಲೋಕದಲ್ಲಿ 'ಗಂಜಾಗೇಹನ್ಯಾಯ'ದಂತೆ ಇನ್ನೂ ಕೆಲವು ಶಬ್ದಗಳ ಪ್ರಯೋಗವು ಕಂಡುಬರುವದು. ಅವು ಕೆಳಗಿನಂತಿವೆ.

೧. **ಪೂರ್ಣಪ್ರಬೋಧ** – ಇಲ್ಲಿ 'ಪ್ರ' ಎಂಬುದಕ್ಕೆ 'ಪೂರ್ಣ' ಎಂದು ಅರ್ಥ. 'ಪ್ರಬೋಧ' ಎಂಬ ಪದದಿಂದಲೇ 'ಪೂರ್ಣಬೋಧ' ಎಂದರ್ಥವಾಗುತ್ತಿರುವಾಗ ಪುನಃ 'ಪೂರ್ಣಪ್ರಬೋಧ' ಎಂದು ಹೇಳಲಾಗಿದೆ. ಪ್ರಬೋಧ ಎಂಬುದಕ್ಕೆ 'ಬೋಧ' (ಜ್ಞಾನ) ಎಂದಿಷ್ಟೇ ಅರ್ಥಮಾಡಬೇಕು.

> ಗುಣೇ ಸತ್ತ್ವೇ ಪ್ರಕೃಷ್ಟೇ ಚ ಪ್ರಶಬ್ದೋ ವರ್ತತೇ ಶ್ರುತಃ ।
> ಮಧ್ಯಮೇ ರಜಸಿ ಕೃಶ್ಚ ತಿಶಬ್ದಸ್ತಮಸಿ ಶ್ರುತಃ ॥
>
> – *ದೇವೀ ಭಾಗವತ ೯-೧-೬*

೨. **ಪದವೀಧಾವಿ** – ಪದವೀ ಎಂದರೆ ಮಾರ್ಗ. 'ಧಾವೀ' ಅಂದರೇನೇ ಮಾರ್ಗಗಂತಾ ಎಂದರ್ಥವಾಗುತ್ತಿದ್ದರೂ 'ಗಂತಾ' ಎಂದಿಷ್ಟೇ ಇಟ್ಟುಕೊಳ್ಳಬೇಕು.

೩. **ಮೇಧಾವಿಧೀಮತ್** – ಧೀರ್ಧಾರಣಾವತೀ ಮೇಧಾ (ಅಮರ) ಎಂಬಂತೆ 'ಮೇಧಾ' ಅಂದರೆ ಜ್ಞಾಪಕಶಕ್ತಿಯುಳ್ಳ ಬುದ್ಧಿ ಎಂದರ್ಥ. ಮೇಧಾವಿ ಅಂದರೆ ಜ್ಞಾಪಕಶಕ್ತಿಯುಳ್ಳ ಬುದ್ಧಿಯುಳ್ಳವರು ಎಂದಾಗುವದು. ಧೀಮತ್ ಎಂದರೆ ಬುದ್ಧಿಯುಳ್ಳವರು ಎಂದರ್ಥ. ಆದ್ದರಿಂದ ಮೇಧಾವಿ ಎಂಬುದಕ್ಕೆ ಜ್ಞಾಪಕಶಕ್ತಿಯುಳ್ಳ ಎಂದಿಷ್ಟೇ ಅರ್ಥ ಮಾಡಬೇಕು.

**ಶ್ಲೋಕ ೧೨) ಸೂಚೀಕಟಾಹನ್ಯಾಯಃ** : ಕರ್ಮಯೋಗ, ಜ್ಞಾನಯೋಗ ಮತ್ತು ಭಕ್ತಿಯೋಗ ಎಂಬ ಮೂರು ಮೋಕ್ಷೋಪಾಯಗಳಲ್ಲಿ ಭಕ್ತಿಯೋಗವು ಉಳಿದೆರಡಕ್ಕಿಂತ ಸುಲಭವಾಗಿರುವುದರಿಂದ ಕವಿಯು ಅದನ್ನೇ ಆಶ್ರಯಿಸಲು ಬಯಸುತ್ತಾರೆ. ಕಠಿಣವಾದ ಅಥವಾ ದೊಡ್ಡದಾದ ಕೆಲಸಗಳು ಮತ್ತು ಹಗುರಾದ ಕೆಲಸಗಳು ಇದ್ದಾಗ ಹಗುರಾದದ್ದನ್ನೇ ಮೊದಲು ಮಾಡಲು ಇಷ್ಟಪಡುವದು ಲೋಕದಲ್ಲಿ ಕಂಡಿದೆ. ಅದರಂತೆ ಇಲ್ಲಿ ಹಗುರಾದ ಅಥವಾ ಸುಲಭವಾದುದನ್ನೇ ಆರಿಸಿಕೊಂಡು ಅದರಿಂದಲೇ ಸಾಧ್ಯಸಿದ್ಧಿಯಾಗುವುದರಿಂದ ಕಠಿಣಕೆಲಸವನ್ನು ನಂತರ ಮಾಡುವ ಅವಶ್ಯಕತೆಯೇ ಉಳಿಯುವದಿಲ್ಲ. **ಅರ್ಕೇ ಚೇನ್ಮಧು ವಿಂದೇತ ಕಿಮರ್ಥಂ ಪರ್ವತಂ ವ್ರಜೇತ್** ಅಂದರೆ ಅರ್ಕವೃಕ್ಷದಲ್ಲೇ ಮಧು ದೊರೆಯುವಾಗ ಕಷ್ಟಬಟ್ಟು ಪರ್ವತಕ್ಕೇಕೆ ಹೋಗಬೇಕು ಎಂಬ ನ್ಯಾಯದಂತೆ ಸುಲಭಸಾಧ್ಯವಾದ ಗುರುಪ್ರಸಾದದಿಂದ ಪುರುಷಾರ್ಥ

ಸಿದ್ಧಿಯಾಗುವಾಗ ಕಷ್ಟಸಾಧ್ಯವಾದ ಕರ್ಮಯೋಗ, ಜ್ಞಾನಯೋಗಗಳನ್ನು ಆಶ್ರಯಿಸುವದು ಜಾಣ್ಮೆಯಲ್ಲ ಎಂದು ಭಾವ.

**ಅಶೋಕವನಿಕಾನ್ಯಾಯ :** ಅಶೋಕವನಿಕಾಕ್ಕೆ ಹೋಗುವುದರಿಂದ ಅಲ್ಲಿ ಉತ್ಕೃಷ್ಟ ವೃಕ್ಷಚ್ಛಾಯಾ ಮತ್ತು ಪುಷ್ಪಫಲಸೌರಭ್ಯಾದಿಗಳ ಲಾಭವಿರು-ವುದರಿಂದ ಬೇರೇ ಕಡೆಗೆ ಹೋಗುವ ಆಸೆಯು ಉಂಟಾಗುವದಿಲ್ಲ. ಅದರಂತೆ ಪುರುಷನಿಗೆ ತನ್ನ ಅಭೀಷ್ಟವಾದ ಪುರುಷಾರ್ಥವು (ಮೋಕ್ಷವು) ಸುಲಭಸಾಧ್ಯವಾದ ಗುರುಪ್ರಸಾದದಿಂದ ದೊರಕುವಾಗ ಅದನ್ನು ಬಿಟ್ಟು ಕಷ್ಟಸಾಧ್ಯವಾದ ಕರ್ಮಯೋಗ, ಜ್ಞಾನಯೋಗಗಳ ಕಡೆಗೆ ಅವನ ಮನಸ್ಸು ಹೋಗುವದಿಲ್ಲ.

ಶ್ಲೋಕ ೧೩) **ಹಸ್ತಿಮಶಕನ್ಯಾಯಃ :** ಆನೆ ಮತ್ತು ಸೊಳ್ಳೆಗಳು ಯಾವ ದೃಷ್ಟಿ-ಯಿಂದಲೂ ಸಮಾನವಾಗಲಾರವು. ಅದರಂತೆ ಶ್ರೀರಾಘವೇಂದ್ರರ ಚರಿತೆಗಳು ಅಪಾರ. ಇಂಥ ಅಪಾರವಾದ ಚರಿತೆಗಳನ್ನು ವರ್ಣಿಸಲು ತಮ್ಮ ಅಲ್ಪಮತಿಯು ಸಮರ್ಥವಲ್ಲವೆಂದು ಕವಿಗಳ ಅನಿಸಿಕೆ.

ಶ್ಲೋಕ ೧೭) **i) ಸ್ವಾಮಿಭೃತ್ಯನ್ಯಾಯಃ :** ಒಡೆಯನು ತನ್ನ ಸೇವಕನಿಗೆ ತನ್ನಲ್ಲಿರುವ ಧನಕನಕಾದಿಗಳನ್ನು ಕೊಟ್ಟು ತೃಪ್ತಿಬಡಿಸುವಂತೆ ಶ್ರೀರಾಘವೇಂದ್ರ ಗುರುಗಳು ತಮ್ಮನ್ನು ಸೇವಿಸುವವರಿಗೆ ಅಪೇಕ್ಷಿತವಾದುದನ್ನು ಕೊಡುವರು.

**ii) ಗುರುಶಿಷ್ಯನ್ಯಾಯಃ :** ಗುರುಗಳಾದವರು ಶಿಷ್ಯರ ಹೃದಯದಲ್ಲಿರುವ ಅಜ್ಞಾನವನ್ನು ಹೋಗಲಾಡಿಸಿ ಜ್ಞಾನವನ್ನು ಕೊಡುವಂತೆ ಶ್ರೀರಾಯರು ಸ್ವಾಶ್ರಿತಜನರ ಅಜ್ಞಾನವನ್ನು ಕಳೆಯುವರು.

ಸೇವಕನಾದವನು ಮತ್ತು ಶಿಷ್ಯನಾದವನು ಶ್ರೀರಾಘವೇಂದ್ರರನ್ನು ಭಕ್ತಿಯಿಂದ ಸೇವಿಸಿ ಅವರಿಂದ ಅನುಗ್ರಹರೂಪವಾಗಿ ಇಷ್ಟಾರ್ಥಗಳನ್ನು ಹಾಗೂ ಜ್ಞಾನವನ್ನು ಸಂಪಾದಿಸಬೇಕೆಂಬ ಸೂಚನೆಯು 'ವಂದಾರು' ಎಂಬ ಪದದಿಂದ ವ್ಯಕ್ತವಾಗುವದು.

ಶ್ಲೋಕ ೨೮) **ದ್ವಿತೀಯಾಶಶಿಶಕಲನತಿನ್ಯಾಯಃ :** ಹುಣ್ಣಿಮೆಯ ಚಂದ್ರನು ಸಕಲ ಕಲೆಗಳಿಂದ ಕೂಡಿ ಪ್ರಕಾಶಿಸುತ್ತಿದ್ದರೂ ಅವನನ್ನು ಬಿಟ್ಟು ಜನರು ಸಣ್ಣಕಳೆಯಿಂದ ಕೂಡಿದ ಶುಕ್ಲಪಕ್ಷದ ಬಿದಿಗೆಯ ಚಂದ್ರನನ್ನೇ ನಮಸ್ಕರಿಸುವ ನ್ಯಾಯದಂತೆ ಲೋಕದಲ್ಲಿ ಒಬ್ಬ ವ್ಯಕ್ತಿಯು ಯಾವ ಕಾರ್ಯದಿಂದ ಜನರಿಗೆ ಉಪಕಾರವೂ ಸಂತೋಷವೂ ಆಗುವವೋ ಆ

ಕಾರ್ಯವು ಎಷ್ಟೇ ಚಿಕ್ಕದಾಗಿದ್ದರೂ ಅಂಥ ಕಾರ್ಯವನ್ನೇ ಜನರು ಸ್ಮರಿಸುತ್ತಾರೆ ಮತ್ತು ಆ ಕಾರ್ಯವನ್ನು ಮಾಡಿದ ವ್ಯಕ್ತಿಯನ್ನು ಗೌರವಿಸುತ್ತಾರೆ. ಆ ವ್ಯಕ್ತಿಯು ಇತರ ಎಷ್ಟೇ ಮಹತ್ಕಾರ್ಯಗಳನ್ನು ಮಾಡಿದ್ದರೂ, ಉಪಕಾರಿಯಾದ ಚಿಕ್ಕ ಕಾರ್ಯದಿಂದ ಜನರ ಗೌರವಕ್ಕೆ ಪಾತ್ರನಾದಂತೆ ಅನ್ಯ ಮಹತ್ಕಾರ್ಯಗಳಿಂದ ಗೌರವಿಸಲ್ಪಡುವದಿಲ್ಲ.

ಪ್ರಕೃತದಲ್ಲಿ ಶ್ರೀರಾಘವೇಂದ್ರತೀರ್ಥರು ವೇದವ್ಯಾಖ್ಯಾನ ಮಾಡಿದವರೆಂದು ಜನರಿಂದ ಅಷ್ಟು ಮಾನ್ಯರಾಗದೇ ಉಪನಿಷತ್ತುಗಳಿಗೆ ಖಂಡಾರ್ಥಗಳನ್ನು (ಅಥವಾ ಉಪನಿಷತ್ಖಂಡಗಳಿಗೆ ಅರ್ಥವನ್ನು) ಬರೆದವರೆಂದು ಗೌರವಿಸಲ್ಪಟ್ಟರು. ಏಕೆಂದರೆ ಶ್ರೀರಾಘವೇಂದ್ರತೀರ್ಥರು ರಚಿಸಿದ ಉಪನಿಷತ್ ಖಂಡಾರ್ಥಗಳಿಂದ ಜಿಜ್ಞಾಸುಗಳಾದ ಮುಮುಕ್ಷುಗಳಿಗೆ ವೇದವ್ಯಾಖ್ಯಾನಗಳಿಗಿಂತಲೂ ಅಧಿಕವಾದ ಉಪಕಾರವಾಗಿದೆ, ಈ ಖಂಡಾರ್ಥಗಳಿಂದ ಜನರು ಇಷ್ಟಸಿದ್ಧಿಯನ್ನು ಪಡೆಯಲು ಸಮರ್ಥರಾಗುತ್ತಾರೆ.

(ಈ ವಿವರಣೆಯಿಂದ ಶ್ರೀರಾಯರ ವೇದವ್ಯಾಖ್ಯಾನಗಳು ಕಡಿಮೆ ಎಂದು ಭಾವಿಸಬಾರದು. ಜಿಜ್ಞಾಸುಗಳ ಯೋಗ್ಯತೆಯನ್ನನುಸರಿಸಿ ಶ್ರೀರಾಯರ ಒಂದು ಬೃಹದ್‌ಗ್ರಂಥದಂತೆ ಚಿಕ್ಕ ಗ್ರಂಥದ ಅಧ್ಯಯನದಿಂದಲೂ ಸಕಲ ಪುರುಷಾರ್ಥಗಳೂ ಸಾಧ್ಯ ಎಂದು ತಿಳಿಸುವುದೇ ಇಲ್ಲಿಯ ತಾತ್ಪರ್ಯ.)

ಇದರಂತೆ ಇತರ ಕೆಲವು ಶ್ಲೋಕಗಳಿಂದ ಇನ್ನೂ ಕೆಲವು ನ್ಯಾಯಗಳನ್ನು ಶೋಧಿಸಿ ಸಮನ್ವಯಿಸಬಹುದು.

———*———

### ಪರಿಶಿಷ್ಟ – *vi*

# ಗುರುಗುಣಸ್ತವನದಲ್ಲಿ ಕಂಡುಬರುವ ಅಲಂಕಾರಗಳು ಹಾಗೂ ವೃತ್ತಗಳು

ಗುರುಗುಣಸ್ತವನದ ಶ್ಲೋಕಗಳಲ್ಲಿ ಕಂಡುಬರುವ ವಿವಿಧ ಅರ್ಥಾಲಂಕಾರ ಹಾಗೂ ಶಬ್ದಾಲಂಕಾರಗಳನ್ನು ಕೆಳಗೆ ಸಂಗ್ರಹಿಸಿ ಕೊಡಲಾಗಿದೆ.

| ಅ. ಅರ್ಥಾಲಂಕಾರ | *ಶ್ಲೋಕಸಂಖ್ಯೆ* |
|---|---|
| ೧. ಪ್ರತೀಪ | (೧,೧೪) |
| ೨. ಪರಿಕರ | (೧,೧೨,೨೭,೨೮) |

| | | |
|---|---|---|
| ೩. | ಅತಿಶಯೋಕ್ತಿ | (೨,೧೪) |
| ೪. | ರೂಪಕ | (೩,೪,೫,೮,೯,೧೦,೧೧,೧೩,೧೯,೩೧) |
| ೫. | ಸ್ವಭಾವೋಕ್ತಿ | (೬,೯,೧೧) |
| ೬. | ಪೂರ್ಣೋಪಮಾ | (೭,೧೩,೨೦,೨೨) |
| ೭. | ವಿಷಮಾಲಂಕಾರ | (೧೩) |
| ೮. | ಉಪಮಿತಿ | (೯) |
| ೯. | ಉತ್ಪ್ರೇಕ್ಷಾ | (೧೬,೨೧,೩೬) |
| ೧೦. | ಸಮಾಸೋಕ್ತಿ | (೧೭,೨೫) |
| ೧೧. | ಶ್ಲೇಷ | (೧೮,೩೩) |
| ೧೨. | ಪರಿಸಂಖ್ಯಾ | (೨೩) |
| ೧೩. | ವಿರೋಧಾಭಾಸ | (೨೪,೩೨) |
| ೧೪. | ದೃಷ್ಟಾಂತ | (೨೫) |
| ೧೫. | ಸ್ಮೃತಿಮದಲಂಕಾರ | (೨೯) |
| ೧೬. | ಅರ್ಥಾಂತರನ್ಯಾಸ | (೩೫) |
| ೧೭. | ಕಾರಣ ಮಾಲಾ | (೩೭) |
| ೧೮. | ಕಾವ್ಯಲಿಂಗ | (೩೭) |

ಬ. ಶಬ್ದಾಲಂಕಾರ

| | | |
|---|---|---|
| ೧. | ವೃತ್ಯನುಪ್ರಾಸ | (೧,೨,೩,೪,೫,೭,೯,೧೦,೧೧,೧೫) |
| ೨. | ಛೇಕಾನುಪ್ರಾಸ | (೬,೧೪) |

**ವೃತ್ತ** : ಗುರುಗುಣಸ್ತವನದ ಮೂಲದಲ್ಲಿ 'ಮಾತಸ್ತ್ವ .....' ಎಂಬ ೨ನೆಯ ಶ್ಲೋಕವು ಇರುವುದಾಗಿ ಶ್ರೀಜಯರಾಮಾರ್ಯರ ವ್ಯಾಖ್ಯಾನದಿಂದ ತಿಳಿದುಬರುತ್ತದೆ. ಇದೊಂದು ಮಾತ್ರ ಶಾರ್ದೂಲವಿಕ್ರೀಡಿತ ಎಂಬ ವೃತ್ತದಲ್ಲಿದೆ. ಉಳಿದೆಲ್ಲ ಶ್ಲೋಕಗಳೂ ಸ್ರಗ್ಧರಾ ವೃತ್ತದಲ್ಲಿವೆ.

ಗುರುಗುಣಸ್ತವನದಲ್ಲಿಯ ಶ್ಲೋಕಗಳ ಶಬ್ದಾಲಂಕಾರ ಹಾಗೂ ಅರ್ಥಾಲಂಕಾರಗಳ ಲಕ್ಷಣೋದಾಹರಣೆಗಳಿಗಾಗಿ ಶ್ರೀಸುಧೀಂದ್ರತೀರ್ಥರ ಅಲಂಕಾರಮಂಜರಿಯನ್ನು ಮತ್ತು ಅಲಂಕಾರ ಹಾಗೂ ವೃತ್ತಗಳ ವಿವರಣೆಗಾಗಿ ಪೂಜ್ಯ ಶ್ರೀರಾಜಾ ಶ್ರೀಗುರುರಾಜಾಚಾರ್ಯರಿಂದ ಕನ್ನಡದಲ್ಲಿ ಅನುವಾದಿತ ಗುರುಗುಣಸ್ತವನ ವ್ಯಾಖ್ಯಾನವನ್ನು ನೋಡಬಹುದು.

——*——

## ಪರಿಶಿಷ್ಟ – *vii*

# ಗುರುಗುಣಸ್ತವನದಲ್ಲಿ ಕಾವ್ಯರಸ

**ಶೃಂಗಾರಹಾಸ್ಯಕರುಣಾರೌದ್ರವೀರಭಯಾನಕಾಃ । ಬೀಭತ್ಸಾದ್ಭುತಸಂಜ್ಞೌ ಚೇತ್ಯಷ್ಟೌ ನಾಟ್ಯೇ ರಸಾಃ ಸ್ಮೃತಾಃ ॥** – (ನಾಟ್ಯಶಾಸ್ತ್ರ ೬-೧೫) ನಾಟ್ಯದಲ್ಲಿ ಶೃಂಗಾರ, ಹಾಸ್ಯ, ಕರುಣಾ, ರೌದ್ರ, ವೀರ, ಭಯಾನಕ, ಬೀಭತ್ಸ, ಮತ್ತು ಅದ್ಭುತ ಎಂದು ಎಂಟು ರಸಗಳಿರುವುದನ್ನು ಭರತಮುನಿಯು ತಿಳಿಸುತ್ತಾನೆ ಮತ್ತೆ ಕೆಲವರು ಕಾವ್ಯದಲ್ಲಿ ಈ ಎಂಟು ರಸಗಳಲ್ಲದೇ 'ಶಾಂತ' ಮತ್ತು 'ಭಕ್ತಿ' ಎಂಬ ರಸಗಳೂ ಇರುವುದನ್ನು ಸ್ಥಾಪಿಸಿದ್ದಾರೆ. ಈ ಹತ್ತು ಕಾವ್ಯರಸಗಳು ಕಾವ್ಯದಲ್ಲಿ ಕಂಡು ಬಂದರೂ ಅವುಗಳಲ್ಲಿ ಒಂದು ರಸವು ಮಾತ್ರ ಪ್ರಾರಂಭದಿಂದ ಕೊನೆಯವರೆಗೆ ಓತಪ್ರೋತವಾಗಿ ಹರಿಯುತ್ತಿರುತ್ತದೆ. ಇದೇ ಪ್ರಧಾನರಸ ಅಥವಾ ಅಂಗಿರಸವೆಂದು ಕರೆಯಲ್ಪಡುತ್ತದೆ. ಉಳಿದ ರಸಗಳು ಅಪ್ರಧಾನ ಅಥವಾ ಅಂಗರಸಗಳು. ಅಂಗಿರಸಕ್ಕೆ ವಿರೋಧಭಾರದಂತೆ ಅಂಗರಸಗಳು ಪ್ರವಹಿಸುತ್ತಿರುತ್ತವೆ.

**ಪ್ರಸಿದ್ಧೇಽಪಿ ಪ್ರಬಂಧಾನಾಂ ನಾನಾರಸನಿಬಂಧನೇ । ಏಕೋ ರಸೋಽಂಗೀ-ಕರ್ತವ್ಯಃ ತೇಷಾಮುತ್ಕರ್ಷಮಿಚ್ಛತಾ ॥** – (ಧ್ವನ್ಯಾಲೋಕ ೩-೨೧) ಎಂದಂತೆ ಕಾವ್ಯಗಳು ಪ್ರಸಿದ್ಧಿಯಾಗಬೇಕಾದರೆ ಒಂದು ರಸವನ್ನು ಪ್ರಧಾನವಾಗಿಟ್ಟು ಉಳಿದವುಗಳನ್ನು ಅಪ್ರಧಾನವಾಗಿಡಬೇಕೆಂದು ಆನಂದವರ್ಧನನ ಅಭಿಪ್ರಾಯ. ರಾಮಾಯಣದಲ್ಲಿ ಕರುಣರಸವು ಪ್ರಧಾನ. ಮಹಾಭಾರತದಲ್ಲಿ 'ಶಾಂತರಸ'ವು ಪ್ರಧಾನ. '**ಭಕ್ತ್ಯಾ ಭಾಗವತಂ ಪ್ರೋಕ್ತಂ**' ಎಂದು ಪ್ರಸಿದ್ಧಿ ಇರುವುದರಿಂದ ಭಾಗವತದಲ್ಲಿ ಭಕ್ತಿರಸವು ಪ್ರಧಾನ. ಇದೇ ರೀತಿ ಶೃಂಗಾರಾದಿ ರಸಗಳು ಪ್ರಧಾನವಾಗಿರುವ ಕಾವ್ಯಗಳು ಸಾಹಿತ್ಯಪ್ರಪಂಚದಲ್ಲಿ ಹೇರಳವಾಗಿವೆ. ಸ್ತೋತ್ರಕಾವ್ಯಗಳಲ್ಲಿ ಮಾತ್ರ ಭಕ್ತಿಯೇ ಪ್ರಧಾನರಸವಾಗಿರುವದು. ಪ್ರಕೃತ ಗುರುಗುಣಸ್ತವನವು ಒಂದು ಸ್ತೋತ್ರಕಾವ್ಯವಾಗಿರುವುದರಿಂದ ಇಲ್ಲಿ ಭಕ್ತಿರಸ-ವಂತೂ ಪ್ರಧಾನವಾಗಿದೆ.

ಶ್ರೀರಾಯರು, ಶಿಷ್ಯರ ಪ್ರಾರ್ಥನೆಯಂತೆ (**ಶಿಷ್ಯಯಾಂಚಯಾ**), ನಮ್ಮಂಥ ಮಂದರಿಗೆ ಉಪಕಾರವಾಗಲೆಂದು (**ಮಂದಕೃತೇ, ಮಂದಬೋಧಾಯ**) ಸಜ್ಜನರಿಗೆ ತತ್ತ್ವಜ್ಞಾನವಾಗಲೆಂಬ ಉದ್ದೇಶದಿಂದ (**ಸಜ್ಜನಸಂವಿದೇ**), ವಿಷ್ಣುಭಕ್ತರ ಪ್ರೀತಿಗಾಗಿ (**ವೈಷ್ಣವಪ್ರೀತ್ಯೈ**), ಸಾಧುಜನರ ತುಷ್ಟಿಗಾಗಿ (**ಸಾಧುತುಷ್ಟಯೇ**), ಬಾಲರಿಗೆ ಸರಿಯಾಗಿ ತಿಳಿಯಲೆಂದು (**ಬಾಲಾನಾಂ ಬೋಧಾಯ**), ಹೀಗೆ ಕೇವಲ ಜಿಜ್ಞಾಸುಗಳ ಮೇಲಿನ ಕೃಪಾ ದೃಷ್ಟಿಯಿಂದ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಕಂಸಿನಲ್ಲಿ ಕೊಟ್ಟಿರುವ ಶಬ್ದಗಳನ್ನು ಶ್ರೀರಾಯರ ಗ್ರಂಥಗಳ ಮಂಗಳಾಚರಣೆ ಅಥವಾ ಉಪಸಂಹಾರ ಶ್ಲೋಕಗಳಿಂದ

ಉದ್ಧರಿಸಿ ಕೊಡಲಾಗಿದೆ. ಒಂದೊಂದು ಗ್ರಂಥದಿಂದಲೂ ಶಿಷ್ಯಕೋಟಿಗೆ ಮಹೋಪಕಾರ-ವಾಗಿರುವುದನ್ನು ಶ್ರೀವಾದೀಂದ್ರತೀರ್ಥರು 'ಗುರುಗುಣಸ್ತವನ'ದಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತ ಉಪಸಂಹಾರದಲ್ಲಿ ಶ್ರೀರಾಯರು ವೇದಾಂತ ಸಾಮ್ರಾಜ್ಯದ ಅಭಿವೃದ್ಧಿಗೆ ಸಲ್ಲಿಸಿದ ಅಸದೃಶ ಕೊಡುಗೆಯನ್ನು ಒಂದೇ ಶ್ಲೋಕದಲ್ಲಿ ಸಂಗ್ರಹಿಸುತ್ತ ಹೇಳುತ್ತಾರೆ –

> **ವ್ಯಾಸೇನ ವ್ಯುಪ್ತಬೀಜಃ ಶ್ರುತಿಭುವಿ ಭಗವತ್ಪಾದಲಬ್ಧಾಂಕುರಶ್ರೀಃ**
> **ಪ್ರತ್ನೈರೀಷತ್ಪ್ರಭಿನ್ನೋಽಜನಿ ಜಯಮುನಿನಾ ಸಮ್ಯಗುದ್ಭಿನ್ನಶಾಖಃ ।**
> **ಮೌನೀಶವ್ಯಾಸರಾಜಾದುದಿತಕಿಸಲಯಃ ಪುಷ್ಪಿತೋಽಯಂ ಜಯೀಂದ್ರಾತ್**
> **ಅದ್ಯಶ್ರೀರಾಘವೇಂದ್ರಾದ್ವಿಲಸತಿ ಫಲಿತೋ ಮಧ್ವಸಿದ್ಧಾಂತಶಾಖೀ ॥ ೩೭ ॥**

ಶ್ರೀರಾಯರಿಗಿಂತ ಪೂರ್ವದಲ್ಲಿದ್ದ ಯತಿವರ್ಯರೂ ಅನೇಕ ಗ್ರಂಥಗಳನ್ನು ರಚಿಸಿರುವುದಕ್ಕೆ ಶಿಷ್ಯರ ಮೇಲಿನ ಅವರ ಕೃಪೆಯೇ ಕಾರಣ. ಶಿಷ್ಯರ ಮೇಲಿನ ಕೃಪಾದೃಷ್ಟಿಯಿಂದ ಇಷ್ಟು ಗ್ರಂಥಗಳನ್ನು ರಚಿಸಿರುವ ಪೂರ್ವಾಚಾರ್ಯರ ಮತ್ತು ಶ್ರೀರಾಯರ ಕಾರುಣ್ಯರಸವೂ ಗುರುಗುಣಸ್ತವನದಲ್ಲಿ ಹರಿದಿದೆ. (ಶ್ಲೋಕ - ೨೦, ೨೩, ೨೪, ೨೭, ೨೮). ಈ ರೀತಿ ಶಿಷ್ಯರ ಮುಖದಿಂದ ನೋಡಿದಾಗ ಭಕ್ತಿರಸವೂ, ಶ್ರೀವೇದವ್ಯಾಸರು, ಶ್ರೀಮದಾಚಾರ್ಯರಾದಿಯಾಗಿ ಶ್ರೀರಾಯರು ಮತ್ತು ಉಪೇಂದ್ರ-ತೀರ್ಥರು ಮೊದಲಾದ ಗುರುಗಳ ಮುಖದಿಂದ ನೋಡಿದಾಗ ಕೃಪಾರಸವೂ ಅಂದರೆ ಕರುಣರಸವೂ ಈ ಗುರುಗುಣಸ್ತವನದಲ್ಲಿ ಪ್ರಧಾನವಾಗಿರುವವೆಂದು ತಿಳಿಯಬಹುದು. ಈ ಅಂಗೀರಸಗಳಲ್ಲದೇ ಈ ಸ್ತವನದಲ್ಲಿ ಶೃಂಗಾರ (ಶ್ಲೋಕ ೨೦), ಅದ್ಭುತ (೧೪, ೨೨, ೨೭, ೩೦, ೩೫), ಹಾಸ್ಯ (೧೭, ೨೪, ೩೨), ಬೀಭತ್ಸ (**ಜುಗುಪ್ಸಾ-ಸ್ಥಾಯಿಭಾವಸ್ತು ಬೀಭತ್ಸಃ ಕಥ್ಯತೇ ರಸಃ**) (೧೨, ೧೩) ಈ ಅಂಗರಸಗಳೂ ಅಲ್ಲಲ್ಲಿ ವ್ಯಕ್ತವಾಗಿದ್ದು ಕಂಡುಬರುತ್ತದೆ. ಈ ಸ್ತವನದಲ್ಲಿಯ ರಸಾವಿಷ್ಕಾರದ ಬಗ್ಗೆ ಇನ್ನೂ ಹೆಚ್ಚಿನ ವಿಷಯಗಳನ್ನು ಹೇಳಬೇಕಾಗಿದ್ದರೂ ಗ್ರಂಥಗೌರವ ಭಯದಿಂದ ಮತ್ತು ಅಸಾಮರ್ಥ್ಯದಿಂದ ವಿರಮಿಸುತ್ತಿದ್ದೇನೆ.

———*———

## ಪರಿಶಿಷ್ಟ – *viii*

# ಗುರುಮಾಹಾತ್ಮ್ಯಬೋಧಕ ಶ್ಲೋಕಸಂಗ್ರಹ

೧. **ಆಚಾರ್ಯವಾನ್ ಪುರುಷೋ ವೇದ ।** – *ಛಾಂದೋಗ್ಯ ಉಪ. ೬-೧೪-೨.*

ಗುರುವನ್ನು ಪಡೆದ ಪುರುಷನು ಪರಮತತ್ತ್ವವನ್ನು ತಿಳಿಯುತ್ತಾನೆ.

೨. ಶ್ರುತಂ ಹ್ಯೇವ ಮೇ ಭಗವದ್ದೃಶೇಭ್ಯ ಆಚಾರ್ಯಾದ್ಧ್ಯೇವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪಯತಿ || – *ಛಾಂದೋಗ್ಯ ಉ. ೪-೯-೩.*

ಗುರುಗಳಿಂದ ಕಲಿತ ವಿದ್ಯೆಯೇ ಸರ್ವಶ್ರೇಷ್ಠವಾದುದು ಮತ್ತು ಈ ವಿದ್ಯೆಯೇ ಅಪರೋಕ್ಷ ಜ್ಞಾನಕ್ಕೆ ಕಾರಣವಾಗುತ್ತದೆ.

೩. ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್
ನಾಸ್ತ್ಯಕೃತಃ ಕೃತೇನ | ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್
ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್ || *ಅಥರ್ವಣ ೨-೧೨.*

ಕಾಮ್ಯಕರ್ಮದಿಂದ ವಿಷ್ಣುಲೋಕಕ್ಕಿಂತ ಬೇರೆಯಾದ ಲೋಕಗಳು ಸಿಗುತ್ತಿದ್ದರೂ, ಅವು ಅಸಾರ, ಅನಿತ್ಯ ಎಂದು ನಿಶ್ಚಯಿಸಿ ಬ್ರಹ್ಮಜ್ಞಾನ ಹೊಂದಲು ಯೋಗ್ಯನಾದ ಪುರುಷನು, ಕಾಮ್ಯಕರ್ಮಗಳಲ್ಲಿ ಹಾಗೂ ಅವುಗಳ ಫಲಗಳಲ್ಲಿ ವೈರಾಗ್ಯಬುದ್ಧಿಯನ್ನು ಹೊಂದಬೇಕು. ನಿತ್ಯವಾದ ಮೋಕ್ಷವು ಕರ್ಮದಿಂದ ದೊರಕುವದಿಲ್ಲ. ಜ್ಞಾನದಿಂದಲೇ ದೊರಕುವದು (ಜ್ಞಾನೇನೈವ ಪರಂ ಪದಂ). ಆದ್ದರಿಂದ ಪರಮಾತ್ಮನ ಅಪರೋಕ್ಷ ಜ್ಞಾನಪ್ರಾಪ್ತಿಗಾಗಿ ಕೈಯಲ್ಲಿ ಸಮಿತ್ತನ್ನು ಹಿಡಿದುಕೊಂಡು ಶ್ರೋತ್ರಿಯನಾದ ಹಾಗೂ ಬ್ರಹ್ಮನಿಷ್ಠನಾದ ಉಪದೇಶಕ ಗುರುವಿದ್ದಲ್ಲಿ ಹೋಗಬೇಕು.

೪. ಗುರುರೇವ ಪರೋ ಧರ್ಮೋ ಗುರುರೇವ ಪರಾ ಗತಿಃ |
ಏಕಾಕ್ಷರಪ್ರದಾತಾರಂ ಯೋ ಗುರುಂ ನಾಭಿನಂದತಿ |
ತಸ್ಯ ಶ್ರುತಂ ತಥಾ ಜ್ಞಾನಂ ಸ್ರವತ್ಯಾಮಘಟಾಂಬುವತ್ || ೩೬ ||
ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ |
ಸ ಬ್ರಹ್ಮವಿತ್ಪರಂ ಪ್ರೇಯಾದಿತಿ ವೇದಾನುಶಾಸನಮ್ || ೩೭ ||
– *ಶಾಟ್ಯಾಯನೀಯೋಪನಿಷತ್*

– ಗುರುವೇ ಪರಮ ಧರ್ಮವು, ಗುರುವೇ ಪರಮಗತಿಯು. ಒಂದು ಅಕ್ಷರವನ್ನು ಕಲಿಸಿದ ಗುರುವನ್ನು ಯಾವನು ಗೌರವಿಸುವದಿಲ್ಲವೋ ಅಂಥವನು ಸಂಪಾದಿಸಿದ ಜ್ಞಾನವು ಹಸಿಮಣ್ಣಿನ ಗಡಿಗೆಯೊಳಗಿನ ನೀರಿನಂತೆ ಸೋರಿ ಹೋಗುವದು. ||೩೬|| ಯಾವನಿಗೆ ದೇವತೆಯಲ್ಲಿ ಶ್ರೇಷ್ಠವಾದ ಭಕ್ತಿ ಇರುವದೋ ಹಾಗೂ ದೇವತೆಯಲ್ಲಿ ಮಾಡಿದಂತೆ ಯಥಾಯೋಗ್ಯವಾಗಿ ಗುರುವಿನಲ್ಲೂ ಭಕ್ತಿಯನ್ನು ಮಾಡುವನೋ ಅವನು ಪರಬ್ರಹ್ಮನನ್ನು ತಿಳಿಯುವವನು ಮತ್ತು ಪರಮಲೋಕವನ್ನು ಹೊಂದುವನೆಂದು ವೇದಾನುಶಾಸನವಿದೆ.

೫. ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುರ್ದೇವಃ ಸದಾಶಿವಃ ।
ನ ಗುರೋರಧಿಕಃ ಕಶ್ಚಿತ್ತ್ರಿಷು ಲೋಕೇಷು ವಿದ್ಯತೇ ॥೫೬॥
ದಿವ್ಯಜ್ಞಾನೋಪದೇಷ್ಟಾರಂ ದೇಶಿಕಂ ಪರಮೇಶ್ವರಮ್ ।
ಪೂರಯೇತ್ಪರಯಾ ಭಕ್ತ್ಯಾ ತಸ್ಯ ಜ್ಞಾನಫಲಂ ಭವೇತ್ ॥೫೭॥
ಯಥಾ ಗುರುಸ್ತಥೈವೇಶೋ ಯಥೈವೇಶಸ್ತಥಾ ಗುರುಃ ।
ಪೂಜನೀಯೋ ಮಹಾಭಕ್ತ್ಯಾ ನ ಭೇದೋ ವಿದ್ಯತೇಽನಯೋಃ ॥೫೮॥
ನಾದ್ವೈತವಾದಂ ಕುರ್ವೀತ ಗುರುಣಾ ಸಹ ಕುತ್ರಚಿತ್ ।
ಅದ್ವೈತಂ ಭಾವಯೇದ್ಭಕ್ತ್ಯಾ ಗುರೋರ್ದೇವಸ್ಯ ಚಾತ್ಮನಃ ॥೫೯॥

*– ಯೋಗಶಿಖೋಪನಿಷತ್ ಅಧ್ಯಾಯ ೫.*

– ಗುರುವೇ ಬ್ರಹ್ಮವಿಷ್ಣುಸದಾಶಿವರಾಗಿದ್ದಾನೆ. ಗುರುವಿಗಿಂತ ಶ್ರೇಷ್ಠನಾದವನು ಮೂರ್ಲೋಕಗಳಲ್ಲಿ ಯಾವನೂ ಇರುವದಿಲ್ಲ. ॥೫೬॥ ದಿವ್ಯಜ್ಞಾನೋಪದೇಶಕನಾದ ಗುರುವನ್ನು ಮತ್ತು ಪರಮೇಶ್ವರನನ್ನು ಪರಮ ಭಕ್ತಿಯಿಂದ ಪೂಜಿಸಬೇಕು. ಇದರಿಂದ ಪೂಜಕನಿಗೆ ದಿವ್ಯಜ್ಞಾನೋದಯವಾಗುವದು. ॥೫೭॥ ಗುರುವಿನಂತೆಯೇ ಈಶನೂ, ಈಶನಂತೆಯೇ ಗುರುವೂ ಆಗಿರುತ್ತಾರೆ. ಇವರಿಬ್ಬರಲ್ಲಿ ಭೇದವಿಲ್ಲ. ಇವರಿಬ್ಬರನ್ನೂ ಮಹಾಭಕ್ತಿಯಿಂದ ಪೂಜಿಸಬೇಕು. ॥೫೮॥ ಗುರುಗಳೊಂದಿಗೆ ಎಂದಿಗೂ ಸಮಾನಭಾವದಿಂದ ವರ್ತಿಸಬಾರದು. ॥೫೯॥

೬. ಸಮಾಶ್ರಯೇದ್ಗುರುಂ ಭಕ್ತ್ಯಾ ಮಹಾವಿಶ್ವಾಸಪೂರ್ವಕಮ್ ।
ನಿಕ್ಷಿಪೇತ್ಸರ್ವಭಾರಾಂಶ್ಚ ಗುರೋಃ ಶ್ರೀಪಾದಪಂಕಜೇ ॥ ೧ ॥

ವಿಶ್ವಾಸಪೂರ್ವಕ ಭಕ್ತಿಯಿಂದ ಗುರುವನ್ನು ಆಶ್ರಯಿಸಿ ಅವನ ಪಾದಕಮಲಗಳಲ್ಲಿ ಎಲ್ಲ ಭಾರವನ್ನು ಇಡಬೇಕು.

೭. ಗುರುರೇವ ಪರೋ ಧರ್ಮೋ ಗುರುರೇವ ಪರಾ ಗತಿಃ ।
ಗುರುರೇವ ಪರೋ ಬಂಧುಃ ಗುರುರೇವ ಪರಃ ಸ್ಮೃತಃ ॥ ೨ ॥

ಗುರುವೇ ಶ್ರೇಷ್ಠ ಧರ್ಮ, ಗುರುವೇ ಪರಮ ಗತಿ, ಗುರುವೇ ಶ್ರೇಷ್ಠ ಬಂಧು ಮತ್ತು ಗುರುವೇ ಸರ್ವಶ್ರೇಷ್ಠ ಎಂದು ತಿಳಿಯಲ್ಪಟ್ಟಿದ್ದಾನೆ.

೮. ಗುರುರೇವ ಮಹಾಪಾಪಂ ಕ್ಷಪಯತ್ಯಾತ್ಮಭಾವತಃ ।
ಶ್ರೀಗುರುಭ್ಯೋ ನಮ ಇತಿ ಗುರುಮಂತ್ರಂ ಜಪೇತ ಯಃ ॥ ೩ ॥

"ಶ್ರೀಗುರುಭ್ಯೋ ನಮಃ" ಎಂದು ಗುರು ಮಂತ್ರವನ್ನು ಯಾವನು ಜಪಿಸುವನೋ ಅವನು ತನ್ನ ಸಾಮರ್ಥ್ಯದಿಂದ ಮಹಾಪಾಪವನ್ನು ಕೂಡ ನಾಶಪಡಿಸಬಲ್ಲನು.

೯. **ಗುರುಭಕ್ತ್ಯಾ ವಿನಾಶಃ ಸ್ಯಾದ್ದೋಷಸ್ಯಾಪಿ ಗರೀಯಸಃ ।**
**ಭವಿಷ್ಯತಿ ನವೇತ್ಯೇವಂ, ಸಂದಿಗ್ಧೋ ನಿರಯಂ ವ್ರಜೇತ್ ॥ ೪ ॥**

ಗುರುಗಳಲ್ಲಿ ಭಕ್ತಿ ಮಾಡುವುದರಿಂದ ಮಹದ್ದೋಷಗಳ ನಾಶವು ಆಗಿಯೇ ಆಗುವದು. ಹಾಗಿದ್ದರೂ ಆಗುವದೋ ಇಲ್ಲವೋ ಎಂದು ಸಂದೇಹಬಡುವವನು ನರಕಭಾಗಿಯಾಗುತ್ತಾನೆ.

೧೦. **ಗುರುಪಾದಾಂಬುಜಂ ಧ್ಯಾಯೇದ್ಗುರೋರ್ನಾಮ ಸದಾ ಜಪೇತ್ ।**
**ಗುರೋರ್ವಾರ್ತಾಂ ತು ಕಥಯೇದ್ಗುರೋರನ್ಯಂ ನ ಭಾವಯೇತ್ ॥ ೫ ॥**

ಸದಾ ಗುರುಗಳ ಪಾದಕಮಲಗಳನ್ನು ಧ್ಯಾನಿಸುತ್ತಿರಬೇಕು. ಗುರುವಿನ ನಾಮವನ್ನು ಜಪಿಸುತ್ತಿರಬೇಕು. ಸದಾ ಗುರುಗಳಿಗೆ ಸಂಬಂಧಿಸಿದ ವಾರ್ತೆಯನ್ನೇ ಹೇಳುತ್ತಿರಬೇಕು. ಗುರುವನ್ನು ಬಿಟ್ಟು ಬೇರೆ ಯಾರನ್ನೂ ಮನಸ್ಸಿನಿಂದಲೂ ಕೂಡ ಚಿಂತಿಸಬಾರದು.

೧೧. **ಗುರುಪಾದೌ ಚ ಶಿರಸಾ ಮನಸಾ ವಚಸಾ ತಥಾ ।**
**ಯಃ ಸ್ಮರೇತ್ಸತತಂ ಭಕ್ತ್ಯಾ ಸಂತುಷ್ಟಸ್ತಸ್ಯ ಕೇಶವಃ ॥ ೬ ॥**

ಯಾವನು ಗುರುಗಳ ಪಾದಗಳಲ್ಲಿ ಶಿರಬಾಗಿ ಯಾವಾಗಲೂ ನಮಿಸುವನೋ, ಮನಸ್ಸಿನಲ್ಲಿ ಧ್ಯಾನಿಸುವನೋ, ವಚನಗಳಿಂದ ಸ್ತುತಿಸುವನೋ ಮತ್ತು ಭಕ್ತಿಯಿಂದ ಸ್ಮರಿಸುವನೋ ಅವನ ಮೇಲೆ ಶ್ರೀಹರಿಯು ಪ್ರಸನ್ನನಾಗುವನು.

೧೨. **ಹರೌ ರುಷ್ಟೇ ಗುರುಸ್ತ್ರಾತಾ ಗುರೌ ರುಷ್ಟೇ ನ ಕಶ್ಚನ ।**
**ಗುರುಪ್ರಸಾದಾತ್ಸರ್ವೇಷ್ಟಸಿದ್ಧಿರ್ಭವತಿ ನಾನ್ಯಥಾ ॥ ೭ ॥**

ಶ್ರೀಹರಿಯು ಕುಪಿತನಾದರೆ ಗುರುಗಳು ರಕ್ಷಿಸುವರು. ಆದರೆ ಗುರುಗಳೇ ಕ್ರುದ್ಧರಾದರೆ ಯಾವನೂ ರಕ್ಷಕನಾಗಿರುವದಿಲ್ಲ. ಗುರುಪ್ರಸಾದದಿಂದಲೇ ಎಲ್ಲ ಇಷ್ಟಾರ್ಥಸಿದ್ಧಿಯಾಗುವದಲ್ಲದೇ ಬೇರೆ ಯಾವುದರಿಂದಲೂ ಆಗುವದಿಲ್ಲ.

೧೩. **ಗುರುಸಂಸ್ಮರಣಂ ಕಾರ್ಯಂ ಸರ್ವದೈವ ಮುಮುಕ್ಷುಭಿಃ ।**
**ಉತ್ಥಾನೇ ಭೋಜನೇ ಸ್ನಾನೇ ಗ್ರಂಥಾರಂಭೇ ವಿಶೇಷತಃ ॥ ೮ ॥**

ಮುಮುಕ್ಷುಗಳು ಸರ್ವದಾ ಗುರುಗಳನ್ನು ಭಕ್ತಿಯಿಂದ ಸ್ಮರಿಸುತ್ತಿರಬೇಕು. ಬೆಳಿಗ್ಗೆ ಎದ್ದಕೂಡಲೇ, ಭೋಜನ ಸಮಯದಲ್ಲಿ, ಸ್ನಾನಸಮಯದಲ್ಲಿ ಹಾಗೂ ಗ್ರಂಥಾರಂಭದಲ್ಲಿ ಗುರುಸ್ಮರಣೆಯನ್ನು ವಿಶೇಷವಾಗಿ ಮಾಡಬೇಕು.

೧೪. **ಗುರುಪ್ರಸಾದೋ ಬಲವಾನ್ನ ತಸ್ಮಾದ್ಬಲವತ್ತರಮ್ ।**
**ಯದ್ಗುರುಃ ಸುಪ್ರಸನ್ನಃ ಸನ್ ದದ್ಯಾತ್ತನ್ನಾನ್ಯಥಾ ಭವೇತ್ ॥ ೯ ॥**

ಗುರುಪ್ರಸಾದವು ಬಹು ಪ್ರಬಲವೂ ಪ್ರಭಾವಶಾಲಿಯೂ ಆದುದು. ಅದಕ್ಕಿಂತ ಬಲವತ್ತರವಾದುದು ಬೇರೊಂದಿಲ್ಲ. ಗುರುವು ಸುಪ್ರಸನ್ನನಾಗಿ ಯಾವುದನ್ನು ಕೊಡುವನೋ ಅದು ನಿಷ್ಫಲವಾಗುವದಿಲ್ಲ.

೧೫. **ಶುಭಾನ್ ಧ್ಯಾಯಂತಿ ಯೇ ಕಾಮಾನ್ ಗುರುದ್ಯೆವಪ್ರಸಾದಜಾನ್ ।**
**ಇತರಾನಾತ್ಮಪಾಪೋತ್ಥಾನ್ ತೇಷಾಂ ವಿದ್ಯಾ ಫಲಿಷ್ಯತಿ ॥ ೧೦ ॥**

ತನಗೆ ಶುಭಗಳಾದರೆ ಅವೆಲ್ಲ ಗುರು ಹಾಗೂ ದೇವತೆಯ ಪ್ರಸಾದದಿಂದ ಎಂತಲೂ ಆ ಶುಭಗಳಾದರೆ ಅವೆಲ್ಲ ತನ್ನ ಪಾಪಕರ್ಮಗಳ ಫಲಗಳೆಂದೂ ಯಾರು ತಿಳಿಯುವರೋ ಅವರಿಗೆ ಕಲಿತ ವಿದ್ಯೆಯು ಫಲಿಸುವದು.

೧೬. **ಸ್ಮೃತ್ವಾ ಗುರುಂ ಪೂರ್ವಗುರುಂ ಆದಿಮೂಲಗುರೂಂಸ್ತಥಾ ।**
**ದೇವತಾಂ ವಾಸುದೇವಂ ಚ ವಿದ್ಯಾಭ್ಯಾಸೀ ತು ಸಿದ್ಧಿಭಾಕ್ ॥ ೧೧ ॥**

ತನ್ನ ಗುರುವನ್ನು, ಪೂರ್ವಗುರುವನ್ನು (ಪರಮಗುರುವನ್ನೂ), ಆದಿಗುರುಗಳನ್ನು, ಸಪ್ತ ಮೂಲಗುರುಗಳನ್ನೂ ಹಾಗೂ ದೇವತೆಯನ್ನು ಮತ್ತು ವಾಸುದೇವನನ್ನು ಸ್ಮರಿಸಿ ವಿದ್ಯಾಭ್ಯಾಸವನ್ನು ಪ್ರಾರಂಭಿಸುವವನು ನಿಶ್ಚಿತವಾಗಿ ಸಿದ್ಧಿಯನ್ನು ಪಡೆಯುತ್ತಾನೆ.

೧೭. **ಜ್ಞಾನಾದೃತೇ ನೈವ ಮುಕ್ತಿರ್ಜ್ಞಾನಂ ನೈವ ಗುರೋರ್ವಿನಾ ।**
**ತಸ್ಮಾದ್ಗುರುಂ ಪ್ರಪದ್ಯೇತ ಜಿಜ್ಞಾಸುಃ ಶ್ರೇಯ ಉತ್ತಮಮ್ ॥ ೧೨ ॥**

(ಅಪರೋಕ್ಷ) ಜ್ಞಾನವಿಲ್ಲದೇ ಮುಕ್ತಿಯಿಲ್ಲ. ಗುರುಗಳಿಲ್ಲದೇ ಅಪರೋಕ್ಷ ಜ್ಞಾನವಿಲ್ಲ. ಆದ್ದರಿಂದ ತನಗೆ ಉತ್ತಮವಾದ ಶ್ರೇಯಸ್ಸನ್ನು ಬಯಸುವವನು ಗುರುಗಳಿಗೆ ಶರಣು ಹೋಗಬೇಕು.

೧೮. **ತತ್ರ ಭಾಗವತಾನ್ ಧರ್ಮಾನ್ ಶಿಕ್ಷೇದ್ಗುರ್ವಾತ್ಮದೈವತಃ ।**
**ಅಮಾಯಯಾನುವೃತ್ತ್ಯಾ ಚ ತುಷ್ಯೇದಾತ್ಮಾತ್ಮದೋ ಹರಿಃ ॥ ೧೩ ॥**

ಆತ್ಮದೇವತೆಯಾದ ಗುರುಗಳಿಂದ ಭಾಗವತ ಧರ್ಮಗಳನ್ನು ಅರಿತುಕೊಂಡು ಶ್ರೀಹರಿಯು ಪ್ರೀತನಾಗಲೆಂದು ಆ ಧರ್ಮಗಳನ್ನು ನಿಷ್ಕಪಟವಾಗಿ ಆಚರಿಸಬೇಕು.

೧೯. **ಅಹೋ ಭಾಗ್ಯಮಹೋಭಾಗ್ಯಂ ಗುರುಪಾದುನವರ್ತಿನಾಮ್ ।**
**ಐಹಿಕಾಮುಷ್ಮಿಕಂ ಸೌಖ್ಯಂ ವರ್ಧತೇ ತದನುಗ್ರಹಾತ್ ॥ ೧೪ ॥**

ಗುರುಪಾದರನ್ನು ಅನುಸರಿಸಿಕೊಂಡಿರುವವರ ಭಾಗ್ಯವು ಅದೆಂಥ ಭಾಗ್ಯವು ! ಗುರುಗಳ ಅನುಗ್ರಹದಿಂದ ಅವರ ಐಹಿಕ ಮತ್ತು ಆಮುಷ್ಮಿಕ ಸೌಖ್ಯವು ವರ್ಧಿಸುವದು.

೨೦. **ಅಹೋ ದೌರ್ಭಾಗ್ಯಮತುಲಂ ವಿಮುಖಾನಾಂ ಹರೌ ಗುರೌ ।**
**ಐಹಿಕಂ ಹ್ರಸತೇ ಸೌಖ್ಯಂ ದುಃಖಂ ನಾರಕಮೇಧತೇ ॥ ೧೫ ॥**

ಹರಿಯಲ್ಲಿಯೂ ಹಾಗೂ ಗುರುಗಳಲ್ಲಿಯೂ ವಿಮುಖರಾದವರ ದೌರ್ಭಾಗ್ಯವು ಅತುಲವಾದುದು. ಏಕೆಂದರೆ ಅಂಥವರ ಐಹಿಕಸುಖವು ಹ್ರಾಸವಾಗುವುದಲ್ಲದೆ ನರಕ ದುಃಖವು ವರ್ಧಿಸುವದು.

೨೧. **ಯದ್ಯತ್ ಸತ್ಕೃತ್ಯಜಂ ಪುಣ್ಯಂ ತತ್ಸರ್ವಂ ಗುರವೇಽರ್ಪಯೇತ್ ।**
**ತೇನ ತತ್ಸಫಲಂ ಪ್ರೋಕ್ತಂ ಅನ್ಯಥಾ ನಿಷ್ಫಲಂ ಭವೇತ್ ॥ ೧೬ ॥**

ಸತ್ಕಾರ್ಯಗಳಿಂದ ಏನೇನು ಪುಣ್ಯವು ಲಭಿಸುವದೋ ಅದನ್ನೆಲ್ಲ ಗುರುಗಳಿಗೆ ಸಮರ್ಪಿಸಬೇಕು. ಹಾಗೆ ಮಾಡಿದಾಗಲೇ ಮಾಡಿದ ಕರ್ಮವು ಸಫಲವಾಗುವದು. ಇಲ್ಲವಾದರೆ ನಿಷ್ಫಲವಾಗುವದು.

೨೨. **ಗುರುರ್ಗುರುರ್ಗುರುರಿತಿ ಜಪತೋ ನಾಸ್ತಿ ಪಾತಕಮ್ ।**
**ತಸ್ಮಾದ್ಗುರುಪ್ರಸಾದಾರ್ಥಂ ಯತೇತ ಮತಿಮಾನ್ನರಃ ॥ ೧೭ ॥**

"ಗುರು, ಗುರು, ಗುರು", ಎಂದು ಸದಾ ಜಪಿಸುವವನಿಗೆ ಪಾತಕ-ವೆಂಬುದಿಲ್ಲ. ಆದ್ದರಿಂದ ಬುದ್ಧಿವಂತನಾದ ಮನುಷ್ಯನು ಗುರುಪ್ರಸಾದ ಪ್ರಾಪ್ತಿಗೋಸ್ಕರ ಪ್ರಯತ್ನಿಸಬೇಕು.

೨೩. **ಗುರೋಃ ಸೇವಾ ಗುರೋಃ ಸ್ತೋತ್ರಂ ಶಿಷ್ಯಕೃತ್ಯಂ ಪರಂ ಸ್ಮೃತಮ್ ।**
**ದೋಷದೃಷ್ಟಿರನರ್ಥಾಯೇತ್ಯುಮಾಮಾಹ ಸದಾಶಿವಃ ॥ ೧೮ ॥**

"ಗುರುಗಳ ಸೇವೆ ಮಾಡೋಣ, ಗುರುಗಳ ಸ್ತೋತ್ರ ಪಠಣ ಇವು ಶಿಷ್ಯನ ಕರ್ತವ್ಯಕರ್ಮಗಳಲ್ಲಿ ಶ್ರೇಷ್ಠವಾದವು. ಇದರಲ್ಲಿ ದೋಷಬುದ್ಧಿಯನ್ನು ಮಾಡಿದರೆ ಅದು ಅನರ್ಥಕ್ಕೆ ಕಾರಣವಾಗುತ್ತದೆ" ಎಂದು ಸದಾಶಿವನು ತನ್ನ ಪತ್ನಿಯಾದ ಉಮಾದೇವಿಗೆ ಹೇಳಿದನು.

೨೪. **ಅಹೋ ಭಾಗ್ಯಮಹೋಭಾಗ್ಯಂ ಮಧ್ವಮಾರ್ಗಾನುಯಾಯಿನಾಮ್ ।**
**ದೈವಂ ರಮಾಪತಿರ್ಯೇಷಾಂ ಯದ್ಗುರುರ್ಭಾರತೀಪತಿಃ ॥ ೧೯ ॥**

ಮಧ್ವಸಿದ್ಧಾಂತವನ್ನನುಸರಿಸಿ ಇರುವವರಿಗೆ ಅದೆಂಥ ಭಾಗ್ಯ ! ಅದೆಂಥ ಭಾಗ್ಯ ! ಇವರಿಗೆ ಸಾಕ್ಷಾತ್ ರಮಾಪತಿಯು ಕುಲದೇವತೆಯಾಗಿದ್ದಾನೆ ಮತ್ತು ಭಾರತೀಪತಿಯು ಗುರುವಾಗಿದ್ದಾನೆ.

೨೫. **ಸರ್ವಧರ್ಮಾನ್ಪರಿತ್ಯಜ್ಯ ಗುರುಧರ್ಮಾನ್ಸಮಾಚರ ।**
**ನ ಗುರೋರಧಿಕಂ ಕಿಂಚಿತ್ಪುರುಷಾರ್ಥಚತುಷ್ಟಯೇ ॥ ೨೦ ॥**

ಇತರೆಲ್ಲ ಧರ್ಮಗಳನ್ನು ತ್ಯಜಿಸಿ ಗುರುಧರ್ಮಗಳನ್ನು ಮಾತ್ರ ಆಚರಿಸಬೇಕು. ಏಕೆಂದರೆ ಚತುರ್ವಿಧ ಪುರುಷಾರ್ಥಗಳನ್ನು ಕೊಡಿಸುವಲ್ಲಿ ಗುರುಗಳಿಗಿಂತ ಅಧಿಕ ಸಮರ್ಥರಾದವರು ಬೇರಿನ್ನಾರೂ ಇರುವದಿಲ್ಲ.

೨೭. **ಸಾಧನಂ ವಿದ್ಯತೇ ದೇವಿ ಗುರೋರಾಜ್ಞಾಂ ನ ಲಂಘಯೇತ್ ।**
**ದೇಹದಾತ್ಪಿತುರೇವಾಯಂ ಹ್ಯಧಿಕೋ ಜ್ಞಾನದಾನತಃ ॥ ೨೧ ॥**

ಹೇ ದೇವಿ ! ಗುರುಗಳ ಆಜ್ಞೆಯನ್ನೆಂದಿಗೂ ಮೀರಬಾರದು. ನಮಗೆ ಜನ್ಮದಾತನಾದ ತಂದೆಗಿಂತ ಜ್ಞಾನದಾತನಾಗಿರುವ ಗುರುವು ಶ್ರೇಷ್ಠನಾಗಿರುವನು.

೨೭. **ಪಿತಾ ಮಾತಾ ತಥಾ ಭ್ರಾತಾ ಸರ್ವೇ ಸಂಸಾರಹೇತವಃ ।**
**ಗುರುರೇಕಃ ಸದಾ ಸೇವ್ಯಃ ಸಂಸಾರೋದ್ಧರಣಕ್ಷಮಃ ॥ ೨೨ ॥**

ತಂದೆ, ತಾಯಿ ಹಾಗೂ ಅಣ್ಣತಮ್ಮಂದಿರು ಇವರೆಲ್ಲ ಜನ್ಮಮರಣರೂಪ ಸಂಸಾರಕ್ಕೆ ಕಾರಣರಾಗಿರುತ್ತಾರೆ. ಆದ್ದರಿಂದ ಸಂಸಾರಬಂಧದಿಂದ ಉದ್ಧರಿಸು- ವಲ್ಲಿ ಸಮರ್ಥರಾದ ಗುರುಗಳನ್ನು ಮಾತ್ರ ಸದಾ ಸೇವಿಸಬೇಕು.

೨೮. **ಗುರುಭಕ್ತಃ ಸದಾ ಸೇವ್ಯೋ ಗುರುಭಕ್ತಸ್ಯ ದರ್ಶನೇ ।**
**ಮನೋ ಮೇ ಗಾಹತೇ ದೇವಿ ಕದಾ ದ್ರಕ್ಷ್ಯೇ ಗುರುಪ್ರಿಯಮ್ ॥ ೨೩ ॥**

ಗುರುಭಕ್ತರು ಸದಾ ಸೇವ್ಯರಾಗಿರುತ್ತಾರೆ. ಹೇ ದೇವಿ ! ಗುರುಭಕ್ತರ ದರ್ಶನವನ್ನು ಮಾಡಿಕೊಳ್ಳಬೇಕೆಂದು ನನ್ನ ಮನಸ್ಸು ಹಾತೊರೆಯುತ್ತಿರುತ್ತದೆ. ಗುರುಗಳ ಪ್ರೀತಿಗೆ ಪಾತ್ರರಾಗಿರುವ ಆ ಗುರುಭಕ್ತರನ್ನು ಎಂದು ಕಂಡೇನು ?

[ಯತ್ಪಾದಕಂಜರಜಸಾ ಪರಿಭೂಷಿತಾಂಗಾ ಯತ್ಪಾದಪದ್ಮಮಧುಪಾಯಿತ ಮಾನಸಾ ಯೇ । ಯತ್ಪಾದಪದ್ಮಪರಿಕೀರ್ತನಜೀರ್ಣವಾಚಃ ತದ್ದರ್ಶನಂ ದುರಿತಕಾನನದಾವಭೂತಮ್ ॥

ಗುರುಗಳ ಪಾದಕಮಲಗಳ ಧೂಳಿಯಿಂದ ಅಲಂಕೃತವಾದ ದೇಹವುಳ್ಳ, ಗುರುಗಳ ಪಾದಪದ್ಮಗಳಲ್ಲಿ ಭ್ರಮರದಂತೆ ಆಸಕ್ತವಾದ ಮನಸ್ಸುಳ್ಳ, ಗುರುಗಳ ಪಾದಕಮಲಗಳನ್ನು ಸದಾ ಜಪಿಸುತ್ತಿರುವ ನಾಲಿಗೆಯುಳ್ಳ ಗುರುಭಕ್ತರ (ಶ್ರೀರಾಘವೇಂದ್ರತೀರ್ಥರ ಭಕ್ತರ) ದರ್ಶನವು ದುರಿತಗಳೆಂಬ ಕಾನನಕ್ಕೆ ಕಾಡ್ಗಿಚ್ಚಿನಂತಿರುತ್ತದೆ.]

೨೯. **ಸರ್ವೇ ಧರ್ಮಾ ಕೃತಾಸ್ತೇನ ಸರ್ವತೀರ್ಥಾನಿ ತೇನ ಚ ।**
**ಯಸ್ಯ ಸ್ಯಾದ್ಗುರುವಾಕ್ಯೇಷು ಭಕ್ತಿಃ ಸರ್ವೋತ್ತಮೋತ್ತಮಾ ॥ ೨೪ ॥**

ಗುರುಗಳ ವಾಕ್ಯ ಪರಿಪಾಲನೆಯಲ್ಲಿ ಯಾರಿಗೆ ದೃಢವಾದ ಶ್ರದ್ಧೆ (ನಿಷ್ಠೆ) ಇರುವದೋ ಅಂಥವರು ಎಲ್ಲ ಧರ್ಮಕಾರ್ಯಗಳನ್ನು ಆಚರಿಸಿದಂತೆಯೇ ಮತ್ತು ಸರ್ವತೀರ್ಥಗಳಲ್ಲಿ ಸ್ನಾನ ಮಾಡಿದಂತೆಯೇ.

## ತಂತ್ರಸಾರಸಂಗ್ರಹ ಅಧ್ಯಾಯ – ೪

೩೦. **ಬ್ರಹ್ಮಾಂತಾ ಗುರವಶ್ಚೈವ ಸಂಪ್ರದಾಯಪ್ರವರ್ತಕಾಃ ।**
**ತತ್ತದ್ಗುಣಾನುಸಾರೇಣ ಪೂಜ್ಯಾ ಧ್ಯೇಯಾಶ್ಚ ಕೃತ್ಸ್ನಶಃ ॥ ೧೦೫ ॥**

ನಮ್ಮ ಇಂದಿನ ಗುರುಗಳಿಂದ ಚತುರ್ಮುಖ ಬ್ರಹ್ಮದೇವರ ವರೆಗೆ ಇರುವ ವೈದಿಕಸಂಪ್ರದಾಯ ಪ್ರವರ್ತಕರಾದ ಎಲ್ಲರೂ ಗುರುಗಳೇ. ಅವರವರ ಗುಣ-ಗಳಿಗೆ ಅನುಸಾರವಾಗಿ ಅವರೆಲ್ಲರೂ ಪೂಜ್ಯರೂ, ಧ್ಯೇಯರೂ ಆಗಿರುತ್ತಾರೆ.

೩೧. **ಅವಜ್ಞಾತಾ ಗುರೂಣಾಂ ಚ ದೇವತಾನಾಂ ನ ಸಿದ್ಧ್ಯತಿ ।**
**ಪ್ರಯಾತಿ ಚ ತಮೋ ಘೋರಂ ಮಂತ್ರಾವಜ್ಞಾಕೃದೇವ ಚ ॥೧೧೧॥**

ಗುರುದೇವತೆಗಳನ್ನು ಅವಹೇಳನ ಮಾಡುವವನಿಗೆ ಮಂತ್ರಸಿದ್ಧಿಯಾಗುವ-ದಿಲ್ಲ. ಅಂಥವನು ಘೋರನರಕದಲ್ಲಿ ಬೀಳುತ್ತಾನೆ. ಮಂತ್ರವನ್ನು ಅವಹೇಳನ ಮಾಡುವವನಿಗೂ ಇದೇ ಗತಿ.

೩೨. **ಯಸ್ತಾರತಮ್ಯವೇತ್ತಾ ಸ್ಯಾತ್ ಗುರೂಣಾಂ ದೇವತಾಸ್ವಪಿ ।**
**ಭಕ್ತಿಮಾನ್ ಗುರುದೇವೇಷು ತದ್ಭಕ್ತೇಷು ಚ ಸಿದ್ಧ್ಯತಿ ॥ ೧೧೨ ॥**

ಗುರುದೇವತೆಗಳಲ್ಲಿಯ ತಾರತಮ್ಯವರಿತು ಯಾರು ಗುರುದೇವತೆಗಳಲ್ಲೂ ಅವರ ಭಕ್ತರಲ್ಲಿಯೂ ತಾರತಮ್ಯದಿಂದ ಭಕ್ತಿಯನ್ನು ಮಾಡುವನೋ ಅವನಿಗೆ ಮಂತ್ರಸಿದ್ಧಿಯಾಗುತ್ತದೆ.

೩೩. **ಗುರುದೇವಪ್ರತೀಪಾನಾಂ ವಿಮುಖಸ್ತತ್ಪ್ರಿಯೇ ರತಃ ।**
**ಅಕಾಮಕ್ರೋಧಲೋಭಶ್ಚ ನ ಚಿರಾತ್ ಸಿದ್ಧಿಮಾಪ್ನುಯಾತ್ ॥ ೧೧೩ ॥**

ಹರಿಗುರುದ್ವೇಷಿಗಳಲ್ಲಿ ವಿಮುಖನಾಗಿಯೂ, ಹರಿಗುರುಭಕ್ತರಲ್ಲಿ ಆಸಕ್ತ-ನಾಗಿಯೂ, ಕಾಮಕ್ರೋಧಲೋಭಾದಿಗಳಿಂದ ರಹಿತನಾಗಿಯೂ ಇರುವವನಿಗೆ ಮಂತ್ರಗಳು ಶೀಘ್ರದಲ್ಲಿ ಸಿದ್ಧಿಸುವವು.

೩೪. **ಗುರೋರನುಗ್ರಹಮೃತೇ ಸಾಧನಂ ನ ಹರೇಃ ಪ್ರಿಯಮ್ ।**
**ಗುರೂಪದೇಶಾತ್ತು ಪರಂ ಪ್ರಾಪ್ನೋತ್ಯೇವ ನ ಸಂಶಯಃ ॥**
**ಷಣ್ಣವತ್ಯಂಗುಲೋ ಯಸ್ತು ತಾಲಾಸ್ಯೋ ದಶತಾಲಕಃ ।**
**ದಶಪ್ರಾದೇಶಕಃ ಸಪ್ತಪಾದೋ ಹಸ್ತಚತುಷ್ಟಯಃ ॥**

ಕಲಮತ್ರ್ಯಂಗುಲಶ್ಚೈವ ವಾಗ್ಮೀ ಸಂದೇಹವರ್ಜಿತಃ ।
ವಾಸುದೇವೈಕಶರಣೋ ಗುರುರಿತ್ಯುಚ್ಯತೇ ಬುಧೈಃ ॥
ಗುರುಲಕ್ಷಣಸಂಪೂರ್ಣೋ ಸಾಕ್ಷಾದೇವ ಚತುರ್ಮುಖಃ ।
ತತಃ ಶೇಷೇಂದ್ರವೀಂದ್ರಾದ್ಯಾಃ ಕ್ರಮೇಣೈವ ಪ್ರಕೀರ್ತಿತಾಃ ॥

*– (ಇತಿ ಗುರುವಿವೇಕೇ) ಭಾಗ ತಾ.ನಿ. ೧೦-೯೪-೩೪.*

ಮೋಕ್ಷಕ್ಕೆ ಗುರ್ವನುಗ್ರಹದ ಹೊರತಾಗಿ ಶ್ರೀಹರಿಗೆ ಪ್ರಿಯವಾದ ಬೇರೊಂದು ಸಾಧನವಿಲ್ಲ. ಗುರೂಪದೇಶದಿಂದ ಮುಮುಕ್ಷುವು ಪರಮಪುರುಷನನ್ನು ಹೊಂದಿಯೇ ಹೊಂದುವನು. ೯೬ ಅಂಗುಲ ಮೊದಲಾದಂತೆ ದೇಹಲಕ್ಷಣವುಳ್ಳ, ವಾಗ್ಮಿಯಾದ, ತತ್ತ್ವವಿಷಯದಲ್ಲಿ ಯಾವ ಸಂದೇಹವೂ ಇಲ್ಲದಿರುವ, ವಾಸುದೇವನೊಬ್ಬನನ್ನೇ ಆಶ್ರಯಿಸಿರುವ ಮನುಷ್ಯನು ಬುಧರಿಂದ ಗುರು ಎಂದು ಕರೆಸಿಕೊಳ್ಳಲ್ಪಡುತ್ತಾನೆ. ಗುರುಗಳಲ್ಲಿರಬೇಕಾದ ಸಕಲ ಲಕ್ಷಣಗಳಿಂದ ಯುಕ್ತನಾದವನು ಚತುರ್ಮುಖಬ್ರಹ್ಮನೊಬ್ಬನೇ ಆಗಿದ್ದಾನೆ. ಅನಂತರ ಕಡಿಮೆ ಲಕ್ಷಣಗಳಿಂದ ಕೂಡಿದ ಗರುಡಶೇಷೇಂದ್ರಾದಿಗಳು ಕ್ರಮವಾಗಿ ಗುರುಗಳಾಗಿರುತ್ತಾರೆ.

೩೫. ಮಂದಮಧ್ಯೋತ್ತಮತ್ವೇನೇತ್ಯಾದಿನೋಕ್ತಂ ತು ಲಕ್ಷಣಮ್ ।
ಗುರೋರಪಿ ಸಮಂ ಪ್ರಾಹುರ್ವೇದವೇದಾರ್ಥಪಾರಗಾಃ ॥
ದ್ವಾತ್ರಿಂಶಲ್ಲಕ್ಷಣೈರ್ಯುಕ್ತೋ ಗುರುರುತ್ತಮ ಉಚ್ಯತೇ ।
ಬ್ರಹ್ಮೈವ ತಾದೃಶಸ್ತಸ್ಯ ಸಮೋ ನಾನ್ಯೋಽಸ್ತಿ ಕಶ್ಚನ ॥

*– (ವಿಷ್ಣುತೀರ್ಥೀಯೇ) ತಂತ್ರಸಾರಸಂಗ್ರಹ ಅಧ್ಯಾಯ ೪-೧೩೧*

ವೇದವೇದಾರ್ಥಗಳನ್ನು ಬಲ್ಲವರು ಗುರುಗಳಲ್ಲಿಯೂ ಕೂಡ ಮಂದ, ಮಧ್ಯಮ ಮತ್ತು ಉತ್ತಮ ಎಂದು ಮುಂತಾಗಿ ವಿಭಾಗಗಳನ್ನು ಮಾಡುತ್ತಾರೆ. ಮೂವತ್ತೆರಡು ಲಕ್ಷಣಗಳಿಂದ ಕೂಡಿದ ಗುರುವೇ ಉತ್ತಮ ಗುರುವು ಮತ್ತು ಚತುರ್ಮುಖ ಬ್ರಹ್ಮನೇ ಉತ್ತಮ ಗುರುವಾಗಿದ್ದು ಅವನಿಗೆ ಸಮನಾದವನು ಯಾರೂ ಇಲ್ಲ.

೩೬. ಸಮ್ಯಗ್ಗುರುಪ್ರಸಾದಶ್ಚ ಮುಖ್ಯತೋ ದೃಷ್ಟಿಕಾರಣಮ್ ।
ಶ್ರವಣಾದಿ ಚ ಕರ್ತವ್ಯಂ ನಾನ್ಯಥಾ ದರ್ಶನಂ ಕ್ವಚಿತ್ ॥ – *ಅನುವ್ಯಾಖ್ಯಾನ ೩-೩-೪೫*

ಗುರುಗಳ ಪೂರ್ಣ ಅನುಗ್ರಹವೇ (ಪ್ರಸಾದವು) ಅಪರೋಕ್ಷ ಜ್ಞಾನಕ್ಕೆ ಮುಖ್ಯಕಾರಣ. ಅದಕ್ಕಾಗಿ ಶ್ರವಣಾದಿಗಳನ್ನು ಮಾಡಬೇಕು. ಇವಿಲ್ಲದೇ ಗುರುಪ್ರಸಾದ ಹಾಗೂ ಪರಮಾತ್ಮನ ದರ್ಶನವಾಗುವದಿಲ್ಲ.

೩೭. ಷಣ್ಣವತ್ಯಂಗುಲೋ ಯಸ್ತು ನ್ಯಗ್ರೋಧಪರಿಮಂಡಲಃ ।
ಸಪ್ತಪಾದಶ್ಚತುರ್ಹಸ್ತೋ ದ್ವಾತ್ರಿಂಶಲ್ಲಕ್ಷಣೈರ್ಯುತಃ ॥
ಅಸಂಶಯಃ ಸಂಶಯಚ್ಛಿದ್ಗುರುರುಕ್ತೊ ಮನೀಷಿಭಿಃ ।
ತಸ್ಮಾದ್ ಬ್ರಹ್ಮಾ ಗುರುರ್ಮುಖ್ಯಃ ಸರ್ವೇಷಾಮೇವ ಸರ್ವದಾ ॥
ಅನ್ಯೇಽಪಿ ಸ್ವಾತ್ಮನೋ ಮುಖ್ಯಾಃ ಕ್ರಮಾದ್ಗುರವ ಈರಿತಾಃ ॥

– *ಮಹಾಭಾರತ ತಾ.ನಿ. ೧-೧೧೯, ೧೨೦.*

೯೬ ಅಂಗುಲ ಎತ್ತರ ಮೊದಲಾದಂತೆ ದೇಹಲಕ್ಷಣವುಳ್ಳ, ತತ್ತ್ವವಿಷಯದಲ್ಲಿ ಸಂಶಯ ರಹಿತನಾದ, ಶಿಷ್ಯರ ಸಂಶಯಗಳನ್ನು ನಿವಾರಿಸಬಲ್ಲವನಾದ ಪುರುಷನೇ ಜ್ಞಾನಿಗಳಿಂದ ಗುರು ಎಂದು ಕರೆಯಲ್ಪಟ್ಟಿದ್ದಾನೆ. ಆದ್ದರಿಂದ ಈ ಲಕ್ಷಣಗಳಿಂದ ಕೂಡಿದ ಚತುರ್ಮುಖಬ್ರಹ್ಮನು ಮುಖ್ಯ ಗುರುವಾಗಿದ್ದಾನೆ. ನಮಗಿಂತ ಉತ್ತಮರಾದ ಇತರರೂ ತಾರತಮ್ಯದಿಂದ ಗುರುಗಳಾಗಿದ್ದಾರೆ.

೩೮. ಸಮ್ಯಗ್‌ಲಕ್ಷಣಸಂಪನ್ನೋ ಯದ್ದದ್ಯಾತ್ಸುಪ್ರಸನ್ನಧೀಃ ।
ಶಿಷ್ಯಾಯ ಸತ್ಯಂ ಭವತಿ ತತ್ಸರ್ವಂ ನಾತ್ರ ಸಂಶಯಃ ॥ ೧೨೪ ॥
ಅಗಮ್ಯತ್ವಾದ್ಧರಿಸ್ತಸ್ಮಿನ್ನಾವಿಷ್ಟೋ ಮುಕ್ತಿದೋ ಭವೇತ್ ।
ನಾತಿಪ್ರಸನ್ನಹೃದಯೋ ಯದ್ದದ್ಯಾತ್ ಗುರುರಪ್ಯಸೌ ॥
ನ ತತ್ಸತ್ಯಂ ಭವೇತ್ತಸ್ಮಾದರ್ಚನೀಯೋ ಗುರುಸ್ಸದಾ ॥ ೧೨೫ ॥
ಸ್ವಾವರಾಣಾಂ ಗುರುತ್ವಂ ತು ಭವೇತ್ಕಾರಣತಃ ಕ್ವಚಿತ್ ।
ಮರ್ಯಾದಾರ್ಥಂ ತೇಽಪಿ ಪೂಜ್ಯಾಃ ನ ತು ಯದ್ವತ್ಪರೋ ಗುರುಃ ॥
ಇತ್ಯೇತತ್ಪಂಚರಾತ್ರೋಕ್ತಂ ಪುರಾಣೇಷ್ವನುಮೋದಿತಮ್ ॥ ೧೨೬ ॥

– *ಮ.ತಾ.ನಿ. ಅಧ್ಯಾಯ ೧*

ಸಮ್ಯಗ್‌ಲಕ್ಷಣಸಂಪನ್ನನಾದ ಗುರುವು ಸುಪ್ರಸನ್ನಮನಸ್ಕನಾಗಿ ಶಿಷ್ಯನಿಗೆ ಏನನ್ನು ಅನುಗ್ರಹಪೂರ್ವಕ ಕೊಡುತ್ತಾನೋ ಅದು ನಿಶ್ಚಿತವಾಗಿ ಫಲಕಾರಿಯಾಗುತ್ತದೆ. ॥೧೨೪॥ ಶ್ರೀಹರಿಯು ಅಗಮ್ಯನಾಗಿರುವುದರಿಂದ ಗುರುವಿನಲ್ಲಿ ಆವಿಷ್ಟನಾಗಿ ಯೋಗ್ಯರಾದವರಿಗೆ ಮುಕ್ತಿಯನ್ನು ಕೊಡುತ್ತಾನೆ. ಅತಿಪ್ರಸನ್ನನಾಗಿರದ ಗುರುವು ಏನನ್ನು ಕೊಟ್ಟರೂ ಅದು ಫಲಕಾರಿಯಾಗುವದಿಲ್ಲವಾದ್ದರಿಂದ ಗುರುವನ್ನು ಸದಾ ಪೂಜಿಸಿ ಸುಪ್ರಸನ್ನನಾಗಿರುವಂತೆ ಮಾಡಬೇಕು. ॥೧೨೫॥ ನಮಗಿಂತ ಕಡಿಮೆಯಾಗಿದ್ದವರೂ ಒಮ್ಮೊಮ್ಮೆ ಕೆಲವು ನಿಮಿತ್ತದಿಂದ ಗುರುತ್ವವನ್ನು ಹೊಂದುತ್ತಾರೆ. ಲೋಕಮರ್ಯಾದಾರ್ಥವಾಗಿ ಇಂಥವರೂ ಪೂಜ್ಯರಾಗುತ್ತಾರೆ. ಆದರೆ ಉತ್ತಮಗುರುವಿನಂತಲ್ಲ. ಇದೆಲ್ಲವೂ ಪಂಚರಾತ್ರದಲ್ಲಿ ಹೇಳಲ್ಪಟ್ಟಿದ್ದು ಪುರಾಣಗಳಲ್ಲಿ ಅನುಮೋದಿತವಾಗಿದೆ. ॥೧೨೬॥

೩೯. ಗುರುರ್ಬ್ರಹ್ಮಾಽಖಿಲಾನಾಂ ಚ ವಿದ್ಯಾ ಚೈವ ಸರಸ್ವತೀ ।
ದೇವತಾ ಭಗವಾನ್ವಿಷ್ಣುಃ ಸರ್ವೇಷಾಮವಿಶೇಷತಃ ॥
ತತ್ಪ್ರಸಾದೇನ ಮುಕ್ತಿಃ ಸ್ಯಾನ್ನಾನ್ಯಥಾ ತು ಕಥಂಚನ ।
ಸ್ವೋತ್ತಮಾಸ್ತು ಕ್ರಮೇಣೈವ ಸರ್ವೇಷಾಂ ಗುರವಃ ಸ್ಮೃತಾಃ ॥
ಉಪದೇಶೋ ಬ್ರಹ್ಮಣಸ್ತು ಸರ್ವೇಷಾಮೇವ ಮುಕ್ತಯೇ ॥

— *ಅನುವ್ಯಾಖ್ಯಾನ ೩-೩-೪೬.*

ಸರ್ವರಿಗೂ ಬ್ರಹ್ಮನು ಗುರುವಾಗಿದ್ದಾನೆ, ಸರಸ್ವತಿಯು ವಿದ್ಯಾಭಿಮಾನಿ ದೇವತೆಯಾಗಿದ್ದಾಳೆ, ಭಗವಾನ್ ವಿಷ್ಣುವು ಮುಖ್ಯ ಪ್ರತಿಪಾದ್ಯ ದೇವತೆ-ಯಾಗಿದ್ದಾನೆ. ಗುರುಪ್ರಸಾದದೊಂದಿಗೆ ವಿದ್ಯಾಭಿಮಾನಿ ದೇವತೆ ಮತ್ತು ಗ್ರಂಥಪ್ರತಿಪಾದ್ಯ ದೇವತೆ ಇವರ ಪ್ರಸಾದದಿಂದ ಮುಕ್ತಿಯಾಗುವದು. ಇನ್ನಾವುದರಿಂದಲೂ ಮುಕ್ತಿಯಾಗುವದಿಲ್ಲ. ಸ್ವೋತ್ತಮರಾದವರೂ ಕೂಡ ತಾರತಮ್ಯದಿಂದ ಎಲ್ಲರಿಗೂ ಗುರುಗಳಾಗಿರುತ್ತಾರೆಂದು ತಿಳಿಯಲ್ಪಟ್ಟಿದ್ದಾರೆ. ಮುಮುಕ್ಷುಗಳಿಗೆ ಮುಕ್ತಿಯಾಗಬೇಕಾದರೆ ಮುಖ್ಯ ಗುರುವಾದ ಚತುರ್ಮುಖ ಬ್ರಹ್ಮನ ಉಪದೇಶವಾಗಲೇಬೇಕು.

೪೦. ಪತಿತ್ವೇನ ಶ್ರಿಯೋಪಾಸ್ಯೋ ಬ್ರಹ್ಮಣಾ ಮೇ ಪಿತೇತಿ ಚ ।
ಪಿತಾಮಹತಯಾಽನ್ಯೇಷಾಂ ತ್ರಿದಶಾನಾಂ ಜನಾರ್ದನಃ ॥
ಪ್ರಪಿತಾಮಹೋ ಮೇ ಭಗವಾನಿತಿ ಸರ್ವಜನಸ್ಯ ತು ॥
ಗುರುಃ ಶ್ರೀಬ್ರಹ್ಮಣೋರ್ವಿಷ್ಣುಃ ಸುರಾಣಾಂ ಚ ಗುರೋರ್ಗುರುಃ ।
ಮೂಲಭೂತಗುರುಃ ಸರ್ವಜನಾನಾಂ ಪುರುಷೋತ್ತಮಃ ॥
ಗುರುರ್ಬ್ರಹ್ಮಾಽಸ್ಯ ಜಗತೋ ದೈವಂ ವಿಷ್ಣುಃ ಸನಾತನಃ ॥
ಇತ್ಯೇವೋಪಾಸನಂ ಕಾರ್ಯಂ ನಾನ್ಯಥಾ ತು ಕಥಂಚನ ॥

— *(ಇತಿವಾರಾಹೇ) ಭಾಗ.ತಾ.ನಿ. ೧೦-೨೬-೧೫*

ಭಗವಾನ್ ಶ್ರೀಹರಿ ಜನಾರ್ದನನನ್ನು ತನ್ನ ಪತಿ ಎಂದು ಲಕ್ಷ್ಮೀದೇವಿಯು ಉಪಾಸನೆ ಮಾಡಬೇಕು. ತನ್ನ ಪಿತಾ ಎಂದು ಚತುರ್ಮುಖಬ್ರಹ್ಮನೂ, ಅಜ್ಜ (ಪಿತಾಮಹ)ನೆಂದು ಇತರ ದೇವತೆಗಳೂ, ಹಾಗೂ ತಮ್ಮ ಮುತ್ತಜ್ಜ (ಪ್ರಪಿತಾಮಹ) ಎಂದು ಸರ್ವಜನರೂ ಶ್ರೀಹರಿಯ ಉಪಾಸನೆ ಮಾಡಬೇಕು.

ಪುರುಷೋತ್ತಮನಾದ ವಿಷ್ಣುವು, ಶ್ರೀದೇವಿ ಮತ್ತು ಬ್ರಹ್ಮರಿಗೆ ಸಾಕ್ಷಾತ್ ಗುರುವಾಗಿದ್ದಾನೆ, ದೇವತೆಗಳಿಗೆ ಪರಮ ಗುರುವಾಗಿದ್ದಾನೆ, ಸರ್ವಜನರಿಗೆ ಮೂಲಭೂತ ಗುರುವಾಗಿದ್ದಾನೆ. ಈ ಜಗತ್ತಿಗೆ ಚತುರ್ಮುಖ ಬ್ರಹ್ಮನು

ಗುರುವಾಗಿದ್ದಾನೆಂದೂ ಸನಾತನನಾದ ವಿಷ್ಣುವು ನಿಯಾಮಕ ದೇವತೆಯಾಗಿದ್ದಾನೆಂದೂ ತಿಳಿದು ಸದಾ ಉಪಾಸನೆ ಮಾಡಬೇಕು. ಈ ಕ್ರಮವನ್ನು ಬಿಟ್ಟು ಬೇರೆ ಉಪಾಸನಾ ಕ್ರಮದ ವಿಧಾನವಿಲ್ಲ.

———*———

## ಪರಿಶಿಷ್ಟ – *ix*

# ಗುರುಗುಣಸ್ತವನದ ಸಾರ್ವಕಾಲಿಕ ಬೋಧನೆಗಳು

'ಗುರುಗುಣಸ್ತವನ'ದಲ್ಲಿ ಕೆಲವು ಗುರುಗಳ ಗ್ರಂಥಕರ್ತೃತ್ವರೂಪ ಗುಣವರ್ಣನೆಯೊಂದಿಗೆ ಆ ಗುರುಗಳ ಸ್ತವನವನ್ನು ಕಾಣುತ್ತೇವೆ. ಈ ಸ್ತವನದ ಹೆಚ್ಚಿನ ಭಾಗವು ಶ್ರೀರಾಘವೇಂದ್ರತೀರ್ಥರ ಗ್ರಂಥವರ್ಣನೆ ಹಾಗೂ ತದ್ವಾರಾ ಶ್ರೀರಾಯರ ವರ್ಣನೆಗಾಗಿಯೇ ಮೀಸಲಾಗಿದೆ. ಹೀಗೆ ಗುರುಗಳ ಗುಣಸ್ತವನವನ್ನು ಮಾಡುತ್ತ ಶ್ರೀವಾದೀಂದ್ರತೀರ್ಥರು ಸಜ್ಜನರಿಗೆ ಸಾರ್ವಕಾಲಿಕವಾದ ಕೆಲವು ಬೋಧನೆಗಳನ್ನು ಕೂಡ ಮಾಡಿದ್ದು ಅವುಗಳನ್ನು ಯಥಾಮತಿ ಕೆಳಗೆ ಸಂಗ್ರಹಿಸಲಾಗಿದೆ.

೧) ಮೋಕ್ಷವನ್ನು ಬಯಸುವವರಿಗೆ ಗುರುಪ್ರಸಾದವು ಅತ್ಯವಶ್ಯವಾಗಿರುವುದರಿಂದ ಗುರುಪ್ರಸಾದಪ್ರಾಪ್ತಿಗಾಗಿ ದ್ವಾದಶ ಗುರುಗಳ ಗುಣಗಾನವನ್ನು ಮಾಡಬೇಕು ಮತ್ತು ಈ ಗುರುಗುಣಸ್ತವನವು ತಾರತಮ್ಯಯುತವಾಗಿರಬೇಕು.

೨) ಕೇವಲ ಗುರುಗಳ ಗುಣಸ್ತವನವನ್ನಷ್ಟೇ ಮಾಡದೇ ಹರಿಸ್ತವನಪೂರ್ವಕವಾಗಿ ಗುರುಸ್ತವನವನ್ನು ಮಾಡಬೇಕು ಅಥವಾ ಗುರುಸ್ತವನಪೂರ್ವಕ ಶ್ರೀಹರಿವಾಯುಸ್ತವನವನ್ನು ಮಾಡಬೇಕು.

೩) ಗ್ರಂಥಾರಂಭದಲ್ಲಿ, ಮಧ್ಯದಲ್ಲಿ ಮತ್ತು ಅಂತ್ಯದಲ್ಲಿ ಶ್ರೀಹರಿವಾಯುಗುರುಗಳ ಸ್ಮರಣೆ ಅಥವಾ ನಮನರೂಪವಾದ ಮಂಗಳಾಚರಣೆಯನ್ನು ಮಾಡಬೇಕು.

೪) ಗುರುಗಳಾದವರು ಶ್ರೀಮದಾಚಾರ್ಯರಿಂದ ಪ್ರಕಾಶಿಸಲ್ಪಟ್ಟು ಪ್ರವರ್ತಿತವಾದ ಸದ್ವೈಷ್ಣವಮಾರ್ಗದಲ್ಲಿ ನಿರ್ಭಯದಿಂದ ಮುನ್ನಡೆಯುತ್ತ, ಶ್ರೀಮದಾಚಾರ್ಯರ ಭಾಷ್ಯಾದಿಗಳ ಭಾವವನ್ನು ಪ್ರಕಟಪಡಿಸುವ ಗ್ರಂಥಗಳನ್ನು ರಚಿಸಬೇಕು. ಸಕಲದುರ್ಮತಗಳನ್ನು ನಿರಾಸಗೊಳಿಸುತ್ತ ಶ್ರೀಮದ್ವೈಷ್ಣವಸಿದ್ಧಾಂತವನ್ನು ಪ್ರತಿಷ್ಠಾಪಿಸಬೇಕು. ಇಂದ್ರಿಯ ನಿಗ್ರಹವುಳ್ಳವರೂ, ವಿರಕ್ತರೂ ಆಗಿ ಶ್ರೀಹರಿವಾಯುಗುರುಗಳಲ್ಲಿ ಭಕ್ತಿಯುಳ್ಳವರಾಗಿರಬೇಕು. ವಿವಿಧ ಕಲೆಗಳಲ್ಲಿ

ನಿಷ್ಣಾತರಾಗಿದ್ದು ಆ ಕಲೆಗಳನ್ನು ಭಗವಧಾರಾಧನೆಗಾಗಿ ಮಾತ್ರ ಉಪಯೋಗಿಸುತ್ತಿರಬೇಕು. ಸರ್ವದಾ ವೇದವೇದಾಂತಗಳ ಅರ್ಥವಿಚಾರಗಳಲ್ಲೇ ಆಸಕ್ತರಾಗಿರಬೇಕು. ಸ್ವಾಹಂಕಾರಖಂಡನೆಯನ್ನು ಮಾಡಿಕೊಳ್ಳುತ್ತಿರಬೇಕು. ಮನಸ್ಸಿನಲ್ಲಿ ಎಂದಿಗೂ ಅಯೋಗ್ಯವೂ, ಅನುಪಪನ್ನವೂ, ಯುಕ್ತಿರಹಿತವೂ ಆದ ಅರ್ಥವನ್ನು ಚಿಂತಿಸಬಾರದು. ದುಡುಕಿನಿಂದ ಅಥವಾ ಛಲದಿಂದ ಅಯುಕ್ತಾರ್ಥವನ್ನು ಹೇಳಬಾರದು. ಜ್ಞಾನಿಗಳೊಂದಿಗೆ ವಿತ್ತಂಡವಾದವನ್ನು ಮಾಡಬಾರದು. ಗ್ರಂಥಗಳಲ್ಲಿ ಅಯುಕ್ತವಾದುದನ್ನು ಬರೆಯಬಾರದು, ಅಥವಾ ತಮ್ಮ ಅಭಿಪ್ರಾಯವನ್ನು ಬೇರೊಬ್ಬರ ಮೇಲೆ ಒತ್ತಾಯದಿಂದ ಹೇರಬಾರದು. ಒಮ್ಮೆ ಹೇಳಿದ್ದನ್ನು ಅಥಾ ಬರೆದುದದನ್ನು ಮತ್ತೆ ಮತ್ತೆ ಹೇಳಬಾರದು ಅಥವಾ ಬರೆಯಬಾರದು. ಒಮ್ಮೆ ಬರೆದುದನ್ನು ಅಳುಕಿಸ-ಬಾರದು. ಆಶ್ರಿತಜನರಿಗೆ ಜ್ಞಾನೋಪದೇಶ ಮಾಡಿ ಅವರ ಅಜ್ಞಾನಾಂಧಕಾರ-ವನ್ನು ಕಳೆಯಬೇಕು. ಪ್ರಾಚೀನಾಚಾರ್ಯರು ಬರೆದ ಗ್ರಂಥಗಳು ಇನ್ನಷ್ಟು ಪ್ರಸಿದ್ಧಿಗೆ ಬರುವಂತೆ ಅವುಗಳಿಗೆ ಸಂಕ್ಷೇಪವಿಸ್ತಾರಗಳಿಂದ ಶ್ರೇಷ್ಠವಾದ ವ್ಯಾಖ್ಯಾನಾದಿಗಳನ್ನು ಬರೆಯಬೇಕು. ಗುರುಗಳು ಶಿಷ್ಯರಿಗೆ ತಂತ್ರಸಾರಸಂಗ್ರಹ-ದಲ್ಲಿರುವ ಮಂತ್ರಗಳ ಉಪದೇಶವನ್ನು ಮಾಡಬೇಕು. ಗುರುಗಳು ಸದಾ ತಮ್ಮ ವಿದ್ಯಾಶಿಷ್ಯರ, ಅಥವಾ ಮಂತ್ರಸುತರ ಉತ್ಕರ್ಷವನ್ನು ಅಪೇಕ್ಷಿಸು-ತ್ತಿರಬೇಕು. ಅವರು ಉದಾರದಾನಿಗಳಾಗಿರಬೇಕು. ದಯಾಶೀಲರಾಗಿರಬೇಕು.

೫) ಪತಿವ್ರತೆಯಾದ ಸ್ತ್ರೀಯು ಕಾಯಾ ವಾಚಾ ಮನಸಾ ಸದಾ ತನ್ನ ಪತಿಯನ್ನೇ ಅನುಸರಿಸಿಕೊಂಡಿರಬೇಕು.

೬) ಪತಿಪತ್ನಿಯರು ಸರಸವಾಗಿರುವಂಥ ಕಾರ್ಯಗಳನ್ನು ಮಾತ್ರ ಮಾಡಬೇಕು. ಅವರ ಮಧ್ಯೆ ವಿರಸವುಂಟಾಗುವಂಥ ಯಾವ ಕಾರ್ಯವನ್ನೂ ಮಾಡಬಾರದು. (ಪ್ರತ್ಯಾಸಂಗಪ್ರಹೃಷ್ಟಾ)

೭) ಶ್ರೀಹರಿಭಕ್ತರೆಲ್ಲರೂ ಕಾಯಾ ವಾಚಾ ಮನಸಾ ಸದಾ ಪರಸ್ಪರ ಅನುಕೂಲ-ರಾಗಿರಬೇಕು.

೮) ಸ್ತ್ರೀಯರು ತಮ್ಮ ದೇಹದ ಭಾಗವು ಕಾಣದಂತೆ ಮೈತುಂಬ ಬಟ್ಟೆಯನ್ನು ಉಟ್ಟುಕೊಂಡು ಅಡ್ಡಾಡಬೇಕು. ಸಾಕಾಗುವಷ್ಟು ಬಟ್ಟೆಯೇ ಇರದಿದ್ದರೆ ಜನರ ಕಣ್ಣಿಗೆ ಬೀಳದಂತಿರಬೇಕು. ಸ್ತ್ರೀಯರು ಶೀಲವತಿಯರಾಗಿರಬೇಕು. ಮುಡಿಯಲ್ಲಿ ಹೂವುಗಳನ್ನಿಟ್ಟುಕೊಂಡು ನಯ ವಿನಯಗಳಿಂದ ಭೂಷಿತ-ರಾಗಿರಬೇಕು.

೯) ಗುರುಪ್ರಸಾದವಿಲ್ಲದೇ ಈಶಪ್ರಸಾದವಿಲ್ಲವಾದ್ದರಿಂದ ಗುರುಪ್ರಸಾದಪ್ರಾಪ್ತಿಗಾಗಿ ಆ ಗುರುಗಳು ಬರೆದಿರುವ ಗ್ರಂಥಗಳಿಗೆ ವ್ಯಾಖ್ಯಾನವನ್ನು ಬರೆದು ಆ ಗ್ರಂಥಗಳು ಇನ್ನೂ ಹೆಚ್ಚು ಪ್ರಸಿದ್ಧಿಗೆ ಬರುವಂತೆ ಮಾಡಬೇಕು.

೧೦) ಗ್ರಂಥಕರ್ತೃಗಳ ಗ್ರಂಥರಚನೆಗೆ i) ಹರಿವಾಯುಗುರುಗಳ ಅನುಗ್ರಹ ಸಂಪಾದನೆ ಮತ್ತು ii) ಶಿಷ್ಯಾನುಗ್ರಹ ಇವೆರಡೇ ಉದ್ದೇಶಗಳಾಗಿರಬೇಕು. ಗ್ರಂಥಕರ್ತರು ಕೃಪಾಗುಣದಿಂದ ಕೂಡಿರಬೇಕು.

೧೧) ಪಿತೃವಾಕ್ಯಪರಿಪಾಲನೆಯಿಂದ ಅತುಲವಾದ ಕೀರ್ತಿಯು ಪ್ರಾಪ್ತವಾಗುವದರಿಂದ ಮಾತಾಪಿತೃಗಳ, ಗುರುಗಳ ಹಾಗೂ ಹಿರಿಯರ ಆಜ್ಞಾ ಮನಃಪೂರ್ವಕ ಪರಿಪಾಲಿಸಬೇಕು.

೧೨) ಆಗಸ್ತ್ಯಮುನಿಗಳಂತೆ ಮಹಾತ್ಮರಾದವರಿಗೆ ದುಃಸಾಧ್ಯವಾದುದು ಯಾವುದೂ ಇರುವದಿಲ್ಲ. ಮಹಾ ಪ್ರಯತ್ನ ಮಾಡಿ ಶ್ರೀಹರಿವಾಯುಗುರುಗಳ ಅನುಗ್ರಹದಿಂದ ಪರಮಶ್ರೇಯಸ್ಸನ್ನು ಪಡೆಯಬಹುದು.

———*———

## ಪರಿಶಿಷ್ಟ – x

# ಗುರುಗುಣಸ್ತವನ ಶ್ಲೋಕಾನುಕ್ರಮಣಿಕಾ

| ಅ.ನಂ. | | ಶ್ಲೋಕ ಸಂಖ್ಯೆ |
|---|---|---|
| ೧. | ಏಷ ಶ್ರೀರಾಘುವೇಂದ್ರಪ್ರತಿವರಚರಿತಾಂಬೋನಿಧಿಃ | ೧೩ |
| ೨. | ಉದ್ವೇಲವ್ಯಾಸತಂತ್ರವ್ಯವಸಿತನಿಖಿಲಾಭಿಜ್ಞ | ೪ |
| ೩. | ಉನ್ಮಿಲನ್ನೀರನೀರೇರುಹನಿವಹಮಹಃ | ೧ |
| ೪. | ಗೀತಾಮತ್ಯರ್ಥಧೂತ ಶ್ರಿತಜನದುರಿತಾಮಿಂದುವಂಶ | ೨೫ |
| ೫. | ಗ್ರಂಥೋಽಯಂ ನ್ಯಾಯಮುಕ್ತಾವಲಿರಿತಿ | ೨೧ |
| ೬. | ಗ್ರಂಥೋ ವಾದಾವಲೀ ದ್ರಾಗಭಜತ | ೧೭ |
| ೭. | ಚಾತುರ್ಯೈಕಾಕೃತಿರ್ಯಶ್ಚತುರಧಿಕಶತಗ್ರಂಥ | ೮ |
| ೮. | ಚಿತ್ತೇ ನಾಯುಕ್ತಮರ್ಥಂ ಕಲಯತಿ ಸಹಸಾ | ೧೫ |
| ೯. | ತಂತ್ರಿಶ್ರೀನೀಲಕಂಠಾಭಿಧಮಖಿಮಣಿನಾ | ೩೬ |
| ೧೦. | ಧೀರಶ್ರೀರಾಘುವೇಂದ್ರಂ ಕೃತನಿಜವಿಜಯ | ೧೬ |
| ೧೧. | ಧೀರಶ್ರೀರಾಘುವೇಂದ್ರ ತ್ವದತುಲರಸನಾರಂಗ | ೧೯ |

# ಭಾಗ – ೨

॥ ಶ್ರೀ ಗುರುರಾಜೋ ವಿಜಯತೇ ॥

# ವೇಣುಗಾನ

(ಗುರುಗುಣಸ್ತವನದ ಕನ್ನಡ ಪದ್ಯಾನುವಾದವು)

ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯ ಚ ।
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥

(ವಾರ್ಧಿಕ ಷಟ್ಪದಿ)

ಮಂಗಳಾಚರಣ

ಶ್ರೀಲಕುಮಿ ಲಾವಣ್ಯರಾಶಿ ರಂಜಿಸಿ ಮೆರೆಯೆ ।
ಭೂಲಲನೆ ಸೌಭಾಗ್ಯಶೋಭೆ ಸಂತಸದೆರೆಯೆ ।
ಲೀಲೆಮಿಗೆಸುರ ಮುನಿಸ್ತೋಮ ಸಂಭ್ರಮಗರೆಯೆ ಮೂಲೋಕ ಭಾಗ್ಯದೊರೆಯೆ ॥
ಲೋಲ ಲೋಚನನಾಗಿ ಸೂರ್ಯಕೋಟಿಯ ಬೆಳಗಿ ।
ಕಾಲಕವಸರ ಗೈಯ್ಯುತವತರಿಸಿ ಧರೆಯೊಳಗೆ ।
ಬಾಲ ಪ್ರಹ್ಲಾದನಂ ಪಾಲಿಸಿದ ನರಹರಿಯು ಮಂಗಳವನೆಮಗೀಯಲಿ ॥೧॥
ಸರಸಿಜಾಸನರಾಣಿ ವರದೆ ವೀಣಾಪಾಣಿ ।
ವರಶಾಸ್ತ್ರ ಪೌರಾಣ ವೇದತತಿಗಭಿಮಾನಿ ।
ಸರಸ ನಾಟಕಕಾವ್ಯ ಕೌಶಲ್ಯವಿಜ್ಞಾನಿ ಪರಮ ಕಲ್ಯಾಣಿ ವಾಣಿ ॥
ತರಳನೀ ಷಟ್ಪದಿಗೆ ಸುಮತಿ ಸುಧೆಯಂ ಗರೆದು ।
ಧರೆಯ ಸುಜನರ ಪೊರೆಗೆ ಝೇಂಕರಿಪ ಶಕ್ತಿಯಂ ।
ದೊರಕೊಳುವುದೈ ದೇವಿ ದಯಗೈಯ್ಯು ಭಕ್ತನೋಳ್ ಗುರುಗುಣಸ್ತವ ಭಾವಕೆ ॥೨॥
ಹರಿಯೆ ಸರ್ವೋತ್ತಮನು ಭೇದ ಪಂಚಕವೆಂದು ।
ಪರಮತತ್ವದ ತಾರತಮ್ಯಗಳ ನೆರೆ ಸಾರ್ದ ।
ಗುರು ಮಧ್ವಮುನಿರಾಯ ಸರ್ವಜ್ಞಕವಿಗೇಯ ನಿರ್ವಧಿಕ ಶುಭಕಾಯಗೆ ॥
ವರಜಯಾಚಾರ್ಯರಗೂಡಿ ಗುರುವರ್ಯರೆಲ್ಲರಿಗೆ ।
ಪರಮ ಪಾಮರ ನಾನು ಶಿರಬಾಗಿ ವಂದಿಸುವೆ ।
ಸ್ಥಿರಭಕುತಿ ಜ್ಞಾನ ವಿಸ್ಫುರಿಸುವೋಲ್ ಕರವಿಡಿದು ಗುರುಪ್ರಸಾದವನೀವುದು ॥೩॥

ವೇದವಿದ್ಯಾಶರಧಿ ಶ್ರೀ ಉಪೇಂದ್ರರ ಸುತಗೆ ।
ಮೇದಿನಿಯ ಕಲ್ಪತರು ರಾಘವೇಂದ್ರರ ಹಿತಗೆ ।
ವಾದಿಮದಗಜಸಿಂಹ ವಾಙ್ಮಯ ಬೃಹಸ್ಪತಿಗೆ ವಾದೀಂದ್ರ ಗುರುವರ್ಯನೀ ॥
ಓದಿ ಕಲಿಯುವ ಪ್ರಥಮ ಸಾಹಸಿಗ ನೊಂಪಿಡಿದು ।
ಸಾದರದಿ ಸಾಷ್ಟಾಂಗವೆರಗಿ ಬೇಡುವೆ ನಾನು ।
ಮೋದ ತವ ಗುರುಗುಣಸ್ತವನವಂ ಕನ್ನಡಕೆ ಸಾಧಿಸುವ ಮತಿಗೊಡುವುದು ॥೪॥
ಇನ್ನು ಬುಧವೃಂದದೋಳ್ ನಮಿಸಿ ಬಿನ್ನಪಗೈಯ್ವೆ ।
ಮುನ್ನ ಗುರು ವಾದೀಂದ್ರವರ್ಯ ವಿರಚಿತವಾದ ।
ಸನ್ನುತಸ್ತವ ಪ್ರತಿಪದಾರ್ಥವಲ್ಲದೆ ಯಿದಂ ಕನ್ನಡದೊಳಿನುವಾದವು ॥
ಚಿನ್ನನಾಡಿದ ಬಾಲಗನ್ನಡಮಿದಿರ್ದೊಡಂ ।
ಘನ್ನಮಹಿಮರು ರಾಘವೇಂದ್ರರ ಮಹಾಕೀರ್ತಿ ।
ಜೊನ್ನಮಂ ಪೊಕ್ಕಿರಲುಮನ್ಯ ಭಾವನೆಯುಂಟೆ ಮನ್ನಣೆಯನೀವುದೊಲಿದು ॥೫॥

## ಶ್ರೀಮದ್ವಾದೀಂದ್ರರ

## — ವೇಣು ಗಾನ —

ತೀವಿ ವಿಕಸಿತ ಕುಮುದ ನಿಕರ ಕಾಂತಿಯ ಗೆಲ್ವ ।
ಶ್ರೀವನಿತೆ ಭೂದುರ್ಗೆ ದೇವಿಯರ ಕಂಗಳೋಳ್ ।
ಠಾವಿಸಿದ ರುಚಿರ ಸಹವಾಸದಿಂ ಶೋಭಿಸುವ ಚಿತ್ರತ್ವ ಭಾವದಿಂದಾ ॥
ಆವಿಮಲ ಪಾಲ್ಗಡಲ ಪಸರಿಸುವ ಚಂದ್ರಿಕರ–।
ಣಾವಳಿಯ ಗರ್ವಮಂ ಜರಿದು ದಿವಿಜರ ಸದಾ ।
ಕಾವ ದೀಕ್ಷೆಯಗೊಂಡ ಶ್ರೀಪತಿ ಕಟಾಕ್ಷವದು ಸಲುಗೆ ನಮ್ಮನು ಸರ್ವದಾ ॥೧॥

## ಶ್ರೀದುರ್ಗಾ ಸ್ತೋತ್ರ

ಅಖಿಲ ಸೃಷ್ಟಿಯ ಗೈಯ್ವ ಶಕ್ತಿ ದುರ್ಗಾದೇವಿ ।
ಸಕಲ ದೇವರ್ಕಳಿಂ ಸ್ತುತಿಸಿಗೊಂಬುವ ತಾಯಿ ।
ಮುಕುಟ ಸೌಂದರ್ಯವೆನೆ ದೇವಸುಂದರಿಯರೋಳ್ ಮಿಗಿಲಾಗಿ ಮೆರೆವ ಮಾಯು ॥
ಪ್ರಕಟಿಸೆನ್ನೊಳು ನಿನ್ನ ದಿವ್ಯ ಸ್ವರೂಪಮಂ ।
ಮುಕುತಿ ಸ್ವರ್ಗದಿ ಸರ್ವಕಾಲದೋಳ್ ಕೈ ಬಿಡದೆ ।
ಯಕಟ ಸಂಕಟದಲ್ಲಿ ಮತ್ತೆ ನೀಂ ವಿಪರೀತ ಬುದ್ಧಿಯಂ ಮಾಡಬೇಡ ॥೨॥

## ಅವತಾರತ್ರಯ ಮುಖ್ಯ ವಾಯು ಸ್ತೋತ್ರ

ರಾಮಚಂದ್ರನ ರಮ್ಯಮಾದ ಮಹಿಮಾತೀತ ।
ಕಾಮಿತ ಪದಾಂಭೋಜ ಷಟ್ಪದಿಯೊಳಾಚರಿಸಿ ।
ಶ್ರೀ ಮುರಲಿಧರ ಕೃಷ್ಣ ವೈರಿಗಳ ಮರ್ದನದೊಳೇಕೈಕ ವೀರನೆನಿಸಿ ॥
ಆ ಮಹಾ ಮುನಿಪ ವೇದವ್ಯಾಸರುಪದೇಶ ।
ಧೀಮತಿಯು ವೇದಾಂತ ವಿಜ್ಞಾನಿ ತಾನಾಗಿ ।
ನಾಮ ಹನುಮಂತ ಬಲಭೀಮ ಮಧ್ವವತಾರ ವಾಯು ಶ್ರೀಯವನೀಯಲಿ ॥೩॥

## ಶ್ರೀಮಧ್ವಗುರುಸ್ತೋತ್ರ

ವ್ಯಾಸ ತಂತ್ರವ ತಿಳಿದ ರಾಶಿಜ್ಞಾನದ ಮೂರ್ತಿ ।
ಸಾಸ ವ್ಯವಸಾಯದೋಳ್ ದೋಷವಿಲ್ಲದ ಕೀರ್ತಿ ।
ಘೋಷಿಸುವ ವೇದಗಳ ಭಾವ ಬೆಳಗಿಸುವಲ್ಲಿ ಸರ್ವತಂತ್ರ ಸ್ವತಂತ್ರ ॥
ಭೂಷಿಸುವ ಮಂತ್ರಗಳಿಂದ ಬಣ್ಣಿತನಾಗಿ ।
ಭೂಸುಮತಿ ಲೋಕೈಕ ದೀಪ ತಾನೆಂದೆನಿಸಿ ।
ಯಾಸಮಯ ಮಾರುತನು ಮಧ್ವರೂಪಕನಿಂದು ನಮ್ಮ ಹೃದಯದಿ ನೆಲೆಸಲಿ ॥೪॥

## ಶ್ರೀಮಟ್ಟೀಕಾಚಾರ್ಯ ಸ್ತುತಿ

ಜ್ಞಾನಪರಿಪೂರ್ಣತೆಯ ತರ್ಕದುತ್ತರ ಫಲದಿ ।
ತಾಣವರಿದಲ್ಲಲ್ಲಿ ಮಧುರ ಪದಗಳ ಸ್ವರದಿ ।
ಜಾಣರಂ ತನಿಗೊಡುವ ಪ್ರೌಢಗಂಭೀರತರ ಭಾಷ್ಯಾದಿ ಟೀಕೆಕರ್ತಾ ॥
ಹೀನ ಮಿಥ್ಯಾವಾದ ಕುಮತ ಕುಲ ಕತ್ತಲೆಗೆ ।
ಭಾನು ಬೆಳಗುತಲಿರಲಿ ಪರರಿಂದಜೇಯ ತಾ ।
ಕ್ಷೋಣಿತ್ರಯಂಗಳೋಳ್ ಚಕಿಸುವಂತಹ ಚರ್ಯ ಪ್ರಖ್ಯಾತ ಗುರುಜಯಾರ್ಯ ॥೫॥

## ಶ್ರೀವಿಬುಧೇಂದ್ರತೀರ್ಥ ಸ್ತುತಿ

ಶ್ರೀ ಮದಾಚಾರ್ಯರ ದಿವ್ಯ ಜ್ಞಾನ ಮಾರ್ಗವ ಪಿಡಿದು ।
ಭೂಮಿಯೋಳ್ ತಡೆಯದ ಪರಾಕ್ರಮದ ಮುಂದರಿದ ।
ಧೀಮತಿಗಳಾಸೈನ್ಯ ಮುಖ್ಯನಾಯಕನಾಗಿ ದುರ್ಮತ ನಿರಾಕರಿಸುತ ॥
ಶ್ರೀ ಮಧ್ವತಂತ್ರದೋಳ್ ಸರ್ವ ತಂತ್ರನೆನೆ ।
ರಾಮವ್ಯಾಸರ ಪಾದ ಪದ್ಮ ಸೇವಕನಾಗಿ ।
ಸ್ವಾಮಿಯತಿಕುಲವರ್ಯ ವಿಬುಧೇಂದ್ರ ಗುರುವರ್ಯ ಶೋಭಿಸುವನೀಕ್ಷಿತಿಯೊಳು ॥೬॥

## ಶ್ರೀವ್ಯಾಸರಾಜ ಸ್ತುತಿ

ಮಾಯಿ ತಂತರವೆಂಬ ಹೇಮಕಶ್ಯಿಪುಗರ್ವ ।
ಕಾಯಮಂ ದಂಡಿಸಲು ಮಧ್ವಸಿದ್ಧಾಂತದ ನಿ–।
ಕಾಯ ನರಹರಿಯು ತಾನಾರ ಗ್ರಂಥಗಳೆಂಬ ಮೂರ್ಕಂಗಳಿಂ ಮೆರೆವನು ॥
ಪ್ರಾಯ ವಾಕ್ಸರಣಿಯಂಬಾರ ಕುಲಿಶಾಯುಧವು ।
ಹೇಯ ವಿದ್ಯಾಪರ್ವತಾವಳಿಯ ಕೆಳಗಿರಿಸಿ ।
ತಾಯತೀಂದ್ರನು ವ್ಯಾಸರಾಜ ಮಹಿಮೋತ್ತುಮನು ಶ್ರೀಯಧಿಕವೆಮ್ಮಗೀಯಲಿ ॥೭॥

## ಶ್ರೀವಿಜಯೀಂದ್ರ ಗುರುಪ್ರಾರ್ಥನೆ

ಚಾತುರ್ಯ ಮೂರ್ತಿಯಾಕ್ಕೃತಿಗಳೋ ಯಂತೆನುವ ।
ಖ್ಯಾತ ಶತ ಚತುರಧಿಕ ಗ್ರಂಥಂಗಳಂ ರಚಿಸಿ ।
ಭೂತಳದ ವೈರಿಪ್ರಬಂಧಗಳ ನಿರ್ಮದಿಸಿ ಚೌಷಷ್ಟಿ ಕಲೆನಿಪುಣನು ॥
ಚೇತರಿಸಿದದ್ವೈತ ಶೈವರ ತಿರಸ್ಕರಿಸಿ ।
ಪ್ರೀತ ವಿಜಯೀಂದ್ರಾರ್ಯ ಶ್ರೀ ಸುರೇಂದ್ರರ ತನಯ ।
ಪೊತು ಪೋಷಿಸಲೆಮ್ಮ ತ್ರಿಭುವನಕೆ ಪ್ರಖ್ಯಾತ ಸರ್ವತಂತ್ರಸ್ವತಂತ್ರ ॥೮॥

## ಶ್ರೀಮತ್ಸುಧೀಂದ್ರ ಗುರುಪ್ರಾರ್ಥನೆ

ದೋಷನಾಶಕ ದಿವ್ಯ ಸುಂದರ ಚಮತ್ಕಾರ ।
ರಾಶಿ ರಚನೆಗಳಿಂದ ಕರ್ನಾಟಕವನಿಪಂ ।
ತೋಷ ಪುಳಕಿತನಾಗಿ ಪದಪದಕೆ ಸಲ್ಲಿಸಿದ ರತ್ನಾಭಿಷೇಕದಿಂದ ॥
ಈಶ ಗರುಡಾರೂಢ ಶ್ರೀಪತಿಯ ಪದಕಮಲ–।
ಕಾಸಕ್ತ ಸುರಭಿ ಸಂಭ್ರಮದಿಂದ ರಾಜಿಸುವ ।
ವಾಸುಧಿಗೆ ವಿಖ್ಯಾತ ಶ್ರೀ ಸುಧೀಂದ್ರರು ಮೆರೆದು ಮಂಗಳವ ಮಿಗೆ ದೋರಲಿ ॥೯॥

## ಶ್ರೀರಾಘವೇಂದ್ರ ಶ್ರೀಪಾದಪ್ರಾರ್ಥನೆ

ಕಲುಷ ರಾಶಿಯನಳಿವ ತಾಮಸವ ತಂದೊಗೆವ ।
ಬಲು ಬುಧರ ಭಾಗ್ಯವೆನೆ ಸಕಲಾರ್ಥಗಳನೀವ ।
ಸಲೆ ರಚಿತಮಾದ ಗ್ರಂಥಗಳಿಂದ ಪ್ರಾಚೀನ ಕೃತಿಗಳವು ಕಳೆದೋರ್ದವು ॥
ಕಲೆ ಶಾಸ್ತ್ರವಿಜ್ಞಾನ ಸಕಲವಿದ್ಯಾ ಮೂರ್ತಿ ।
ನೆಲೆಯಿಲ್ಲದಾ ಕೀರ್ತಿ ಯೆನಿಸಿ ಕೋವಿದರಲ್ಲಿ ।
ಉಲುಹುಗೊಂಡಾಧೀರ ಶ್ರೀ ರಾಘವೇಂದ್ರ ಗುರು ಸಂತತಂ ಶುಭವೀಯಲಿ ॥೧೦॥

## ಸ್ವಸಂಸ್ಥಾನಗುರುಪ್ರಾರ್ಥನೆ

ರಾಮ ವೇದವ್ಯಾಸ ಪಾದ ಸನ್ನಿಹಿತ ಮನದಿ ।
ಶ್ರೀಮಧ್ವ ತಂತ್ರಪ್ರತಿಷ್ಠಾಪನಂ ಗೈಯ್ದ ।
ಧೀಮಂತ ಧೀರ ಸಲೆಪೂಜ್ಯ ಸುಮತೀಂದ್ರಾರ್ಯ ಶಿಷ್ಯಾಗ್ರಗಣ್ಯನೆನಿಸಿ ॥
ತಾ ಮುದದಿ ವೇದಾಂತ ಸಕಲ ತತ್ವವಿಚಾರ ।
ನೇಮ ನಿಷ್ಠಿತನಾಗಿ ಜ್ಞಾನಪೂರ್ಣತೆಯಿಂದ ।
ಭೂಮಿಯೋಳ್ ಪ್ರಖ್ಯಾತ ಶ್ರೀ ಉಪೇಂದ್ರರ ಪದವನಾಶ್ರಯಿಸಿಕೊಂಡಿರ್ಪೆನು ॥೧೧॥

## ಗುರುಸ್ತವನದುದ್ದೇಶ

ಯೋಗದೋಳೆರಡು ವಿಧಿ ಕರ್ಮ, ಜ್ಞಾನಗಳೆಂದು ।
ಕೂಗಿರಲು ಪಂಡಿತರು ಸಿದ್ಧವಿಲ್ಲವು ಕಾಯ ।
ನೀಗಲಾರದು ಮತಿಗೆ ಯೆಂತೆನಲು ಸ್ಥಿರಫಲವು ನಿರ್ವಾಹವಿಲ್ಲವೆಮಗೆ ॥
ಶ್ರೀಗುರು ಪ್ರಸಾದವೊಂದಿದಕೆ ಸತ್ಪಥವೆಂದು ।
ಯೋಗಿ ಯತಿಕುಲ ಚಂದ್ರ ರಾಘವೇಂದ್ರರ ಮಹಿಮೆ ।
ಯಾಗುಣಾವಳಿ ಕಥನಮಾವಗಂ ಗೈಯ್ಯುವೆನು ಸದ್ಭಕುತಿ ಸಂಭ್ರಮದೊಳು ॥೧೨॥

## ಶ್ರೀರಾಘವೇಂದ್ರ ಗುರುಮಹಾತ್ಮೆಯ ಅಪಾರತ್ವ

ಎಲ್ಲಿ ಶ್ರೀಗುರು ರಾಘವೇಂದ್ರ ಚರಿತಾಂಬುಧಿಯು ।
ಎಲ್ಲಿ ಯನ್ನಯ ಚಿತ್ತ ಪೊನ್ನೆಯ ಪುಳದ ಕಾಂತಿ ।
ಸಲ್ಲುವದೆ ಗುರುಕಥನಕೆನ್ನಯ ಪ್ರತಿಜ್ಞೆಯದು ಬಂಜೆಯನ್ನಿಸದಿರ್ಪೊದೆ ॥
ಸಲ್ಲಲಿತ ಸುಜನರುದಧಿ ಸ್ನಾನ ಸಂಕಲ್ಪ ।
ಪಲ್ಲವಿಯ ಫಲದೊಳೆನ್ನಲ್ಪ ನೋಂಪಿಯ ಕೃತಿಯು ।
ಸಲ್ಲಿತವ ಸಾಧಿಸದೆ ಗುರುಕಥಾಮೃತ ಜಲಧಿಯಲ್ಲಿ ಪೊಂದಡೆಯಿರ್ದರು ॥೧೩॥

## ಶ್ರೀರಾಘವೇಂದ್ರ ಗುರುಸ್ತವನ, ಜ್ಯೋತಿ ವರ್ಣನೆ

ಆವ ಭಾಸ್ಕರ ತೇಜ ವಹ್ನಿ ಚಂದ್ರರ ಜ್ಯೋತಿ ।
ಯಾವುದಿತ ಗ್ರಹರಾಶಿ ನಕ್ಷತ್ರಗಳ ಜ್ಯೋತಿ ।
ದೇವಕೌಸ್ತುಭಗೂಡಿ ಸಕಲ ಮಾಣಿಕ ಜ್ಯೋತಿ ವಿದ್ಯುನ್ಮಹಾ ಜ್ಯೋತಿಯು ॥
ಈ ವಿಧಗಳೆಲ್ಲ ಸಂಭೂತ ಜ್ಯೋತಿಯು ನಿಮ್ಮ ।
ಭಾವಹೃದಯಾಕಾಶ ಭವ್ಯ ಪ್ರಕಾಶದೋಳ್ ।
ಜೀವ ಕೀಟಕ ಪೊನ್ನೆಯಂತಹುದು ಶ್ರೀ ರಾಘವೇಂದ್ರ ತವ ಪ್ರತಿಭೆಯಂತು ॥೧೪॥

## ಪ್ರಬಂಧ ಪ್ರಣಯನ ವಿಷಯಸ್ತುತಿ

ಯುಕ್ತಮಾಗಿರದರ್ಥ ಚಿತ್ತದೋಳ್ ಚಲಿಸಿಲ್ಲ ।
ವುಕ್ತಿ ವಚನಗಳಲ್ಲಿ ಚರ್ಚೆರಚನೆಯೊಳಿಲ್ಲ ।
ಸಕ್ತಸ್ವಾಕೀಯತೆಯ ವ್ಯಕ್ತಗೊಳಿಸಿಹುದಿಲ್ಲ ಸಜ್ಜನರ ತೊರೆದುದಿಲ್ಲ ॥
ಯುಕ್ತಿಯಿಂ ಮಾತಾಡಿ ಮತ್ತೆ ಪೇಳಿದುದಿಲ್ಲ ।
ಶಕ್ತಿಯಾ ಲೇಖನಕೆ ತಡೆಯು ರಿನ್ನಡೆಯಿಲ್ಲ ।
ವಕ್ತಾರ ಶ್ರೀ ರಾಘವೇಂದ್ರ ತವ ಸದ್ಗ್ರಂಥ ಕರ್ತೃತ್ವವಂ ನುತಿಸುವೆ ॥೧೫॥

## ಅಣುಮಧ್ವವಿಜಯ ವ್ಯಾಖ್ಯಾನ

ರಾಘವೇಂದ್ರರು ಗೈಯ್ದ ಮಧ್ವಾಣುವಿಜಯಾರ್ಥ–।
ದಾಘನ ಪ್ರಕಾಶದೋಳ್ ಸಂತುಷ್ಟ ಚೇತನಾ–।
ದಾಗಮ ಮಹಾಜ್ಞಾನಿ ಮಧ್ವಮುನಿ ಸ್ವಸ್ಥಾನಕಭಿಷೇಚನಂ ಗೈಯ್ಯಲು ॥
ಯೋಗಿವರ್ಯನ ಮುಖಸರೋಜದೋಳ್ ರಾಜಿಸುವ ।
ವಾಗೀಶ್ವರಿಯು ತನ್ನ ಪ್ರಿಯನ ಸಂತೋಷದೋಳ್ ।
ಭಾಗಗೊಂಡವಳಾಗಿ ತನ್ನ ಸ್ಥಾನದಿ ಸಹಿತಮಾ ಸ್ಥಾಪನಂ ಗೈಯ್ದಳು ॥೧೬॥

## ವಾದಾವಲೀ ಗ್ರಂಥ ವ್ಯಾಖ್ಯಾನ

ವಾದಾವಳೀಗ್ರಂಥ ಕುಮತ ಕಾನನಕೆಳೆಸು ।
ತಾದಹನಕಾರ್ಯದೋಳ್ ಪೂರ್ವಾರ್ಧದಕ್ಕರಂ–।
ದಾದಿಂದ ವಿಪರೀತವಾಗಿ ದಾವಾವಳಿಯ ಪುಜ್ವಲ ಸ್ವರೂಪ ತೆರೆದ ॥
ಹೇ ಧೀರ ಶ್ರೀ ರಾಘವೇಂದ್ರ ಯತಿಕುಲಸಾಂದ್ರಾ ।
ಮೋದಮುನಿ ಮರುದಂಶ ವಂಶಜಾತವರೇಂದ್ರ ।
ನೀದೀಪವನಂಗೈಯ್ಯ ಶಕ್ತಿಯುಕ್ತವದೆಂದು ನಮ್ಮ ಮಾನಸವೃತ್ತಿಯು ॥೧೭॥

## ಚಂದ್ರಿಕಾ ಪ್ರಕಾಶ

ನತಜನರ ಚಿತ್ತವನ್ನಾಶ್ರಯಿಸಿದಾತಮವ ।
ಪ್ರತಿತಿರಸ್ಕರಿಸುವಾ ಕುಶಲತೆಯ ಮತಿತೇಜ ।
ಯತಿವರ ಶ್ರೀ ರಾಘವೇಂದ್ರ ತವ ಪ್ರತಿಭೆಯಂ ನುತಿಸಿ ಪೇಳುವೆನೆಂತದೊ ॥
ಅತುಲ ಚಂದ್ರಿಕೆ ತ್ರಿಜಗ ವಿಶದ ತಾನಾಗಿರ್ದು ।
ಪಥಸದೋದಿತ ಸಿರಿಯ ಸರ್ವಜ್ಞಮೌಳಿಯಾ–।
ಪ್ರತಿವ್ಯಾಸರಾಜರಿಂ ಪ್ರಕಟ ವಿಭವಾಗಿರ್ದು ತವ ಪ್ರಕಾಶದಿ ಬೆಳಗಿತು ॥೧೮॥

## ಸುಧಾಪರಿಮಳಾಖ್ಯ ಗ್ರಂಥ

ಶ್ರೀ ರಾಘವೇಂದ್ರ ತವ ರಸನರಂಗಸ್ಥಳದಿ ।
ಚಾರು ನೃತ್ಯವ ಗೈಯ್ವ ಶಾರದೆಯ ಕೇಶಗಳ ।
ಭಾರದಿಂ ಕಳಚಿರ್ದ ಕುಸುಮತತಿ ಸಮವಾಕ್ಯಸಾರ ಸೌರಭದ ಸಿರಿಯು ॥
ಮೀರಿ ಪೆಸರಾಗಿರ್ದ ಸುಧೆಗೆ ಸಂಪದವಾಗಿ ।
ಧಾರುಣಿಯ ದಿವಿಜರೊಳ್ ಜ್ಞಾನ ಸನ್ನಿಧಿಯಾಗಿ ।
ಹಾರೈಸಿದತುಲ ಪರಿಮಳ ಲಭಿಸಿ ಧರೆಯೊಳಗೆ ಶೋಭಿಸುವದಿಂದುವರೆಗೂ ॥೧೯॥

## ತತ್ವಪ್ರಕಾಶಿಕಾ ವ್ಯಾಖ್ಯಾನ

ಮೊದಲು ನಿರ್ಮಿತ ವ್ಯಾಖ್ಯೆ ವಸನಗಳು ಸರಿಬರದೆ ।
ಪುದುಗಿ ಲಜ್ಜಿತಳಾಗಿ ವಸುಧೆಯ ಮಹಾಧೀರ ।
ಬುಧರ ದೃಷ್ಟಿಗೆ ಸಹಿತ ಕಾಣಿಸಲ್ಪಡದಿರ್ದ ಭಾಷ್ಯಟೀಕಾ ಯುವತಿಯು ॥
ಉದಯಿಸಿದ ಶ್ರೀ ರಾಘವೇಂದ್ರ ವಿವೃತಿ ಗ್ರಂಥ ।
ವಿದಿತ ವಿಸ್ತಾರದನುಕೂಲ ವಸ್ತ್ರವನುಟ್ಟು ।
ಸುಧಿಯ ಸ್ವಚ್ಛಂದದಿಂ ಜ್ಞಾನಿಗಳ ಮುಂದೆಸೆದು ವಿಹರಿಸುವಳನುದಿನದೊಳು ॥೨೦॥

## ನ್ಯಾಯಮುಕ್ತಾವಳಿ ಗ್ರಂಥ

ನ್ಯಾಯ ಮುಕ್ತಾವಳಿಯು ಹಾರಮೌಕ್ತಿಕ ಸತ್ಯ ।
ಶ್ರೇಯ ಮಣಿಗಳ ತಂತ್ರ ಸಾಗರದೊಳಾರೈದು ।
ಪ್ರಾಯ ಧ್ಯಾನದ ಸೂತ್ರದಲ್ಲಿ ಪೋಣಿಕೆಗೈಯ್ದು ತವ ಗುಣವ ಬಣ್ಣಿಪರ್ಗೆ ॥
ಆಯತದಿ ಕಂಠಂಗಳಲ್ಲಿ ಕಾಣಿಕೆಯಾಗಿ ।
ಪ್ರೀಯದಿಂ ಬಹುಮತಿಯ ಮಾನಮನ್ನಣೆಗಾಗಿ ।
ರಾಯ ರಚಿಸಿದ ರಾಘವೇಂದ್ರ ತವ ಸದ್ಗ್ರಂಥಕಾಯ ಸಾರ್ಥಕವೆನಿಪುದು ॥೨೧॥

## ಅಣುಭಾಷ್ಯ ವ್ಯಾಖ್ಯಾನ

ಅಣುಭಾಷ್ಯದಲ್ಲಿ ಘನವಾದ ಭಗವತ್ಪಾದ ।
ಜನಿತಾರ್ಥ ವರ್ಣನೆಯು ಜನಕೆ ತಿಳಿಯುವದೆಂತು ।
ಮುನಿರಾಯಾ ತವದಿವ್ಯ ವಿವರಣೆಯ ಹೊರ್ತಾಗಿ ಧ್ವನಿತವಾಗದು ಮರ್ಮವು ॥
ಘನಮಹಿಮ ಗೋಪಾಲ ಬಾಲ ವದನದೊಳಿರ್ದ ।
ಗುಣಚತುರ್ದಶಭುವನ ಜನನಿಗಾಣದ ಮುನ್ನ ।
ಮನಿತಜನ ನೆನೆದುದೇ ಶ್ರೀ ರಾಘವೇಂದ್ರ ತವ ವಾಖ್ಯಾನಕೆಣೆಯಿಲ್ಲವು ॥೨೨॥

## ತಂತ್ರದೀಪಿಕಾ ಗ್ರಂಥ

ಮಧ್ವಶಾಸ್ತ್ರದ ಸಿರಿಯ ಸಾಗರದಿ ರಾಜಿಸುವ ।
ಸದ್ವಿನುತ ಭಿನ್ನ ಭಿನ್ನಾರ್ಥಗರ್ಭಿತ ಭಾಗ ।
ಸದ್ವಿಚಿಂತನಗೈಯ್ದು ಶ್ರುತಿಗಳನ್ನನುಸರಿಸಿ ವಿಸ್ತರದಿ ಸಂಗ್ರಹಿಸಿದ ॥
ಸದ್ವಚನ ಸೂತ್ರಗಳ ಪ್ರತ್ಯೇಕ ಪ್ರವಚಿಸಿದ ।
ಸದ್ವಿಯೋಜಿತ ಮೋದ ಚಾತುರ್ಯ ಶ್ರೀ ಗುರೋ ।
ಸದ್ವಿದಿತ ತವ ರಚಿತಮಾವಗ್ರಂಥದೊಳಿಲ್ಲ ತಂತ್ರದೀಪಿಕೆ ಮಾಣ್ಗೊಡೆ ॥೨೩॥

## ಮಂತ್ರೋದ್ಧಾರಕರಣ ಸಾಮರ್ಥ್ಯ

ಸುಜನರಾನುಗ್ರಹಕೆ ಶ್ರೀಮದಾರ್ಯರು ದಯದಿ ।
ನಿಜಶ್ರುತಿಗಳಿಂ ತೆಗೆದ ಸಾರಮಂತ್ರಗಳನ್ನು ।
ಪ್ರಜೆಗಳಭ್ಯುದಕಾಗಿ ನಿಜದೊಳುದ್ಧರಗೈಯ್ದು ಸ್ವಜನರುಪಕಾರಿಯೆನಿಸಿ ॥
ಸ್ವಜಿತ ಸಂಗ್ರಹವನ್ನು ಕರ್ಣಶೃತಿಯೋಳ್ಸಲಿಸಿ ।
ನಿಜಮಧ್ವಗುರು ಚರಿತೆ ಸದ್ವೃತ್ತಿಯನುಸರಿಸಿ ।
ವಿಜಯ ವಿಶ್ರುತನಾದ ಶ್ರೀ ರಾಘವೇಂದ್ರ ತವ ಚರಿತೆ ಲೋಕದಿ ಪೂಜ್ಯವು ॥೨೪॥

## ಗೀತಾರ್ಥಸಂಗ್ರಹ

ನೆರೆನಂಬಿ ಪಾಡುವ್ವರ ದುರಿತ ನಾಶನಗೈಯ್ವ ।
ಚರಿತೆ ಗೀತಾಮೃತವ ಚಂದ್ರವಂಶಜ ಕೃಷ್ಣ ।
ತೆರೆದು ಗಾಯನ ಮಾಡೆ ಸಿರಿಯ ಸತ್ಕುಲಕೆಲ್ಲ ಪರಮ ಮಂಗಳಮಾಗಿರೆ ॥
ಗುರುರಾಘವೇಂದ್ರ ನೀನನಘ ಹರುಷದೊಳದಕೆ ।
ಪರಮಾರ್ಥ ಸಾರಿರಲು ಹಂಸವಂಶಜನಾಗಿ ।
ದೊರೆಯದೇ ಸುಕ್ಷೇಮ ಮಿತ್ರಸಂಕುಲಕೆಲ್ಲ ಭಗವತ್ಪ್ರಸಾದದಿಂದ ॥೨೫॥

## ಪ್ರಮೇಯದೀಪಿಕಾ ವ್ಯಾಖ್ಯಾನ

ಗುರು ಕರುಣಮಿಲ್ಲದಲೆ ಹರಿಚರಣ ಕೃಪೆಯಿಲ್ಲ ।
ಸ್ಥಿರವಿದೆನ್ನುವ ಮನನಿರೂಢನಿಶ್ಚಿತನಾಗಿ ।
ಪರಮ ಭಗವದ್ಗೀತೆ ವ್ಯಾಖ್ಯೆ ಗೈಯ್ದರು ಮುನ್ನ ಜಯಮುನಿಗಳಿಂ ವಿರಚಿತ ॥
ಧರೆಯ ಪಂಡಿತ ಶ್ರೇಷ್ಠರಿಂದ ಸನ್ನುತಮಾದ ।
ಗುರುಕೃತ ಪ್ರಮೇಯದೀಪಿಕೆ ಗ್ರಂಥದರ್ಥವಂ ।
ತ್ವರದಿ ರಚಿಸಿದ ಧೀರ ರಾಘವೇಂದ್ರ ತವ ಗುರುಭಕ್ತಿಯತ್ಯಧಿಕವು ॥೨೬॥

## ಗೀತಾತಾತ್ಪರ್ಯಟೀಕಾ ವಿವರಣ

ಅತುಲ ತಂತ್ರಜ್ಞಾನ ತ್ರಿಜಗ ವಿಶ್ರುತಮಿರ್ದು ।
ಸತತ ವಿದ್ಯಾಮೂರ್ತಿ ಖ್ಯಾತಿಯಿರ್ದರು ಸಹಿತ ।
ಪ್ರಥಿತ ಪೂರ್ವಿಕ ಗ್ರಂಥ ವಚನಪ್ರವಚನ ವಿದ್ಯ ಕೌಶಲ್ಯಮಿರ್ದು ಸಹಿತ ॥
ಕೃತಗೀತೆಯರ್ಥ ಶಾಶ್ವತಮಿರ್ದು ಮೇಣ್ ಸಹಿತ ।
ಕ್ಷಿತಿವಿಬುಧ ಕೃಪೆಗೈಯ್ಯುದೇಕ ವಾಂಛಿತನಾಗಿ ।
ನುತ ಗೀತೆ ತಾತ್ಪರ್ಯ ಟೀಕೆಗದ್ಭುತ ವ್ಯಾಖ್ಯೆ ಗೈಯ್ದ ಶ್ರೀ ರಾಘವೇಂದ್ರ ॥೨೭॥

## ಋಗರ್ಥಮಂಜರಿ

ಎಲ್ಲರೊಳು ಲಕುಮಿ ನಾರಾಯಣಾರ್ಯರು ಯೆಂಬ ।
ಬಲ್ಲ ತವ ತನಯಮಣಿ ಧನ್ಯ ಜಗದೊಳಗಿಂದು ।
ಸಲ್ಲಲಿತ ಋಗ್ಭಾಷ್ಯ ಟೀಕೆಗಿವರಾವಿವೃತಿ ಸ್ವಲ್ಪ ಕಲ್ಪಿತಮಾಗಿರೆ ॥
ಎಲ್ಲ ಮಧ್ವಾಗಮಕೆ ವ್ಯಾಖ್ಯೆಗೈಯುವ ವ್ರತಕೆ ।
ಸಲ್ಲುವೋಲ್ ಶ್ರೀ ರಾಘವೇಂದ್ರ ನೀನಾವಿವರ ।
ಪಲ್ಲವಂಗೊಳಿಸಿ ವರಭಾಷ್ಯಪ್ರವಚನದಂತೆ ಯಲ್ಲ ಬುಧರೋಳ್ ಮೆರೆದುದು ॥೨೮॥

## ಪುರುಷಸೂಕ್ತಾದಿ ಪಂಚಸೂಕ್ತ ವ್ಯಾಖ್ಯಾನ

ವೇದ ವುಪನಿಷದಾದಿ ಬೋಧ ತತ್ವದ ಮೂರ್ತಿ ।
ಹೇ ಧೀರ ಶ್ರೀ ರಾಘವೇಂದ್ರ ಯತಿವರ ನಿಮ್ಮ ।
ಸಾದರದ ಪುರುಷ ಸೂಕ್ತಾದಿ ವ್ಯಾಖ್ಯಾನವಂ ಮೋದದೊಳ್ ಮತಿವಂತರು ॥
ಓದಿ ತವ ಧ್ಯಾನವಂ ಗೈಯ್ದು ಭಕುತಿ ಪ್ರೇಮ ।
ನಾದದೋಳ್ ಬ್ರಹ್ಮಸೂತ್ರಾದಿ ಕರ್ತಾರ ಮುನಿ ।
ದೀಧಿತಿ ಸಭಾಋಷಿಶ್ರೇಷ್ಠ ವೇದವ್ಯಾಸ ಸ್ಮರಣೆ ಗೈಯ್ವರು ನಿತ್ಯದಿ ॥೨೯॥

## ಉಪನಿಷತ್ಖಂಡಾರ್ಥ

ಉಪನಿಷದ ಖಂಡಾರ್ಥದಲ್ಲಿ ನಿಮ್ಮಾ ಪ್ರೇಮ–।
ವಪರಿಮಿತವಾಗಿಹುದು ಶ್ರೀ ರಾಘವೇಂದ್ರ ತವ ।
ವುಪಮೆಯಿಲ್ಲದ ಸಕಲವೇದಾರ್ಥ ವ್ಯಾಖ್ಯೆದೋಳಿನಿತೊಂದು ತೋರ್ವುದಿಲ್ಲ ॥
ವಿಪರೀತವಲ್ಲವಿದು ಮಾನವರು ಲೋಕದೋ–।
ಳಪರೂಪ ಪೌರ್ಣಿಮೆಯ ಪೂರ್ಣಚಂದ್ರನ ಮರೆದು ।
ಮಪವಾದ ವಿಲ್ಲದಲೆ ಬಿದಿಗಿ ಶಶಿಕಲೆಗೆರಗುವಾ ನ್ಯಾಯವಿದೆ ನಿಮ್ಮೊಳು ॥೩೦॥

## ಋಗ್ಯಜುಸ್ಸಾಮವೇದ ವ್ಯಾಖ್ಯಾನ

ಗುರುರಾಘವೇಂದ್ರ ತವ ಪರಿಶುದ್ಧ ಟೀಕೆಗಳು ।
ವರಯಜುಸ್ಸಾಮ ವೇದಗಳ ಸಂಬಂಧದೋಳ್ ।
ಪರವಿವೃತಿಯಿಂದ ಮಾಲಿನ್ಯವಂ ಗೊಂಡಿರುಹ ಹರಿಯ ಶಿರವೆಡಭಾಗದಿ ॥
ನೆರೆಕ್ಷಾಲನಂ ಗೈಯ್ದು ವುದಕದೋಳ್ ಶೋಭಿಸಲು ।
ಪರರ ಸಂಪರ್ಕದಿಂ ರಹಿತ ಋಗ್ವೇದದೋಳ್ ।
ಪರಿಮಳೋಪೇತ ಸೌಗಂಧದೋಳ್ ಶೋಭಿಸಿತು ಪರಮಾತ್ಮಬಲ ಭಾಗದಿ ॥೩೧॥

## ದಶಪ್ರಕರಣಟೀಕಾ ವ್ಯಾಖ್ಯಾನ

ಅಖಿಲ ಪ್ರಕರಣ ವಾಕ್ಯವನುಸರಿಸಿ ಯಿಹುದೆಂದು ।
ಸಕಲ ವೇದಾಂತಗಳು ಪ್ರಾಚೀನ ಮುನಿಮೌಳಿ ।
ಪ್ರಕಟಗೊಳಿಸಿರೆ ನಿಮ್ಮ ವಾಕ್ಯವದು ಪ್ರಕರಣಗಳನನುಸರಿಸಿ ಮೆರೆದಿರುವದು ॥
ಚಕಿತವೇನಿದು ಸ್ವಾಮಿ ಕವಿಗಳರಿಯುವದೆಂತು-।
ಮಕಟ ! ಪ್ರಕರಣದಶವು ಶ್ರೀ ರಾಘವೇಂದ್ರ ತವ ।
ಸುಕಲೆ ವ್ಯಾಖ್ಯಾರೂಪ ಪ್ರಕಟದೋಳ್ಮೆರೆವುದ್ಯೆ ಸದ್ವಾಕ್ಯ ಸಂಭ್ರಮಿಸುತ ॥೩೨॥

## ತರ್ಕತಾಂಡವ ವ್ಯಾಖ್ಯಾನ

ಶ್ರೀ ಸುಧೀಂದ್ರರ ತನಯ ಸಾಧುಗೀತೆಯ ಗೈಯ್ಯು ।
ತಾಸುತರ್ಕದಿ ವೈರಿವಾದಿಗಳ ಪ್ರಿಯಗೈಯ್ದು ।
ವ್ಯಾಸಮುನಿಮಣಿರಚಿತ ತಾಂಡವದಿ ಯೋಜಿಸಿದ ದಿವ್ಯಾರ್ಥವ್ಯಾಖ್ಯಾನದಿ ॥
ದೋಷಧಿಕ್ಕೃತ ಮಣಿಪ್ರಕಾಶ ಕೀರ್ತಿಯ ಪಡೆದು ।
ವಾಸುಧಿಯ ವಿಜಯ ಚಿಂತಾಮಣಿ ಪ್ರಭಾವದೋಳ್ ।
ಭೂಷಿಸುವ ಶ್ರೀ ರಾಘವೇಂದ್ರ ನಿಮ್ಮನ್ನುಳಿದು ಮನ್ಯದಾತಾರರುಂಟೆ ॥೩೩॥

## ನ್ಯಾಯಾಮೃತ ವ್ಯಾಖ್ಯಾನ

ಪ್ರೀಯ ಬಹುಪ್ರೌಢ ಗ್ರಂಥಾನೇಕ ಪ್ರವಚಿಸಿದ ।
ಶ್ರೇಯದಿಂ ಶ್ರೀ ರಾಘವೇಂದ್ರ ನ್ಯಾಯಾಮೃತವ ।
ನಾಯತದಿ ವಾಖ್ಯಾನ ಗೈಯ್ಯದಿರ್ದಪಕೀರ್ತಿ ರಾಯಸೋಂಕುದೆ ನಿಮ್ಮನು ॥
ಕಾಯದಂಡಿಸಿ ರಾಮಚಂದ್ರ ದಶರಥನಾಜ್ಞೆ।
ಧ್ಯೇಯವುಳ್ಳವನಾಗಿ ರಾಜ್ಯವಂ ತೊರೆದ ಮಹ-।
ನೀಯತೆಯ ಗುರುಕೃತಾಮೋದ ಸ್ಥಾಪನೆ ಕೀರ್ತಿ ಪ್ರಾಪ್ತಮಾಗಿರೆ ಭುವಿಯೊಳು ॥೩೪॥

## ಕೃಷ್ಣಚಾರಿತ್ರ್ಯಮಂಜರಿ ರಾಮಚಾರಿತ್ರ್ಯಮಂಜರಿ

ರಾಮಕೃಷ್ಣರ ಭವ್ಯ ಚರಿತೆಯಂ ಸಂಕ್ಷಿಪ್ತ ।
ನೇಮ ವಾಕ್ಯಗಳಿಂದ ರಚಿಸಿ ವರ್ಣನೆಗೈಯ್ದ ।
ಧೀಮತಿ ಶ್ರೀ ರಾಘವೇಂದ್ರ ತವ ಕೃತಿಯಲ್ಲಿ ವಿಸ್ಮಯಂ ನಮಗಿಲ್ಲವು ॥
ಆ ಮಹಾತ್ಮರಿಗೆಲ್ಲ ಯೀಮಹಿತ್ರಯದಲ್ಲಿ ।
ಸ್ವಾಮಿದುಸ್ಸಾಧ್ಯಮೆಂದಾವುದಿರ್ಪುದು ನಿಜದಿ ।
ಕೋಮಲ ಕರಾಬ್ಜದಿಂ ಕುಂಭಸಂಭವ ಶರಧಿಯಾಚಮನಗೈಯ್ದುದಿಲ್ಲೇ ॥೩೫॥

## ಭಾಟ್ಟಸಂಗ್ರಹ

ನೀಲಕಂಠಾಖ್ಯ ತಾಂತ್ರಿಕ ಯಜ್ಞದೀಕ್ಷಿತನ ।
ಶೀಲಪೂಜಾರ್ಹ ತವ ಭಾಟ್ಟಸಂಗ್ರಹ ಗ್ರಂಥ ।
ಲೋಲದಿಂದಾನೆಯಂಬಾರಿಯೋಳ್ ಮೆರೆವಾಗ ತವಕೀರ್ತಿವೇಗದಿಂದಾ ॥
ಜಾಲದಿಗ್ಗಜಗಳಾರೋಹಣವನಿಚ್ಛಿಸುತ ।
ಕಾಲತಕ್ಷಣದಲ್ಲಿಯಷ್ಟ ದಿಕ್ಕುಗಳಲ್ಲಿ ।
ಲೀಲೆಯಿಂ ಧಾವಿಸಿತು ಶ್ರೀ ರಾಘವೇಂದ್ರ ತವ ಜಯಭೇರಿ ಮೊಳಗುತಿರಲು ॥೩೬॥

—: ಇತಿ ಶ್ರೀಮದ್ವಾದೀಂದ್ರರ ವೇಣುಗಾನ ಸಂಪೂರ್ಣಂ :—

ಸರ್ವಜ್ಞನಾಮ ಸಂ.
ಶ್ರಾವಣ ಬಹುಳ ದ್ವಿತೀಯಾ

ಅನುವಾದಕ
ಶ್ರೀವಿಠೋಬಾಚಾರ್ಯ ವೈದ್ಯ

|| ಶ್ರೀ ಗುರುರಾಜೋ ವಿಜಯತೇ ||

# ಶ್ರೀವಾದೀಂದ್ರತೀರ್ಥವಿರಚಿತ ಗುರುಗುಣಸ್ತವನ

## ಮುನ್ನುಡಿ

'ಮುಕುಂದ ಭಕ್ತ್ಯೈ ಗುರುಭಕ್ತಿಜಾಯ್ಯೆ' ಎಂದು ಶ್ರೀನಾರಾಯಣ ಪಂಡಿತಾಚಾರ್ಯರು ಶ್ರೀಸುಮಧ್ವವಿಜಯದಲ್ಲಿ ಹೇಳಿದಂತೆ ಗುರುಭಕ್ತಿಯಿಂದ ಶ್ರೀಹರಿಯಲ್ಲಿ ಭಕ್ತಿಯು ಉಂಟಾಗುವುದು. ಅದೇ ಪ್ರಸಾದದ್ವಾರಾ ಮೋಕ್ಷಕ್ಕೆ ಸಾಧನ. ಆದ್ದರಿಂದ **"ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ । ತಸ್ಮಾದ್ಬ್ರಹ್ಮಾ ಗುರುರ್ಮುಖ್ಯಃ ಸರ್ವೇಷಾಮೇವ ಸರ್ವದಾ ॥ ಅನ್ಯೇಽಪಿ ಸ್ವಾತ್ಮನೋ ಮುಖ್ಯಾಃ ಕ್ರಮಾದ್ಗುರವ ಈರಿತಾಃ ......ಮರ್ಯಾದಾರ್ಥಂ ತೇಽಪಿ ಪೂಜ್ಯಾಃ ನ ತು ಯದ್ವತ್ಪರೋ ಗುರುಃ ॥"** ಎಂದು ಶ್ರೀಮದಾಚಾರ್ಯರು ಮಹಾಭಾರತತಾತ್ಪರ್ಯ ನಿರ್ಣಯದಲ್ಲಿ ಅಪ್ಪಣೆಕೊಡಿಸಿದಂತೆ ಬ್ರಹ್ಮದೇವರು-ಭಾವಿಬ್ರಹ್ಮರಾದ ವಾಯುದೇವರು ಜಗದ್ಗುರುಗಳು. ವಿಲೀನಪ್ರಕೃತಿಗಳಾದ ಅವರು ನಿಸ್ಸಂಶಯವಾಗಿ ಪರಾಪರತತ್ವಗಳನ್ನು ಉಪದೇಶಿಸಲು ಸಮರ್ಥರು. ಈಶಕೋಟಿ ಸಂಸಾರಿಜೀವಕೋಟಿಮಧ್ಯದಲ್ಲಿ ಇದ್ದುದರಿಂದ ವಾಯುದೇವರೇ ಪರತತ್ವವಾದ ಶ್ರೀಹರಿಯ ಯಥಾರ್ಥ ಜ್ಞಾನವನ್ನು ಮಾಡಿಕೊಡಲು ಶಕ್ತರು. ಆದ್ದರಿಂದ ಅವರು "ಮಧ್ಯಮ"(ಮಧ್ಯಮೋ ವಾಯುರುಚ್ಯತೇ)ರೆಂದು ಕರೆಸಿಕೊಳ್ಳುತ್ತಾರೆ. ಇಲ್ಲದಿದ್ದರೆ ಪ್ರಕೃತಿ ಬಂಧದಿಂದ ತೊಳಲಾಡುತ್ತಿರುವ ಸಂಸಾರಿಜೀವರಿಗೆ ಪ್ರಕೃತ್ಯತೀತನಾದ ಪರಮಾತ್ಮನ ಜ್ಞಾನವಾಗುವ ಬಗೆ ಎಂತು ? ಇವರಿಬ್ಬರ ಮಧ್ಯದಲ್ಲಿ ಜೀವಕೋಟಿಯಲ್ಲಿ ಸೇರಿದ್ದರೂ ಪ್ರಕೃತಿಲೇಪವಿಲ್ಲದ ಆದ್ದರಿಂದಲೇ ಪ್ರಕೃತಿದೂರನಾದ ಪರಮಾತ್ಮನ ಜ್ಞಾನವುಳ್ಳ, ಸಂಪರ್ಕತಂತುವೆಂದರೆ ವಾಯುದೇವರು. ಅವರ ಸನ್ನಿಧಾನವಿಶೇಷವುಳ್ಳ ಜ್ಞಾನಿಶ್ರೇಷ್ಠರೂ **"ಆಭಾಸಕಾಭಾಸಪರಾವಭಾಸ"** ಎಂಬಂತೆ ನಮ್ಮ ಬಿಂಬಕೋಟಿಗೆ ಸೇರಿದವರಾಗಿ ಯಥಾಯೋಗ್ಯವಾಗಿ ತತ್ವೋಪದೇಶವನ್ನು ಮಾಡುವರು. ಬಿಂಬರಾದ ಗುರುಗಳ ಮಹಿಮೆಯನ್ನು ತಿಳಿದು ಸ್ತುತಿಸಿ ಅವರ ಪ್ರಸಾದವನ್ನು ಪಡೆಯುವುದು ಮೋಕ್ಷಕ್ಕೆ ಅತ್ಯವಶ್ಯವಾದ ಸಾಧನವಾಗಿದೆ. **"ಓಂ ಪ್ರದಾನವದೇವ ಹಿ ತದುಕ್ತಂ ಓಂ"** ಎಂಬಂತೆ ಅವರು ಪ್ರಸನ್ನರಾಗಿ ದಯಪಾಲಿಸಿದ ಜ್ಞಾನವು ಫಲಕಾರಿಯಾಗುವುದು.

**"ಸಮ್ಯಗ್ ಲಕ್ಷಣಸಂಪನ್ನೋ ಯದ್ವದ್ಯಾತ್ಸುಪ್ರಸನ್ನಧೀಃ ।**
**ಶಿಷ್ಯಾಯ ಸತ್ಯಂ ಭವತಿ ತತ್ಸರ್ವಂ ನಾತ್ರ ಸಂಶಯಃ ॥**

**ನಾತಿಪ್ರಸನ್ನಹೃದಯೋ ಯದ್ದದ್ಯಾದ್ಗುರುರಪ್ಯಸೌ ।**
**ನ ತತ್ಸತ್ಯಂ ಭವೇತ್ತಸ್ಮಾದರ್ಚನೀಯೋ ಗುರುಃ ಸದಾ ॥"** – *ಮ. ತಾ. ನಿರ್ಣಯ ॥*

ಎಂಬಂತೆ ಗುರುಗಳನ್ನು ಶುಶ್ರೂಷೆಯಿಂದ ಪ್ರಸನ್ನೀಕರಿಸುವುದು ಪ್ರತಿಯೊಬ್ಬ ಸಾಧಕನ ಕರ್ತವ್ಯವಾಗಿದೆ.

**"ಜಾಯಮಾನೋ ವೈ ಬ್ರಾಹ್ಮಣಃ ತ್ರಿಭೀ ಋಣ್ಯೈಃ ಋಣವಾನ್ ಜಾಯತೇ ।**
**ಯಜ್ಞೇನ ದೇವೇಭ್ಯೋ ಬ್ರಹ್ಮಚರ್ಯೇಣ ಋಷಿಭ್ಯಃ ಪ್ರಜಯಾ ಪಿತೃಭ್ಯಃ ॥"**
– *ಶತಪಥಬ್ರಾಹ್ಮಣ, ತೈತಿರೀಯಸಂಹಿತಾ.*

ಬ್ರಾಹ್ಮಣನು ಹುಟ್ಟುವಾಗಲೇ ಋಣತ್ರಯದಿಂದ ಬದ್ಧನಾಗಿ ಬರುತ್ತಾನೆ. ಆ ಋಣದಲ್ಲಿ ದೇವಋಣವನ್ನು ಯಜ್ಞ-ಯಾಗಾದಿ ಅನುಷ್ಠಾನದಿಂದ, ಋಷಿಋಣವನ್ನು ಬ್ರಹ್ಮಚರ್ಯದಿಂದ (ವೇದಾಧ್ಯಯನ-ಬ್ರಹ್ಮಜ್ಞಾನ), ಪಿತೃಋಣವನ್ನು ಪುತ್ರೋತ್ಪಾದನ-ದಿಂದ (ಸಂತತಿಯನ್ನು ಬೆಳೆಸುವುದರಿಂದ) ಅಥವಾ ಆಧ್ಯಾತ್ಮಿಕ ವಿದ್ಯಾಸಂತತಿಯನ್ನು ಬೆಳೆಸುವುದರಿಂದ ತೀರಿಸಬೇಕು. ಆದ್ದರಿಂದ ಬ್ರಾಹ್ಮಣನು ಯಜನಯಾಜನಾದಿ ಷಟ್‌ಕರ್ಮಗಳಲ್ಲಿ ಅಧಿಕೃತನಾಗಿ ವರ್ಣಾಶ್ರಮಾಚಾರಗಳನ್ನು ಶ್ರೀಹರಿಯ ಪೂಜೆಯೆಂಬ ಅನುಸಂಧಾನದಿಂದ ಆಚರಿಸುತ್ತ ಬಂದಿದ್ದಾನೆ. ಈ ಉದಾತ್ತವಾದ ಧರ್ಮಸಂಸ್ಥಾಪನೆಯ ಕಾರ್ಯವನ್ನು ಶ್ರೀಹರಿ ಪರಮಾತ್ಮನು ಅನೇಕ ಅವತಾರಗಳನ್ನು ಸ್ವೀಕರಿಸಿ ಮಾಡುತ್ತ ಬಂದಿದ್ದಾನೆ.

**"ಸೋಽಯಂ ವಿಹಾರ ಇಹ ಮೇ ತನುಭೃತ್ಸ್ವಭಾವ–।**
**ಸಂಭೂತಯೇ ಭವತಿ ಭೂತಿಕೃದೇವ ಭೂತ್ಯಾಃ ॥"**

ಜೀವರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ಸ್ವರೂಪಾನಂದಾವಿರ್ಭಾವರೂಪ-ಮುಕ್ತಿಯನ್ನು ಕೊಡುವುದೇ ಪರಮಾತ್ಮನ ಅವತಾರಗಳ ಪ್ರಯೋಜನವು. **"ನ ಪ್ರಯೋಜನವತ್ವಾತ್", "ಲೋಕವತ್ತು ಲೀಲಾಕೈವಲ್ಯಂ"** ಎಂದು ಸೂತ್ರಗಳಲ್ಲಿ ಹೇಳಿದಂತೆ ನಿತ್ಯತೃಪ್ತನಾದ ಈಶ್ವರನಿಗೆ ಅವತಾರಾದಿಗಳಿಂದ ಕಾರ್ಯಪ್ರವೃತ್ತನಾಗುವಲ್ಲಿ ಬೇರೆ ಯಾವ ಪ್ರಯೋಜನವೂ ಇಲ್ಲ. **"ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಂ ರಕ್ಷೋವಧಾಯೈವ ನ ಕೇವಲಂ ವಿಭೋಃ ॥"** ಎಂದು ಭಾಗವತದಲ್ಲಿ ನಿರೂಪಿಸಿದಂತೆ ಸಜ್ಜನರನ್ನು ಸನ್ಮಾರ್ಗಕ್ಕೆ ಹಚ್ಚುವುದೇ ಆ ದಯಾಘನನಾದ ಶ್ರೀಹರಿಯ ಉದ್ದೇಶವು. ಈ ಕಾರ್ಯಕ್ಕೆ ಪ್ರಥಮಾಂಗರು ಮೇಲೆ ಸೂಚಿಸಿದಂತೆ ಶ್ರೀವಾಯುದೇವರು.

**"ತಸ್ಯಾಂಗಂ ಪ್ರಥಮೋ ವಾಯುಃ ಪ್ರಾದುರ್ಭಾವತ್ರಯಾನ್ವಿತಃ ।**
**ಪ್ರಥಮೋ ಹನೂಮಾನ್ನಾಮ ದ್ವಿತೀಯೋ ಭೀಮ ಏವ ಚ ।**
**ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ॥"**

ಅವರು ರಾಮಾವತಾರದಲ್ಲಿ ಆಂಜನೇಯರಾಗಿಯೂ, ಕೃಷ್ಣಾವತಾರದಲ್ಲಿ ಭೀಮಸೇನರಾಗಿಯೂ, ವೇದವ್ಯಾಸರ ಅವತಾರದಲ್ಲಿ ಪೂರ್ಣಪ್ರಜ್ಞರಾಗಿಯೂ ಅವತರಿಸಿ ಬಲಕಾರ್ಯ-ಜ್ಞಾನಕಾರ್ಯಗಳನ್ನು ಮಾಡಿದ್ದಾರೆ. ರಾಮಾವತಾರ ಕೃಷ್ಣಾವತಾರಗಳೆರಡೂ ಪೂರಕ ಅವತಾರಗಳು. ದ್ವಾಪರಯುಗದಲ್ಲಿಯೇ ಶ್ರೀವೇದವ್ಯಾಸರು ಅವತರಿಸಿ ಶ್ರೀಕೃಷ್ಣನ ಕಾರ್ಯವನ್ನು ಪೂರೈಸಿದರು.

**"ಪ್ರಾದುರ್ಭಾವದ್ವಯೇऽಹ್ಯಸ್ಮಿನ್ ಸರ್ವೇಷಾಂ ನಿರ್ಣಯಃ ಕೃತಃ ।**
**ಪಶ್ಚಾತ್ತನತ್ವಾತ್ಕೃಷ್ಣಸ್ಯ ವೈಶೇಷ್ಯಾತ್ತತ್ರ ನಿರ್ಣಯಃ ॥"** – ಮ.ಭಾ.ತಾ.

ಆದ್ದರಿಂದ ತ್ರೇತಾ ದ್ವಾಪರಯುಗಗಳಲ್ಲಿ ಶ್ರೀಹರಿಯು ಮಾಡಿದ ಲೀಲೆಗಳನ್ನು ವರ್ಣಿಸುವ ರಾಮಾಯಣ-ಮಹಾಭಾರತಗಳು ಜಗತ್ತಿನ ಸಾಂಸ್ಕೃತಿಕ ಇತಿಹಾಸಗಳೆಂದು ಪ್ರಸಿದ್ಧವಾಗಿವೆ. ವಾಯುದೇವರು ಪರಮಾತ್ಮನ ಸಂಕಲ್ಪಕ್ಕೆ ಮುಖ್ಯ ಅಂಗವಾಗಿ ಜಗತ್ತನ್ನು ಕಂಟಕಗಳಿಂದ ಪಾರುಮಾಡಿದರು.

ಶ್ರೀಮಧ್ವಾಚಾರ್ಯರು ಮನ್ಯುಸೂಕ್ತ-ಬಳಿತ್ಥಾದಿಸೂಕ್ತಗಳಿಂದ ಪ್ರತಿಪಾದ್ಯರಾದ ವಾಯುದೇವರ ಮೂರನೆಯ ಅವತಾರ. (**"ಯದೀ ಮನುಪ್ರದಿವೋ ಮಧ್ವ ಆಧವೇ । ಗುಹಾಸಂತಂ ಮಾತರಿಶ್ವಾಮಥಾಯತಿ ॥"**) ಅವರ ವೈದಿಕ ಸಿದ್ಧಾಂತವನ್ನು ಅವರ ಶಿಷ್ಯಪರಂಪರೆಯು ಸಜ್ಜನರಿಗೆ ಉಪದೇಶ ಮಾಡುತ್ತ ಬಂದಿದೆ. ಈ ವೈದಿಕ ಸಿದ್ಧಾಂತವು ಜಗತ್ತಿನಲ್ಲಿ ದೃಢಮೂಲವಾಗಿ ನಿಂತಿರುವದಾದ್ದರಿಂದಲೇ ಸಜ್ಜನರಿಗೆ ಬಾಳಿಬದುಕಲು ಅವಕಾಶವುಂಟಾಗಿದೆ. ಇಲ್ಲದಿದ್ದರೆ ಅಕಾಲಪ್ರಳಯದಿಂದ **"ಪರಸ್ಪರಹಿಂಸಾದಿನಾ ಅಪಕಾರಸ್ಯೈವ ಪ್ರಾಪ್ತೇಃ ॥"** ಎಂಬಂತೆ ಜನರು ಚಾರ್ವಾಕಮತವನ್ನು ಅವಲಂಬಿಸಿ ಒಬ್ಬರನ್ನೊಬ್ಬರು ಹಿಂಸಿಸುತ್ತ ನಾಶಹೊಂದುತ್ತಿದ್ದರು. ಗುಣಪೂರ್ಣನಾದ ಶ್ರೀಹರಿಯ ಸ್ವಾತಂತ್ರ್ಯ, ಜಗದ್ಗುರುಗಳಾದ ವಾಯುದೇವರ ನಿರ್ವ್ಯಾಜ ಕೈಂಕರ್ಯ, ಜೀವಜಡಗಳಲ್ಲಿ ತಾರತಮ್ಯ, ಸತ್ಯಭೂತವಾದ ಈ ಅಸ್ವತಂತ್ರ ಚರಾಚರ ಜಗತ್ತಿನಲ್ಲಿ ಜನ್ಮ ತಾಳಿದ ಜೀವನಿಗೆ ಅವನ ಸ್ವರೂಪ-ಸಾಧನಯೋಗ್ಯತೆಗನುಗುಣವಾಗಿ ಜ್ಞಾನೋಪದೇಶ, ಮೋಕ್ಷಪ್ರದನಾದ ಶ್ರೀಹರಿಯ ಪ್ರಸಾದಕ್ಕೆ ವಿರಕ್ತಿ-ಭಕ್ತಿ-ಉಪಾಸನಾ-ಅಪರೋಕ್ಷ ಜ್ಞಾನಗಳ ಅವಶ್ಯಕತೆ, ಮತ್ತು ಮೋಕ್ಷದ ಜ್ಞಾನಾನಂದ ಸ್ವರೂಪನಿರೂಪಣೆ, ತಾರತಮ್ಯದ ಕಟಾಂಜನದಲ್ಲಿ ಪರಸ್ಪರರು ಗುರುಶಿಷ್ಯಭಾವದಿಂದ ಇದ್ದು ಅಸೂಯಾ-ಮಾತ್ಸರ್ಯಾದಿಗಳಿಲ್ಲದೆ, ಅಪ್ರತಿಹತಸತ್ವನೂ, ಜ್ಞಾನಾನಂದಪೂರ್ಣನೂ ಆದ ಮಹಾಪ್ರಭು ಶ್ರೀಹರಿಪರಮಾತ್ಮನಲ್ಲಿ ಬಿಂಬ-ಪ್ರತಿಬಿಂಬಭಾವದಿಂದ ಭಕ್ತಿಯುಳ್ಳವನಾಗೋಣ, ಇವೇ ಮೊದಲಾದ ಹೃದ್ಯನಿರವದ್ಯಸುಬಂಧುರೋಪದೇಶಗಳ ಪ್ರಭಾವದಿಂದ ಜಗತ್ತು ರಕ್ಷಿತವಾಗಿದೆ. ಈ ತತ್ವಜ್ಞಾನದ ಪೋಷಣೆಯಲ್ಲಿ ಸಜ್ಜನರು ತಮ್ಮ ತಮ್ಮ ಸಾಧನೆ ಮಾಡಿಕೊಂಡು ಸ್ವರೂಪಾನಂದವನ್ನು ಅನುಭವಿಸಲು ಸಮರ್ಥರಾಗಿದ್ದಾರೆ.

ಇಂಥ ಅಮೃತಮಯವಾದ ಜ್ಞಾನೋಪದೇಶವನ್ನು ಶ್ರೀಮದಾಚಾರ್ಯರು ಸಜ್ಜನರಿಗೆ ಸಾಕ್ಷಾತ್ತಾಗಿಯೂ ಗುರುಗಳಲ್ಲಿ ಆವಿಷ್ಟರಾಗಿಯೂ ನೀಡುತ್ತ ಜಗತ್ತನ್ನು ಉದ್ಧರಿಸುತ್ತ ಬಂದಿದ್ದಾರೆ. ಅವರ ಶಿಷ್ಯವರ್ಗದಲ್ಲಿ ಗೃಹಸ್ಥಾಶ್ರಮಿಗಳೂ ಸಂನ್ಯಾಸಿಗಳೂ ಬಹುಸಂಖ್ಯಾಕರಾಗಿದ್ದರು. ಶ್ರೀತ್ರಿವಿಕ್ರಮಪಂಡಿತಾಚಾರ್ಯರು ಶ್ರೀಹರಿವಾಯುಸ್ತುತಿಯಲ್ಲಿ ಶ್ರೀಮದಾಚಾರ್ಯರನ್ನು ಸ್ತುತಿಸಿದ್ದನ್ನು ಗಮನಿಸಿದರೆ ಅವರ ಗುರುಭಕ್ತಿಯ ಪಾರಮ್ಯವು ಗೊತ್ತಾಗುತ್ತದೆ. ಅದರಂತೆ ಶ್ರೀನಾರಾಯಣಪಂಡಿತಾಚಾರ್ಯರು ಶ್ರೀಸುಮಧ್ವವಿಜಯದಲ್ಲಿ **"ತಾಂ ಮಂತ್ರವರ್ಣೈರನುವರ್ಣನೀಯಾಂ"** ಎಂಬಂತೆ ವೇದ ಪ್ರತಿಪಾದ್ಯರಾದ ವಾಯುದೇವರ ಲೀಲೆಯನ್ನು ನಿರೂಪಿಸಲು ತಾವು ಶಕ್ತರಲ್ಲವೆಂದೂ ಆದರೂ ಗುರ್ವನುಗ್ರಹದಿಂದ ಇದರಲ್ಲಿ ಪ್ರವೃತ್ತರಾಗಿದ್ದೇವೆಂದೂ ಹೇಳಿದ್ದಾರೆ. ಸನ್ಯಾಸಿ ಶಿಷ್ಯವರ್ಗದಲ್ಲಿ ಶ್ರೀಪದ್ಮನಾಭತೀರ್ಥರು, ನರಹರಿತೀರ್ಥರು, ಮಾಧವತೀರ್ಥರು ಮತ್ತು ಅಕ್ಷೋಭ್ಯತೀರ್ಥರು ಶ್ರೀಮದಾಚಾರ್ಯರ ಪ್ರೀತಿಗೆ ಪಾತ್ರರಾಗಿ ಅನುಪಮವಾದ ಗುರುಸೇವೆಯನ್ನು ಸಲ್ಲಿಸಿದ್ದಾರೆ. ಶ್ರೀಪದ್ಮನಾಭತೀರ್ಥರನ್ನಾಶ್ರಯಿಸದೆ ವೇದಾಂತ ಮಾರ್ಗದಲ್ಲಿ ಪ್ರವೇಶವೇ ಶಕ್ಯವಿಲ್ಲವೆಂದು ಶ್ರೀಟೀಕಾಕೃತ್ಪಾದರು (ಶ್ರೀಜಯತೀರ್ಥರು) ಹೊಗಳಿದ್ದಾರೆ. ಶ್ರೀನರಹರಿತೀರ್ಥರು ಶ್ರೀಬ್ರಹ್ಮ ದೇವರಕರಾರ್ಚಿತವಾದ ಶ್ರೀಮೂಲ-ರಾಮರ ವಿಗ್ರಹವನ್ನು ಕಲಿಂಗರಾಜ್ಯದ ಬೊಕ್ಕಸದಿಂದ ತಂದು ಗುರುಗಳಾದ ಶ್ರೀಮಧ್ವಾಚಾರ್ಯರಿಗೆ ಒಪ್ಪಿಸಿ ಕೃತಕೃತ್ಯರಾದರು. ಮತ್ತು ಅನೇಕ ಗ್ರಂಥಗಳನ್ನು ರಚಿಸಿ ಜ್ಞಾನಕಾರ್ಯವನ್ನು ಮಾಡಿದ್ದಾರೆ. ಶ್ರೀಮಾಧವತೀರ್ಥರು ಮಹಾವಿರಕ್ತಜ್ಞಾನಿಗಳು. ಶ್ರೀಅಕ್ಷೋಭ್ಯತೀರ್ಥರು ಅದ್ವೈತವಾದಧುರೀಣರಾದ ಪಂಡಿತಪ್ರಕಾಂಡ ಶ್ರೀವಿದ್ಯಾರಣ್ಯರನ್ನು ವಾದದಲ್ಲಿ ಸೋಲಿಸಿ ಭೇದಸಿದ್ಧಾಂತದ ಭೇರಿಯನ್ನು ಮೊಳಗಿಸಿದರೆಂದು **"ಅಸಿನಾ ತತ್ವಮಸಿನಾ ಪರಜೀವಪ್ರಭೇದಿನಾ । ವಿದ್ಯಾರಣ್ಯಂ ಮಹಾರಣ್ಯಂ ಅಕ್ಷೋಭ್ಯಮುನಿ-ರಚ್ಛಿನತ್ ।।"** ಎಂಬ ಪರಂಪರೆಯಿಂದ ಬಂದ ಶ್ಲೋಕದಿಂದ ಗೊತ್ತಾಗುತ್ತದೆ. **"ಶುಕವತ್ ಶಿಕ್ಷಿತೋಽಹಂ"** ಎಂದು ಶ್ರೀಜಯತೀರ್ಥರೇ ಹೇಳಿಕೊಳ್ಳುವಂತೆ, ಇವರು ಜಯತೀರ್ಥರಿಗೆ ಸಕಲಶಾಸ್ತ್ರಗಳಲ್ಲಿಯೂ ಪಾಠ ಹೇಳಿಕೊಟ್ಟಿದ್ದರು. ಗುರ್ವನುಗ್ರಹದಿಂದ ಸರ್ವಜ್ಞಕಲ್ಪರಾದ ಜಯತೀರ್ಥರು ಆಚಾರ್ಯರ ಗ್ರಂಥಗಳಿಗೆ ಅದ್ಭುತವಾದ ಟೀಕೆಗಳನ್ನು ರಚಿಸಿ ಅವರ ಸಿದ್ಧಾಂತವನ್ನು ಶಾಸ್ತ್ರೀಯವಾಗಿ ಪ್ರಕಾಶಗೊಳಿಸಿದ್ದಾರೆ. ಇವರಿಗೆ ಟೀಕಾಚಾರ್ಯರೆಂಬ ನಿರ್ವಿಶೇಷಣ ಪ್ರಶಸ್ತಿಯು ಲೋಕದಲ್ಲಿ ಪ್ರಸಿದ್ಧ-ವಾಗಿದೆ. ಅನುವ್ಯಾಖ್ಯಾನದ ಟೀಕೆಯಾದ ಶ್ರೀಮನ್ನ್ಯಾಯಸುಧೆಯು ಅಪ್ರತಿಮವಾದ ವಾದಗ್ರಂಥವು. ಅದರಲ್ಲಿ ಜಯತೀರ್ಥರು ಸಕಲ ವಿಮತಗಳನ್ನು ಖಂಡಿಸಿ ಶ್ರೀಮದಾಚಾರ್ಯರ ದ್ವೈತಸಿದ್ಧಾಂತವನ್ನು ಶಾಸ್ತ್ರಮರ್ಯಾದೆಯಿಂದ ಪ್ರಮಾಣಗಳನ್ನು ಉದಾಹರಿಸಿ ಸಮರ್ಥಿಸಿದ್ದಾರೆ.

ಶ್ರೀಮದಾಚಾರ್ಯರ ಶಿಷ್ಯಪರಂಪರೆಯಲ್ಲಿ ಹತ್ತನೆಯ ತಲೆಮಾರಿನವರಾದ ಶ್ರೀರಾಮಚಂದ್ರತೀರ್ಥರು ತಮ್ಮ ಪಟ್ಟದ ಶಿಷ್ಯರಾದ ಶ್ರೀವಿಬುಧೇಂದ್ರತೀರ್ಥರಿಗೆ ಮಹಾಸಂಸ್ಥಾನವನ್ನೊಪ್ಪಿಸಿ ಅನೂಚಾನವಾಗಿ ಬಂದ ಸಿದ್ಧಾಂತದ ಗುಹ್ಯಪ್ರಮೇಯಗಳನ್ನು ಉಪದೇಶಿಸಿ ವಾದಿನಿಗ್ರಹದಿಂದ ಸಿದ್ಧಾಂತಪ್ರತಿಷ್ಠಾಪನೆಗೆ ದಿಗ್ವಿಜಯ ಮಾಡಲಿಕ್ಕೆ ಅಪ್ಪಣೆ ಕೊಟ್ಟು ಕಳಿಸಿದರು. ಇವರು ಮಹಾಮೇಧಾವಿಗಳೂ, ಅಪ್ರತಿಮಪಂಡಿತರೂ, ತಪಸ್ವಿಗಳೂ ಆಗಿದ್ದರು. ಇವರ ವಿದ್ಯಾಶಿಷ್ಯರು ಶ್ರೀಲಕ್ಷ್ಮೀನಾರಾಯಣ ಮುನಿಗಳು (ಶ್ರೀಪಾದರಾಜರು). ಶ್ರೀವ್ಯಾಸತೀರ್ಥರು ಇವರನ್ನು (**"....ಸಂಪ್ರದಾಯಾರ್ಥಕೋವಿದಾನ್ ಲಕ್ಷ್ಮೀನಾರಾಯಣಮುನೀನ್ ವಂದೇ ವಿದ್ಯಾಗುರೂನ್ಮಮ"**) ಸಂಪ್ರದಾಯಜ್ಞ ಗುರುಗಳೆಂದು ಹೊಗಳಿದ್ದಾರೆ. ಶ್ರೀವ್ಯಾಸತೀರ್ಥರ ಪಟ್ಟದ ವಿದ್ಯಾಶಿಷ್ಯರು ಶ್ರೀವಿಜಯೀಂದ್ರತೀರ್ಥರು. ಇವರನ್ನು ಶ್ರೀಮದಾಚಾರ್ಯಮಹಾಸಂಸ್ಥಾನಾಧಿಪತಿಗಳೂ, ತಮ್ಮ ಬಂಧುಗಳೂ ಆದ ಶ್ರೀಸುರೇಂದ್ರತೀರ್ಥರಿಗೆ ಶ್ರೀವ್ಯಾಸತೀರ್ಥರು ಒಪ್ಪಿಸಿ ಕೊಟ್ಟರು. ಶ್ರೀಸುರೇಂದ್ರತೀರ್ಥರು ಅವರಿಗೆ ದಂಡಪಲ್ಲಟ, ಮಂತ್ರ ಮುದ್ರಾಧಾರಣ, ಗುರೂಪದೇಶಾದಿಗಳನ್ನು ಮಾಡಿ ಶ್ರೀಮದಾಚಾರ್ಯಸತ್ಪರಂಪರೆಯ ಶ್ರೀವಿಬುಧೇಂದ್ರ-ತೀರ್ಥರ ಮಹಾಸಂಸ್ಥಾನದ ಪೀಠಾಧಿಪತಿಗಳನ್ನಾಗಿ ಮಾಡಿದರು. ಶ್ರೀವಿಜಯೀಂದ್ರ-ತೀರ್ಥರ ಶಿಷ್ಯರು ಶ್ರೀಸುಧೀಂದ್ರತೀರ್ಥರು. ಅವರ ಶಿಷ್ಯರೇ ಮಹಾ ತಪಸ್ವಿಗಳೂ ಶಾಪಾನುಗ್ರಹಶಕ್ತರೂ 'ಅಪರೋಕ್ಷೀಕೃತಶ್ರೀಶ'ರೂ ಟಿಪ್ಪಣ್ಯಾಚಾರ್ಯರೂ ಆದ ಶ್ರೀಗುರುಸಾರ್ವಭೌಮ ಶ್ರೀಮದ್ರಾಘವೇಂದ್ರತೀರ್ಥ ಶ್ರೀಪಾದಂಗಳವರು.

ಶ್ರೀಯೋಗೀಂದ್ರತೀರ್ಥರು ಶ್ರೀಗುರುಸಾರ್ವಭೌಮರ ತರುವಾಯ ವೇದಾಂತ ಸಾಮ್ರಾಜ್ಯಕ್ಕೆ ಅಧಿಪತಿಗಳಾದರು. ಪೂರ್ವಾಶ್ರಮದಲ್ಲಿ ವೆಂಕಣ್ಣಾಚಾರ್ಯ ಎಂಬ ಹೆಸರಿನ ಇವರು ಶ್ರೀಗುರುಸಾರ್ವಭೌಮರ ಪೂರ್ವಾಶ್ರಮದ ಅಣ್ಣಂದಿರಾದ ಶ್ರೀಗುರುರಾಜಾಚಾರ್ಯರ ಪೌತ್ರರು. ಶ್ರೀಯೋಗೀಂದ್ರತೀರ್ಥರ ನಂತರ ಮುಂದೆ ಅವರ ಮೊದಲ ತಮ್ಮಂದಿರಾದ ಶ್ರೀವಾಸುದೇವಾಚಾರ್ಯರು, ಶ್ರೀಸೂರೀಂದ್ರತೀರ್ಥರೆಂಬ ಹೆಸರಿನಿಂದ ಸಂಸ್ಥಾನಾಧಿಪತಿಗಳಾದರು. ಅವರ ತರುವಾಯ ಅವರ ಪ್ರೀತಿಯ ತಮ್ಮಂದಿರಾದ ಶ್ರೀಮುದ್ದು ವೆಂಕಟಕೃಷ್ಣಾಚಾರ್ಯರು ಶ್ರೀಸುಮತೀಂದ್ರತೀರ್ಥರೆಂಬ ಹೆಸರಿನಿಂದ ಪಟ್ಟಾಭಿಷಿಕ್ತರಾಗಿ ೧೬೯೨-೧೭೨೫ ರ ವರೆಗೆ ಅಂದರೆ ೩೩ ವರ್ಷಗಳ ಕಾಲ ಮಹಾಸಂಸ್ಥಾನಾಧಿಪತ್ಯವನ್ನು ವಹಿಸಿದರು. ಮುಂದೆ ಶ್ರೀಉಪೇಂದ್ರತೀರ್ಥರು ೩ ವರ್ಷ ಪೀಠಾಧಿಪತಿಗಳಾಗಿದ್ದರು. ಇವರ ತರುವಾಯದಲ್ಲಿ ಶ್ರೀಗುರುರಾಜರ ಪೂರ್ವಾಶ್ರಮ ಮಕ್ಕಳಾದ ಶ್ರೀಲಕ್ಷ್ಮೀನಾರಾಯಣಾಚಾರ್ಯರ ಪುತ್ರರಾದ ಶ್ರೀಪುರುಷೋತ್ತಮಾಚಾರ್ಯರ ಜ್ಯೇಷ್ಠ ಪುತ್ರರಾದ ಶ್ರೀನಿವಾಸಾಚಾರ್ಯರು ಶ್ರೀವಾದೀಂದ್ರತೀರ್ಥರೆಂಬ ಹೆಸರಿನಿಂದ ಪೀಠಾಧಿಪತಿಗಳಾದರು. ಈ ಶ್ರೀವಾದೀಂದ್ರತೀರ್ಥರೇ ಪ್ರಕೃತ ಪ್ರಕಾಶಿಸಲ್ಪಡುತ್ತಿರುವ

"ಗುರುಗುಣಸ್ತವನ" ಎಂಬ ಗ್ರಂಥದ ಕರ್ತರು. ಇವರ ಗ್ರಂಥರಚನಾಶೈಲಿಯು ಹೃದ್ಯವೂ ಬಂಧುರವೂ ಆಗಿದೆಯೆಂದು ವಾಚಕರಿಗೆ ಗೊತ್ತಾಗುವುದು. ಶ್ರೀವಾದೀಂದ್ರತೀರ್ಥರ ತರುವಾಯ ಅವರ ಪೂರ್ವಾಶ್ರಮ ತಮ್ಮಂದಿರ ಮಕ್ಕಳಾದ ಶ್ರೀಪುರುಷೋತ್ತಮಾ-ಚಾರ್ಯರು ಶ್ರೀವಸುಧೇಂದ್ರತೀರ್ಥರೆಂಬ ಅಭಿಧಾನದಿಂದ ಮಹಾಸಂಸ್ಥಾನವನ್ನಾಳಿದರು. ಇವರೇ 'ಗುರುಗುಣಸ್ತವನ'ಕ್ಕೆ ಮೊದಲ ವ್ಯಾಖ್ಯಾನಕಾರರು. ಇವರ ತರುವಾಯ ಇವರ ತಮ್ಮಂದಿರಾದ ಶ್ರೀಬಲರಾಮಾಚಾರ್ಯರು "ಶ್ರೀವರದೇಂದ್ರತೀರ್ಥ"ರೆಂಬ ಹೆಸರಿನಿಂದಲೂ ಶ್ರೀವಾದೀಂದ್ರತೀರ್ಥರ ಪೂರ್ವಾಶ್ರಮ ಪುತ್ರರಾದ ಶ್ರೀಜಯರಾಮಾಚಾರ್ಯರು "ಶ್ರೀಧೀರೇಂದ್ರತೀರ್ಥ"ರೆಂಬ ಹೆಸರಿನಿಂದಲೂ, ಶ್ರೀವಸುಧೇಂದ್ರತೀರ್ಥರ ಪೂರ್ವಾಶ್ರಮ ಕಿರಿಯ ತಮ್ಮಂದಿರಾದ ಶ್ರೀಲಕ್ಷ್ಮೀನಾರಾಯಣಾಚಾರ್ಯರು ಶ್ರೀಭುವನೇಂದ್ರತೀರ್ಥರೆಂಬ ಅಭಿಧಾನದಿಂದಲೂ ಕ್ರಮವಾಗಿ ಮಹಾಸಂಸ್ಥಾನಾಧಿಪತ್ಯವನ್ನು ವಹಿಸಿ ವೇದಾಂತ ಸಾಮ್ರಾಜ್ಯವನ್ನಾಳಿದರು.

ಶ್ರೀವರದೇಂದ್ರತೀರ್ಥರು ಪೂನಕ ನಗರದಲ್ಲಿ (ಪೂಣೆಪಟ್ಟಣ) ಶ್ರೀಜಯರಾಮಾಚಾರ್ಯರ (ಶ್ರೀಧೀರೇಂದ್ರತೀರ್ಥರ ಪೂರ್ವಾಶ್ರಮ) ಸಾಚಿವ್ಯದಲ್ಲಿ ಪೇಶ್ವೆಯ ಸಂಸ್ಥಾನದ ಆಸ್ಥಾನ ವಿದ್ವಾಂಸರೂ ಮುಖ್ಯ ನ್ಯಾಯಾಧೀಶರೂ ಆಗಿದ್ದ ಶ್ರೀರಾಮಾಶಾಸ್ತ್ರಿ ಪ್ರಭುಣೆ ಎಂಬ ಅಪ್ರತಿಮ ತಾರ್ಕಿಕ ವೈಯಾಕರಣರನ್ನು ಪಣಬಂಧಕ್ರಮದಿಂದ ವಾದದಲ್ಲಿ ಸೋಲಿಸಿ ಅವರ ಅರಮನೆಯನ್ನು ಪಣ್ಯವಾಗಿ ಪಡೆದರು. ಶ್ರೀವರದೇಂದ್ರತೀರ್ಥರು ಪೇಶ್ವೆ ಸರಕಾರದ ವಿದ್ಯಾದಾನದ ಉಂಬಳಿಗ್ರಾಮಗಳನ್ನು ಸ್ವೀಕರಿಸಿ ಪುಣ್ಯಪತ್ತನದಲ್ಲಿಯೇ ಪಾಠಪ್ರವಚನ-ಸತ್‌ಸಿದ್ಧಾಂತದ ಪ್ರಚಾರಗಳನ್ನು ಮಾಡುತ್ತ ಮುಂದೆ ಆ ಅರಮನೆಯಲ್ಲಿಯೇ ವೃಂದಾವನಸ್ಥರಾದರು. ಅವರ ವೃಂದಾವನವು ಈಗಲೂ ಬಹು ವೈಭವದಿಂದ ನಿತ್ಯಪೂಜೋತ್ಸವಗಳನ್ನು ಸ್ವೀಕರಿಸುತ್ತ ಭಕ್ತರಿಗೆ ಅಭೀಷ್ಟಗಳನ್ನು ಸಲ್ಲಿಸುತ್ತ ಲೋಕಪೂಜ್ಯವಾಗಿದೆ. ಶ್ರೀಧೀರೇಂದ್ರತೀರ್ಥರು ಶ್ರೀಮೂಲರಾಮಪೂಜಾ-ರಾಧನಾದಿಗಳಿಂದ ಮಹಾಸಂಸ್ಥಾನವನ್ನು ಕೆಲಕಾಲ ನಿರ್ವಹಿಸಿ ಮಹಾವಿರಕ್ತರಾಗಿ ತಮ್ಮ ಪ್ರಿಯಶಿಷ್ಯರಾದ ಶ್ರೀಭುವನೇಂದ್ರತೀರ್ಥರಿಗೆ ಮಹಾಸಂಸ್ಥಾನವನ್ನು ವಹಿಸಿಕೊಟ್ಟು ವರದಾನದೀತೀರದಲ್ಲಿರುವ ಹೊಸರಿತ್ತಿ ಕ್ಷೇತ್ರದಲ್ಲಿ ವಾಸವಾಗಿದ್ದು ಪಾಠಪ್ರವಚನ ತಪೋನುಷ್ಠಾನ ಶ್ರೀಹರಿಧ್ಯಾನರತರಾಗಿ ಕೊನೆಗೆ ಅಲ್ಲಿಯೇ ವೃಂದಾವನಸ್ಥರಾದರು. ಇವರು ಅನೇಕ ಗ್ರಂಥಗಳನ್ನು ರಚಿಸಿರುವುದಲ್ಲದೇ ಗುರುಗುಣಸ್ತವನಕ್ಕೆ ಅತ್ಯಂತ ಪ್ರೌಢವಾದ ವ್ಯಾಖ್ಯಾನವನ್ನು ತಮ್ಮ ಪೂರ್ವಾಶ್ರಮದಲ್ಲಿಯೇ ರಚಿಸಿದ್ದಾರೆ. ಈ ಮಹನೀಯರ ವ್ಯಾಖ್ಯಾನದ ಕನ್ನಡಾನುವಾದವೇ ಪ್ರಕಟವಾಗುತ್ತಿರುವ ಈ ಗ್ರಂಥವಾಗಿದೆ. ಈಗಲೂ ಶ್ರೀಧೀರೇಂದ್ರತೀರ್ಥರು ಅನನ್ಯ ಭಕ್ತಿಯಿಂದ ಸೇವೆಮಾಡುವ

ಭಕ್ತರಿಗೆ ಸಕಲಾಭೀಷ್ಟಗಳನ್ನು ಪೂರೈಸುತ್ತ ಪ್ರತಿಮಂತ್ರಾಲಯಪ್ರಭುಗಳಂತೆ ನಿತ್ಯ ಪೂಜೋತ್ಸವಗಳನ್ನು ಕೈಗೊಳ್ಳುತ್ತಾ ವಿರಾಜಮಾನರಾಗಿದ್ದಾರೆ.

ಶ್ರೀಭುವನೇಂದ್ರತೀರ್ಥರ ತರುವಾಯ ಈ ಮಹಾಪೀಠದ ಪೀಳಿಗೆಯು ಇಂತಿದೆ. ಶ್ರೀಭುವನೇಂದ್ರತೀರ್ಥರು, ಶ್ರೀಸುಬೋಧೇಂದ್ರತೀರ್ಥರು, ಶ್ರೀಸುಜನೇಂದ್ರತೀರ್ಥರು ಶ್ರೀಸುಜ್ಞಾನೇಂದ್ರತೀರ್ಥರು, ಶ್ರೀಸುಧರ್ಮೇಂದ್ರತೀರ್ಥರು ಶ್ರೀಸುಗುಣೇಂದ್ರತೀರ್ಥರು, ಶ್ರೀಸುಪ್ರಜ್ಞೇಂದ್ರತೀರ್ಥರು, ಶ್ರೀಸುಕೃತೀಂದ್ರತೀರ್ಥರು, ಶ್ರೀಸುಶೀಲೇಂದ್ರತೀರ್ಥರು, ಶ್ರೀಸುವ್ರತೀಂದ್ರತೀರ್ಥರು, ಶ್ರೀಸುಯಮೀಂದ್ರತೀರ್ಥರು. ಈ ರೀತಿಯಾಗಿ ಶ್ರೀರಾಘವೇಂದ್ರ-ಗುರುಸಾರ್ವಭೌಮರ ತರುವಾಯ ಶ್ರೀಯೋಗೀಂದ್ರತೀರ್ಥರಿಂದ ಆರಂಭವಾಗಿ ಹತ್ತೊಂಭತ್ತು ಜನ ಯತಿವರ್ಯರು ಪೀಠಾಧಿಪತ್ಯವನ್ನು ವಹಿಸಿ ಶ್ರೀಮದಾಚಾರ್ಯರ ಜಗದ್ಗುರು ವೇದಾಂತ ಸಾಮ್ರಾಜ್ಯಾಧಿಪತ್ಯವನ್ನಾಳಿದರು. ಈಗ ಶ್ರೀಮದಾಚಾರ್ಯರ ಆ ದಿಗ್ವಿಜಯ ವಿದ್ಯಾಸಿಂಹಾಸನದಲ್ಲಿ ಪರಮಪೂಜ್ಯ ಶ್ರೀಮತ್ಸುಜಯೀಂದ್ರತೀರ್ಥ ಶ್ರೀಪಾದಂಗಳವರು ವಿರಾಜಮಾನರಾಗಿದ್ದಾರೆ. ಮೇಲ್ಕಂಡ ಮಹಾನುಭಾವರುಗಳು ತತ್ವಶಾಸ್ತ್ರಕ್ಕೆ ಮಾಡಿದ ಮಹೋಪಕಾರವನ್ನು ಇಲ್ಲಿ ಸಂಕ್ಷೇಪವಾಗಿ ದಿಗ್ದರ್ಶನ ಮಾಡುತ್ತೇವೆ.

ಶ್ರೀವೇದವ್ಯಾಸದೇವರಿಂದ ಆರಂಭಮಾಡಿ ಶ್ರೀರಾಘವೇಂದ್ರತೀರ್ಥ ಶ್ರೀಪಾದಂಗಳವರ ಕಾಲದ ಅವಧಿಯಲ್ಲಿ ತತ್ವಶಾಸ್ತ್ರದ ಬೆಳವಣಿಗೆಯ ಕ್ರಮವನ್ನು ಶ್ರೀವಾದೀಂದ್ರತೀರ್ಥರು 'ಗುರುಗುಣಸ್ತವನ'ದಲ್ಲಿ ಬಹು ಸ್ವಾರಸ್ಯವಾಗಿ ಶಾಸ್ತ್ರೀಯವಾಗಿ ಈ ಕೆಳಗಿನ ಶ್ಲೋಕದಲ್ಲಿ ಸಂಗ್ರಹಿಸಿದ್ದಾರೆ.

> "ವ್ಯಾಸೇನ ವ್ಯುಪ್ತಬೀಜಃ ಶ್ರುತಿಭುವಿ ಭಗವತ್ಪಾದಲಬ್ಧಾಂಕುರಶ್ರೀಃ
> ಪ್ರತ್ನೈರೀಷತ್ಪ್ರಭಿನ್ನೋಽಜನಿ ಜಯಮುನಿನಾ ಸಮ್ಯಗುದ್ಭಿನ್ನಶಾಖಃ ।
> ಮೌನೀಶವ್ಯಾಸರಾಜಾದುದಿತಕಿಸಲಯಃ ಪುಷ್ಪಿತೋಽಯಂ ಜಯೀಂದ್ರಾತ್
> ಅದ್ಯ ಶ್ರೀರಾಘವೇಂದ್ರಾದ್ವಿಲಸತಿ ಫಲಿತೋ ಮಧ್ವಸಿದ್ಧಾಂತಶಾಖೀ ॥"

ಅಪೌರುಷೇಯ ಅನಾದಿನಿತ್ಯ ಅನಂತವೇದರಾಶಿಗಳ ಸಾರವನ್ನು ಗ್ರಹಿಸಲಿಕ್ಕೆ ಶ್ರೀವೇದವ್ಯಾಸರು ಬ್ರಹ್ಮಸೂತ್ರಗಳನ್ನು ರಚಿಸಿದರು. ನೆಲದಲ್ಲಿ ಬೀಜ ಊರಿದರೆ ಮೊಳಕೆಯೊಡೆದು ಚಿಗಿತು ಟಿಸಿಲೊಡೆದು ಚಿಗುರೆಲೆಗಳನ್ನು ಹೊಂದಿ ಹೂಗಳನ್ನು ಬಿಟ್ಟು ಫಲಗಳನ್ನು ಕೊಡುವ ದೊಡ್ಡ ಮರವಾಗುವಂತೆ ಈ ಶ್ರುತಿಕ್ಷೇತ್ರದಲ್ಲಿ ನಟ್ಟಿ ಬ್ರಹ್ಮಸೂತ್ರಗಳೆಂಬ ಬೀಜದಿಂದ ಮಧ್ವಸಿದ್ಧಾಂತವೆಂಬ ಮಹಾವೃಕ್ಷವು ಬೆಳೆದು ಫಲಿತವಾಗಿದೆಯೆಂದು ಶ್ರೀವಾದೀಂದ್ರತೀರ್ಥರು ಒಳ್ಳೆಯ ಸ್ವಾರಸ್ಯಪೂರ್ಣವಾದ ರೂಪಕ ಕ್ರಮದಿಂದ ತತ್ವಶಾಸ್ತ್ರದ-ವೈದಿಕ ಸಿದ್ಧಾಂತದ ಪ್ರಫುಲ್ಲತೆಯನ್ನು ಮಾರ್ಮಿಕವಾಗಿ

ಚಿತ್ರಿಸಿದ್ದಾರೆ. ಈ ರೀತಿಯಾಗಿ ತತ್ವಜ್ಞಾನದ ಉತ್ಕ್ರಾಂತಿಯ ಚಿತ್ರವನ್ನು ಐತಿಹಾಸಿಕವಾಗಿ ತಿಳಿಸುವ ಪ್ರಾಚೀನಾಚಾರ್ಯರಲ್ಲಿ ಶ್ರೀವಾದೀಂದ್ರತೀರ್ಥರನ್ನು ಬಿಟ್ಟರೆ ಬೇರೆ ಯಾವ ವಿದ್ವಾಂಸರೂ ನಮ್ಮ ದೃಷ್ಟಿಪಥದಲ್ಲಿ ತೋರುವುದಿಲ್ಲ. ಈ ವಿವರಣೆಯಲ್ಲಿ ಅವರು ಮುಖ್ಯವಾಗಿ ಏಳು ಘಟ್ಟಗಳನ್ನು ಕಲ್ಪಿಸಿದ್ದಾರೆ – ೧) ಶ್ರೀವೇದವ್ಯಾಸರು, ೨) ಶ್ರೀಮದಾನಂದತೀರ್ಥಭಗವತ್ಪಾದರು, ೩) ಪ್ರತ್ನ (ಪ್ರಾಚೀನಾಚಾರ್ಯರು), ೪) ಶ್ರೀಜಯತೀರ್ಥರು, ೫) ಶ್ರೀವ್ಯಾಸತೀರ್ಥರು, ೬) ಶ್ರೀವಿಜಯೀಂದ್ರತೀರ್ಥರು, ೭) ಶ್ರೀರಾಘವೇಂದ್ರತೀರ್ಥರು. ಈ ಮಹಾನುಭಾವರು ಆ ಆ ಕಾಲದ ತತ್ವಜ್ಞಾನವನ್ನು ಪ್ರತಿನಿಧೀಕರಿಸುವ ಶ್ರೇಷ್ಠವ್ಯಕ್ತಿಗಳೆಂದು ಭಾವಿಸಬೇಕು.

ಮುಖ್ಯವಾಗಿ ಶ್ರೀವಾದೀಂದ್ರತೀರ್ಥರು ಗುರುಗುಣಸ್ತವನದಲ್ಲಿ ಶ್ರೀರಾಘವೇಂದ್ರ ಗುರುಸಾರ್ವಭೌಮರ ಕೃತಿಗಳ ಮಹಿಮೆಯನ್ನು ವರ್ಣಿಸುವ ಮುಖ್ಯೋದ್ದೇಶವನ್ನು ಇಟ್ಟುಕೊಂಡಿದ್ದಾರೆ. ಅದಕ್ಕೆ ಉಪೋದ್ಘಾತರೂಪವಾಗಿ, ಅವರಿಗಿಂತ ಪೂರ್ವದಲ್ಲಿ ಆಗಿಹೋಗಿದ್ದ ಶ್ರೀಜಯತೀರ್ಥರು, ಶ್ರೀವ್ಯಾಸತೀರ್ಥರು ಶ್ರೀವಿಜಯೀಂದ್ರತೀರ್ಥರು ಮೊದಲಾದ ವಿದ್ವಾಂಸರುಗಳ ಗ್ರಂಥಗಳನ್ನು ವಿವೇಚಿಸಿ ಅವುಗಳ ಮಹತ್ವವನ್ನು ಬಣ್ಣಿಸಿದ್ದಾರೆ. ಇದರಲ್ಲಿ ಆ ಆ ಆಚಾರ್ಯರ ವಿಶಿಷ್ಟ ಉಪಕಾರವನ್ನು ಹೇತುಗರ್ಭ ವಿಶೇಷಣಗಳಿಂದ ಸೂಚಿಸಿದ್ದಾರೆ. ಶ್ರೀಮದಾನಂದತೀರ್ಥಭಗವತ್ಪಾದರು ಶ್ರೀವೇದವ್ಯಾಸ-ಪ್ರಣೀತವಾದ ವೇದಾರ್ಥನಿರ್ಣಾಯಕ ಬ್ರಹ್ಮಮೀಮಾಂಸಾಶಾಸ್ತ್ರದ ನಿಗೂಢಾಭಿಪ್ರಾಯ-ವನ್ನು ಕಂಡುಹಿಡಿದು ಭಾಷ್ಯ-ಅನುವ್ಯಾಖ್ಯಾನಾದಿ ಗ್ರಂಥಗಳಿಂದ ಸಜ್ಜನರ ಉದ್ಧಾರಕ್ಕಾಗಿ ಪ್ರಕಾಶಗೊಳಿಸಿದ್ದಾರೆ. ಶ್ರೀಜಯತೀರ್ಥರು ಆಚಾರ್ಯರ ಭಾಷ್ಯಾದಿ ಗ್ರಂಥಗಳ ಭಾವವನ್ನು ತತ್ವಪ್ರಕಾಶಿಕಾ-ನ್ಯಾಯಸುಧಾದಿ ಪ್ರೌಢಪ್ರಬಂಧಗಳಿಂದ ವಿಶದಪಡಿಸಿದ್ದಾರೆ. ಶ್ರೀವಿಬುಧೇಂದ್ರತೀರ್ಥರು ಮಾಯಾಸಿದ್ಧಾಂತವನ್ನು ಖಂಡಿಸಿ ಮಧ್ವಸಿದ್ಧಾಂತವನ್ನು ಪ್ರತಿಷ್ಠೆಗೊಳಿಸಿದ್ದಾರೆ. ಆಚಾರ್ಯರ ಸತ್ಸಂಪ್ರದಾಯವನ್ನು ಅನೂಚಾನವಾಗಿ ನಡೆಸಿಕೊಂಡುಬಂದಿದ್ದ ಶ್ರೀವಿಬುಧೇಂದ್ರತೀರ್ಥರು ಶ್ರೀಲಕ್ಷ್ಮೀನಾರಾಯಣಮುನಿಗಳಿಗೆ (ಶ್ರೀಪಾದರಾಜತೀರ್ಥರು) ವಿದ್ಯಾಗುರುಗಳಾದರು. ಶ್ರೀವಿಬುಧೇಂದ್ರತೀರ್ಥರೇ ಶ್ರೀಜಯತೀರ್ಥರ ತರುವಾಯ ಅಂದಿನಿಂದ ಇಂದಿನವರೆಗೆ ಎಲ್ಲೆಡೆ ನಲಿಯುತ್ತಿರುವ ತತ್ವಜ್ಞಾನಗಂಗೆಯನ್ನು, ದೇವಗಂಗೆಯನ್ನು ಶಿರದಲ್ಲಿ ಧರಿಸಿ ಲೋಕಾನುಗ್ರಹಕ್ಕಾಗಿ ಬೇರೆ ಬೇರೆ ಮುಖವಾಗಿ ಹರಿಯಬಿಟ್ಟ ಮಹರುದ್ರದೇವರಂತೆ, ನಾನಾ ಮುಖವಾಗಿ ಹೊರಹೊಮ್ಮಿಸಿ ದ್ವೈತಸಿದ್ಧಾಂತದ ಅಡೆತಡೆಯಿಲ್ಲದ ಬೆಳವಣಿಗೆ ಪ್ರಸಾರಗಳಿಗೆ ಮುಖ್ಯ ಕಾರಣರಾಗಿಯೂ ಶ್ರೀಗುರುರಾಜರು ಅಲಂಕರಿಸಿದ ಶ್ರೀಮದಾಚಾರ್ಯಪೀಠದ ಪರಂಪರೆಯ ಮೂಲಪುರುಷರಾಗಿಯೂ ರಾರಾಜಿಸಿದ್ದಾರೆ. 'ವಾಗ್ವಜ್ರ' ಮೊದಲಾದ ಉದ್ಗ್ರಂಥಗಳನ್ನು ರಚಿಸಿ ಪ್ರಸಿದ್ಧರಾದ ಶ್ರೀಲಕ್ಷ್ಮೀನಾರಾಯಣ ಮುನಿಗಳು (ಶ್ರೀಪಾದರಾಜರು)

ಶ್ರೀವ್ಯಾಸತೀರ್ಥರ ವಿದ್ಯಾಗುರುಗಳು. ಶ್ರೀವ್ಯಾಸತೀರ್ಥರು ತತ್ವಶಾಸ್ತ್ರಕ್ಕೆ ಮಾಡಿದ ಅಮೋಘವಾದ ಸೇವೆಯನ್ನು ಶ್ರೀವಾದೀಂದ್ರತೀರ್ಥರು ಬಹು ಸ್ವಾರಸ್ಯವಾಗಿ ವರ್ಣಿಸಿದ್ದಾರೆ. 'ವ್ಯಾಸತ್ರಯ'ವೆಂದು ಪ್ರಸಿದ್ಧವಾದ ತಾತ್ಪರ್ಯಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವ ಗ್ರಂಥಗಳು ಮಧ್ವಸಿದ್ಧಾಂತವೆಂಬ ನರಸಿಂಹದೇವರ ಮೂರುಕಣ್ಣುಗಳು. ನರಸಿಂಹದೇವರ ಕಟಾಕ್ಷ ಕ್ಷೇಪಮಾತ್ರದಿಂದ ಹಿರಣ್ಯಕಶಿಪುದೈತ್ಯನು ಸಂಹೃತನಾಗಿದ್ದಲ್ಲದೆ ದೈತ್ಯಬಾಲಕ ಪ್ರಹ್ಲಾದನು ಉಜ್ಜೀವಿತನಾಗಿ ಪಟ್ಟಾಭಿಷಕ್ತನಾದನು. ಅದರಂತೆ ವ್ಯಾಸತ್ರಯದಿಂದ ಮಾಯಾವಾದಿಗಳು ತಾರ್ಕಿಕರು ಮೊದಲಾದ ವಿರುದ್ಧವಾದಿಗಳ ದರ್ಪವು ಅಡಗಿ, ದ್ವೈತಸಿದ್ಧಾಂತವು ತೇಜಸ್ವಿಯಾಗಿ ಗೌರವಸ್ಥಾನದಲ್ಲಿ ವೈದಿಕಸಿದ್ಧಾಂತವೆಂದು ಸ್ಥಾಪಿಸಲ್ಪಟ್ಟಿತು. ಶ್ರೀವ್ಯಾಸತೀರ್ಥರ ಶಿಷ್ಯರಾದ ಶ್ರೀವಿಜಯೀಂದ್ರತೀರ್ಥರು ಒಂದುನೂರ ನಾಲ್ಕು ಪ್ರಬಂಧಗಳನ್ನು ರಚಿಸಿ ಶ್ರೀಅಪ್ಪಯ್ಯದೀಕ್ಷಿತರೇ ಮೊದಲಾದ ಶೈವಾದ್ವೈತಿಗಳನ್ನು ವಾದದಲ್ಲಿಯೂ ಗ್ರಂಥರಚನೆಯಲ್ಲಿಯೂ ಸೋಲಿಸಿ ಜಗತ್ತಿನಲ್ಲಿ ಜೇಗೀಯಮಾನ ಕೀರ್ತಿಶಾಲಿಗಳಾದರು. ಇವರು ಅರವತ್ತುನಾಲ್ಕು ಕಲೆಗಳಲ್ಲಿ ಪರಿಣತಿಯನ್ನು ಪಡೆದಿದ್ದರು. ಇವರನ್ನು ಶ್ರೀವಾದೀಂದ್ರತೀರ್ಥರು **'ಚಾತುರ್ಯೈಕಾಕೃತಿ'**ಗಳೆಂದು ಬಣ್ಣಿಸಿದ್ದಾರೆ. ಇವರ ಶಿಷ್ಯರಾದ ಶ್ರೀಸುಧೀಂದ್ರತೀರ್ಥರು ಕರ್ಣಾಟಕರಾಜರಿಂದ ಅನೇಕಸಲ "ರತ್ನಾಭಿಷೇಕ"ವನ್ನು ಮಾಡಿಸಿಕೊಂಡ **'ವ್ಯಾಧೂತಾವದ್ಯಹೃದ್ಯಾಮಿತಕೃತಿರಚನಾಚಾರುಚಾತುರ್ಯ'**ರು, ಅನೇಕ ವೇದಾಂತ, ಸಾಹಿತ್ಯ, ನಾಟಕಾಲಂಕಾರ ಗ್ರಂಥಗಳನ್ನು ರಚಿಸಿ **"ವಿಶ್ರುತೋಽಹಮಿವ ವಾದಸಂಗರೇ"** (ರಾಘವೇಂದ್ರವಿಜಯ) ಎಂಬಂತೆ ವಾದಸಂಗರಜಯಿಗಳೆಂದು ಪ್ರಸಿದ್ಧರಾದರು. **"... ಶಿಷ್ಯ ಶ್ರೀವಿಜಯೀಂದ್ರಸಂಯಮಿಮಣೇಃ ಷಡ್ದರ್ಶನೀದರ್ಶಿನಃ । ತತ್ಕಾರುಣ್ಯಸಮೇಧಿತಾಖಿಲಕಲೋತ್ಕರ್ಷಸ್ಸುಧೀಂದ್ರೋ ಯತಿಃ ॥"** ಎಂಬ ತರ್ಕತಾಂಡವ ವ್ಯಾಖ್ಯಾನ ಪದ್ಯದಿಂದಲೂ, ಶ್ರೀರಾಘವೇಂದ್ರವಿಜಯದ **"ಸಗದ್ಯಪದ್ಯನಿರ್ಮಾಣವಿದ್ಯಾಯಾಃ ಪ್ರಥಮಂ ಪದಂ"** ಎಂಬ ಶ್ಲೋಕದಿಂದಲೂ ಅವರ ಪಾಂಡಿತ್ಯವು ವ್ಯಕ್ತವಾಗುತ್ತದೆ. ಇವರ ಶಿಷ್ಯರೇ ಪ್ರಕೃತ ಗ್ರಂಥ ನಾಯಕರಾದ ಅನಿತರಸಾಧಾರಣ ಟಿಪ್ಪಣಿಗಳನ್ನು ರಚಿಸಿ ಮಧ್ವಸಿದ್ಧಾಂತದ ರಹಸ್ಯಗಳನ್ನು ಪ್ರಕಾಶಿಸಿ ಸಜ್ಜನೋದ್ಧಾರವನ್ನು ಮಾಡಿದ ಮಹಾನುಭಾವರಾದ ಶ್ರೀರಾಘವೇಂದ್ರಗುರುಸಾರ್ವಭೌಮರು.

ಶ್ರೀರಾಘವೇಂದ್ರತೀರ್ಥರ ಮಹಿಮೆಯನ್ನು ಹೇಳಲು ಯಾರು ತಾನೆ ಶಕ್ತರು ? (**"ವಂಧ್ಯೈವಾತಃ ಪ್ರತಿಜ್ಞಾ ತದತುಲನಿಖಿಲಾಶ್ಚರ್ಯಚರ್ಯಾಭಿಧಾನೇ । ಸ್ಥಾನೇಽಥಾಪಿ ಕ್ವಚಿತ್ಸ್ಯಾತ್ ಇಹ ಪುನರುದಧಿಸ್ನಾನಸಂಕಲ್ಪವತ್ಸಾ ॥"**) ಆದರೂ ಅಪಾರವಾದ ಸಮುದ್ರದಲ್ಲಿ ಸ್ನಾನ ಮಾಡುವ ಸಂಕಲ್ಪವು ತದೇಕದೇಶದಲ್ಲಿ ಹೇಗೆ ಸಫಲವಾಗುವುದೋ ಅದರಂತೆ ಶ್ರೀಗುರುಸಾರ್ವಭೌಮರ ಮಹಿಮೆಯ ಕೆಲವೊಂದು ಅಂಶವನ್ನು ಕುರಿತು

ಯಥಾಮತಿ ವರ್ಣಿಸಬಹುದೆಂದು ಶ್ರೀವಾದೀಂದ್ರತೀರ್ಥರು ಉದ್ಗಾರ ತೆಗೆದಿದ್ದಾರೆ (೧೧). ಮಹಾಪಂಡಿತರು, ಗುರುರಾಜರ ಗ್ರಂಥಗಳನ್ನು ಆಲೋಚನಮಾಡಿ ತಲೆದೂಗುತ್ತ ಇವರು "ಅಖಿಲಕಲಾಮೂರ್ತಿ"ಗಳೆಂದು ಮುಕ್ತಕಂಠದಿಂದ ಹೊಗಳುತ್ತಾರೆ. ಇವರ ಗ್ರಂಥಗಳಿಂದ ಪ್ರಾಚೀನಾಚಾರ್ಯರ ಪ್ರಬಂಧಗಳು ಉಪಚಯವನ್ನು ಹೊಂದಿದವು (೧೦). ಕರ್ಮಯೋಗ-ಜ್ಞಾನಯೋಗಗಳೆಂಬ ಮೋಕ್ಷೋಪಾಯಗಳು ಫಲಿಸಬೇಕಾದರೆ ಈ ಗುರುಗಳ ಪ್ರಸಾದವು ಅತ್ಯವಶ್ಯವಾದದ್ದು (೧೨).

ಶ್ರೀನಾರಾಯಣಪಂಡಿತಾಚಾರ್ಯರ "ಅಣುಮಧ್ವವಿಜಯ"ವೆಂಬ ಸ್ರಗ್ಧರಾವೃತ್ತದಲ್ಲಿ ನಿಬದ್ಧವಾದ ಗ್ರಂಥಕ್ಕೆ ಶ್ರೀಗುರುರಾಜರು ಪೂರ್ವಾಶ್ರಮದಲ್ಲಿ ಟೀಕೆಯನ್ನು ಬರೆದು ಶ್ರೀಪೂರ್ಣಪ್ರಜ್ಞರ ಪ್ರಸಾದದಿಂದ ವೇದಾಂತ ಸಾಮ್ರಾಜ್ಯದ ಆಧಿಪತ್ಯವನ್ನು ಪಡೆದರು (೧೬). ವಾಯ್ವವತಾರಿಗಳಾದ ಶ್ರೀಮಧ್ವಾಚಾರ್ಯರ ಪೂರ್ಣಾನುಗ್ರಹಕ್ಕೆ ಪಾತ್ರರಾದರು. ಶ್ರೀಜಯತೀರ್ಥರ 'ವಾದಾವಲೀ' ಎಂಬ ಗ್ರಂಥಕ್ಕೆ 'ಪ್ರಕಾಶ'ವೆಂಬ ಟಿಪ್ಪಣಿಯನ್ನು ಬರೆದು ದುರ್ಮತ (ಮಿಥ್ಯಾವಾದ)ವೆಂಬ ಅರಣ್ಯಕ್ಕೆ ಅದನ್ನು 'ದಾವಾಲಿ'ಯನ್ನಾಗಿ ಮಾಡಿದರು. ಅಂದರೆ ಕಾಡುಗಿಚ್ಚಿನಿಂದ ಅರಣ್ಯವು ಸುಟ್ಟು ನಾಶವಾಗುವಂತೆ 'ಪ್ರಕಾಶ' ಸಮೇತವಾದ 'ವಾದಾವಲಿ'ಯು ದುರ್ಮತವನ್ನು ನಿರ್ಮೂಲ ನಾಶಮಾಡಿತೆಂದರ್ಥ (೧೭). ಶ್ರೀವ್ಯಾಸತೀರ್ಥರ ತಾತ್ಪರ್ಯಚಂದ್ರಿಕೆಯು ಕೂಡ ಶ್ರೀರಾಘವೇಂದ್ರ ಗುರುಗಳ 'ಪ್ರಕಾಶ'-ವೆಂಬ ಟಿಪ್ಪಣಿಯನ್ನು ಹೊಂದಿ ಬುಧರ ಹೃದಯದಲ್ಲಿ ವಿಶೇಷ ಜ್ಞಾನಪ್ರಕಾಶವನ್ನು ಬೀರಲು ಸಮರ್ಥವಾಯಿತು (೧೮). ಶ್ರೀಜಯತೀರ್ಥರ 'ನ್ಯಾಯಸುಧೆ'ಯು ಇವರ 'ಪರಿಮಳ'ವೆಂಬ ಟಿಪ್ಪಣಿಯಿಂದ ವಿದ್ವಜ್ಜನರಲ್ಲಿ ಸುಗಂಧವನ್ನು ಬೀರಿತು (೧೯). ಶ್ರೀಜಯತೀರ್ಥರ ತತ್ವಪ್ರಕಾಶಿಕೆಗೆ ಬರೆದ 'ಭಾವದೀಪ'ವೆಂಬ ಟಿಪ್ಪಣಿಯು ಅವರ ಹಾರ್ದವನ್ನು ಪ್ರಕಾಶಗೊಳಿಸಿತು (೨೦). 'ನ್ಯಾಯ ಮುಕ್ತಾವಳಿ'ಯಲ್ಲಿ ಬ್ರಹ್ಮಸೂತ್ರ ನ್ಯಾಯಗಳನ್ನು ವಿಷಯ, ವಿಶಯ (ಸಂಶಯ), ಪೂರ್ವಪಕ್ಷ, ಉತ್ತರಪಕ್ಷ (ಸಿದ್ಧಾಂತ), ಪ್ರಯೋಜನ (ಉಭಯತ್ರ) ಎಂಬ ಪಂಚ ಅಂಗಗಳ ವಿವರಣೆಯಿಂದ ಅಧಿಕರಣ-ಶುದ್ಧಿಯನ್ನು ತಿಳಿಸಿ ವಿದ್ವಜ್ಜನರಿಗೆ ಪರಮೋಪಕಾರವನ್ನು ಮಾಡಿದರು (೨೧). ಆಚಾರ್ಯರ 'ಅಣುಭಾಷ್ಯ'ಕ್ಕೆ ಜಯತೀರ್ಥರು ಟೀಕೆಯನ್ನು ರಚಿಸಲಿಲ್ಲ. ಗುರುರಾಜರ ಅನುಗ್ರಹಕ್ಕಾಗಿಯೆ ಅದನ್ನು ಬಿಟ್ಟಂತೆ ತೋರುತ್ತದೆ. ಗುರುರಾಜರು 'ತತ್ವಮಂಜರೀ' ಎಂಬ ಟೀಕೆಯನ್ನು ಬರೆದು ಅಣುಭಾಷ್ಯದ ಭಾವವನ್ನು ತಿಳಿಸಿದ್ದಾರೆ. ನಾರಾಯಣ ಪಂಡಿತಾಚಾರ್ಯರು ಸುಮಧ್ವವಿಜಯದಲ್ಲಿ **"ಅನಂತೋऽರ್ಥಃ ಪ್ರಕಟಿತಃ ತ್ವಯಾऽಣೌ ಭಾಷ್ಯಸಂಗ್ರಹೇ"**, ಎಂದು ಅಣುಭಾಷ್ಯದ ಗಾಂಭೀರ್ಯವನ್ನು ಹೊಗಳಿದ್ದಾರೆ. ಕೇವಲ ೩೨ ಅನುಷ್ಟುಭ್ ಶ್ಲೋಕಗಳಲ್ಲಿ ಬ್ರಹ್ಮಮೀಮಾಂಸಾಶಾಸ್ತ್ರದ ನಾಲ್ಕು ಅಧ್ಯಾಯಗಳ ಸಾರವನ್ನು ಅಡಗಿಸಿದ ಶ್ರೀಮದಾಚಾರ್ಯರ ಅದ್ಭುತ ಸಾಮರ್ಥ್ಯವನ್ನು ಶ್ರೀಗುರುರಾಜರು

ಅದರ ಒಂದೊಂದು ಪದವನ್ನು ವಿವರಿಸುತ್ತ ಅಧಿಕರಣಸೂತ್ರಗಳ ಭಾವವನ್ನು ಎತ್ತಿ ತೆಗೆದು ತೋರಿಸಿದ್ದಾರೆ (೨೨). ತಂತ್ರದೀಪಿಕಾ ಎಂಬ ಅಮೌಲ್ಯವಾದ ಸೂತ್ರಾರ್ಥ ವಿವರಣರೂಪ ಪ್ರಬಂಧದಲ್ಲಿ **"ಗುರುಪಾದಕೃತೋಽಪ್ಯಸ್ತಿ ಸಂಗ್ರಹೋ ಹೃದಯಂಗಮಃ । ಪ್ರಸ್ಥಾನಭೇದಪ್ರೋಕ್ತಾರ್ಥಸಂಗ್ರಹೋಽಥಾಪ್ಯಯಂ ಮಮ ॥"** ಎಂದು ತಾವೇ ಹೇಳಿದಂತೆ ಭಾಷ್ಯ, ಅನುವ್ಯಾಖ್ಯಾನ, ನ್ಯಾಯವಿವರಣ, ಸನ್ಯಾಯರತ್ನಾವಲಿ, ತತ್ವಪ್ರದೀಪ, ಚಂದ್ರಿಕಾ, ನ್ಯಾಯಾಮೃತ, ಉಪಸಂಹಾರವಿಜಯ, ನ್ಯಾಯಮೌಕ್ತಿಕ-ಮಾಲಾ ಮೊದಲಾದ ಪ್ರೌಢಗ್ರಂಥಗಳಲ್ಲಿ ಕೊಟ್ಟ ಭಿನ್ನ ಭಿನ್ನ ರೀತಿಯ ಸೂತ್ರಾರ್ಥಗಳನ್ನು ಕ್ರೋಢೀಕರಿಸಿ ಸಮನ್ವಯಮಾಡಿ ತಮ್ಮ ಅದ್ಭುತವಾದ ಕ್ರೋಢೀಕರಣ ಸಾಮರ್ಥ್ಯವನ್ನು ಪ್ರಕಟಿಸಿದ್ದಾರೆ (೨೩). ಶ್ರೀಮದಾಚಾರ್ಯರು ತಂತ್ರಸಾರಸಂಗ್ರಹವೆಂಬ ಗ್ರಂಥದಲ್ಲಿ ಉದ್ಧರಿಸಿದ ಸಾರಭೂತವಾದ ಮಂತ್ರಗಳ ಅರ್ಥವನ್ನು "ಮಂತ್ರಾರ್ಥಮಂಜರೀ" ಎಂಬ ಗ್ರಂಥದಲ್ಲಿ ವಿವರಿಸಿದ್ದಾರೆ (೨೪). ಶ್ರೀಮದಾಚಾರ್ಯರ ಗೀತಾಭಾಷ್ಯ, ಗೀತಾತಾತ್ಪರ್ಯನಿರ್ಣಯ ಮತ್ತು ಶ್ರೀಜಯತೀರ್ಥರ ಪ್ರಮೇಯದೀಪಿಕಾ, ನ್ಯಾಯದೀಪ ಎಂಬ ಟೀಕೆಗಳು – ಇವುಗಳ ಭಾವವನ್ನು ಸಂಗ್ರಹಿಸಿ ಗುರುರಾಜರು ಗೀತಾರ್ಥ ಸಂಗ್ರಹವೆಂಬ ಅಮೌಲ್ಯವಾದ ಕೃತಿಯನ್ನು ರಚಿಸಿದ್ದಾರೆ (೨೫). ಇಷ್ಟಕ್ಕೆ ತೃಪ್ತರಾಗದೆ ಪ್ರಮೇಯದೀಪಿಕಾ, ನ್ಯಾಯದೀಪಿಕೆಗಳಿಗೆ ಟಿಪ್ಪಣಿಗಳನ್ನು ರಚಿಸಿ ಶ್ರೀಟೀಕಾಕೃತ್ಪಾದರ ವಿಶೇಷಸೇವೆಯನ್ನು ಮಾಡಿದ್ದಾರೆ (೨೬,೨೭). ತಮ್ಮ ಪೂರ್ವಾಶ್ರಮ ಮಕ್ಕಳಾದ ಶ್ರೀಲಕ್ಷ್ಮೀನಾರಾಯಣಾಚಾರ್ಯರು ರಚಿಸಿದ ಋಗ್ವ್ಯಾಖ್ಯಟೀಕಾವಿವರಣವು ಜಗತ್ತಿನಲ್ಲಿ ಪ್ರಚಯ ಹೊಂದಲೆಂದು ಅದನ್ನು ವಿಸ್ತಾರವಾಗಿ ವಿವರಿಸಿ "ಋಗರ್ಥ ಮಂಜರೀ" ಎಂಬ ಪ್ರಬಂಧವನ್ನು ರಚಿಸಿದರು (೨೮).

ಶ್ರೀವೇದವ್ಯಾಸರು ವೇದಗಳ ಅರ್ಥವನ್ನು ನಿರ್ಣಯಿಸಲಿಕ್ಕೆ ಬ್ರಹ್ಮಸೂತ್ರಗಳನ್ನು ರಚಿಸಿದರು. ಬ್ರಹ್ಮಸೂತ್ರಗಳಿಗೆ ಅನುಗುಣವಾಗಿ ಗುರುರಾಜರು ಪುರುಷಸೂಕ್ತಾದಿ ಪಂಚಸೂಕ್ತಗಳಿಗೆ (ಪಂಚಸೂಕ್ತಗಳು ಸಕಲವೇದಗಳ ಪ್ರತೀಕಗಳು) ವಿಶದವಾದ ವ್ಯಾಖ್ಯಾನವನ್ನು ಮಾಡಿ ಶ್ರೀವೇದವ್ಯಾಸರ ಅಭಿಪ್ರಾಯವನ್ನು ತಿಳಿಸಿ ಹೇಳಿದರು (೨೯). ಗುರುಗಳು ಉಪನಿಷತ್ ಖಂಡಾರ್ಥಗಳನ್ನು ರಚಿಸಿ ಉಪನಿಷತ್ಪ್ರಮೇಯಗಳು ಸುಲಭವಾಗಿ ಗ್ರಹಣವಾಗುವಂತೆ ಅನುಗ್ರಹಿಸಿದ್ದಾರೆ (೩೦). ಇದಲ್ಲದೆ ಮೂರು ವೇದಗಳಿಗೆ (ಋಕ್-ಯಜು-ಸಾಮ) ಭಾಷ್ಯವನ್ನು ರಚಿಸಿ ಬ್ರಹ್ಮಸೂತ್ರಗಳ ಸಹಾಯದಿಂದ ವೇದಾರ್ಥವನ್ನು ನಿರ್ಣಯಿಸಿದರು (೩೧). 'ವಾಕ್ಯಾನುರೋಧಿ ಪ್ರಕರಣ'ವೆಂದು ಮೀಮಾಂಸಾನ್ಯಾಯ **(ಶ್ರುತಿರ್ಲಿಂಗಂ ಸಮಾಖ್ಯಾ ಚ ವಾಕ್ಯಂ ಪ್ರಕರಣಂ ತಥಾ ...........।).** ಆದರೆ ಶ್ರೀರಾಘವೇಂದ್ರತೀರ್ಥರು ಆಚಾರ್ಯರ ಪ್ರಕರಣಗಳಿಗನುಗುಣವಾಗಿ ಟಿಪ್ಪಣಿ(ವಾಕ್ಯ)-ಗಳನ್ನು ರಚಿಸಿ ಆಚಾರ್ಯರ ದಶಪ್ರಕರಣಗಳ ಭಾವವನ್ನು ಸ್ಪಷ್ಟಗೊಳಿಸಿದ್ದಾರೆ (೩೨).

ತರ್ಕತಾಂಡವಕ್ಕೆ ಶ್ರೀವಿಜಯೀಂದ್ರತೀರ್ಥರು "ಯುಕ್ತಿರತ್ನಾಕರ" ಎಂಬ ಅಮೌಲ್ಯ ವ್ಯಾಖ್ಯಾನವನ್ನು ರಚಿಸಿದ್ದಾರೆ. ಅದರಂತೆ ಅವರ ಶಿಷ್ಯರಾದ ಶ್ರೀಸುಧೀಂದ್ರತೀರ್ಥರು "ಸದ್ಯುಕ್ತಿರತ್ನಾವಲಿ" ಎಂಬ ವ್ಯಾಖ್ಯಾನವನ್ನು ರಚಿಸಿರುತ್ತಾರೆ. ಅವರ ಪ್ರೀತಿಯ ಕುಮಾರಕರಾದ ಶ್ರೀಮಂತ್ರಾಲಯ ಗುರುರಾಜರು ಅದಕ್ಕೆ (ತರ್ಕತಾಂಡವಕ್ಕೆ) ಸ್ವತಂತ್ರ-ವಾದ ಅಮೌಲ್ಯ ವ್ಯಾಖ್ಯಾನವನ್ನು ರಚಿಸಿ ತಾರ್ಕಿಕಚಿಂತಾಮಣಿಕಾರನ ಪ್ರಕಾಶವನ್ನು ನಿಸ್ತೇಜಗೊಳಿಸಿದ್ದಾರೆ ಮತ್ತು ಬ್ರಹ್ಮತರ್ಕವೆಂಬ ತರ್ಕಶಾಸ್ತ್ರಕ್ಕೆ ಚಿಂತಾಮಣಿಯಂತೆ ಪ್ರಕಾಶವನ್ನು ಒದಗಿಸಿದ್ದಾರೆ (೩೩). ಅವರು ನ್ಯಾಯಾಮೃತಕ್ಕೆ ಟಿಪ್ಪಣಿಯನ್ನು ಬರೆಯದೆ ಇದ್ದುದು ಅವರ ಅಪಕರ್ಷವಲ್ಲ. ಅದರಿಂದ ಅವರು ಶ್ರೀವಿಜಯೀಂದ್ರತೀರ್ಥರ ನ್ಯಾಯಾಮೃತ ಟಿಪ್ಪಣಿ "ಆಮೋದತ್ರಯ"ಕ್ಕೆ ಹೆಚ್ಚು ಪ್ರಚಯವನ್ನುಕೊಡಿಸುವ ಉದ್ದೇಶದಿಂದ ವ್ಯಾಖ್ಯಾನವನ್ನು ಮಾಡಲಿಲ್ಲ. ಇದರಿಂದ ಗುರುಸೇವೆಯೇ ಅವರ ಮುಖ್ಯ ಸಂಕಲ್ಪವಾಗಿತ್ತು. ಇದರಿಂದ ಗುರುರಾಜರ ಕೀರ್ತಿಯು ಹಬ್ಬಿತೇ ವಿನಾ ಕುಂದಲಿಲ್ಲ. ಶ್ರೀದಾಶರಥಿ ರಾಮಚಂದ್ರನು ತಂದೆಯಾದ ಶ್ರೀದಶರಥರಾಜನ ವಚನಕ್ಕೆ ಗೌರವವನ್ನು ಕೊಟ್ಟು ವನವಾಸಕ್ಕೆ ಹೋಗಿಬಂದನು. ಭರತರಾಜನ ವಿಜ್ಞಾಪನೆಯನ್ನು ಆದರಿಸದೇ ರಾಜ್ಯವನ್ನು ಸ್ವೀಕರಿಸಲಿಲ್ಲವೆಂದ ಮಾತ್ರಕ್ಕೆ ಶ್ರೀರಾಮಚಂದ್ರನು ಅಖಿಲಭುವನಾಧಿಪತಿಯಲ್ಲವೆ ! ಅವನ ಕೀರ್ತಿಯು ಹೆಚ್ಚಾಗಿ ಬೆಳೆಯಲಿಲ್ಲವೆ ? (೩೪). ಶ್ರೀಕೃಷ್ಣಚಾರಿತ್ರಮಂಜರೀ, ಶ್ರೀರಾಮಚಾರಿತ್ರಮಂಜರೀ ಎಂಬ ಚಿಕ್ಕಗ್ರಂಥಗಳಲ್ಲಿ ಭಾರತ-ಭಾಗವತ ರಾಮಾಯಣಗಳ ಸಾರವನ್ನು ಸಂಗ್ರಹಿಸಿದ ಸಾಮರ್ಥ್ಯವು ಶ್ರೀರಾಘವೇಂದ್ರ-ಸ್ವಾಮಿಗಳಿಗಲ್ಲದೆ ಅನ್ಯರಿಗೆ ಸಾಧ್ಯವಿಲ್ಲ (೩೫). "ಭಾಟ್ಟಸಂಗ್ರಹ" ಎಂಬ ಗ್ರಂಥದಲ್ಲಿ ಜೈಮಿನೀ ಮೀಮಾಂಸಾಸೂತ್ರಗಳ ಅರ್ಥವನ್ನು ಬಹುಸುಲಭವಾಗಿ ಗ್ರಹಣವಾಗುವಂತೆ (ಬ್ರಹ್ಮಸೂತ್ರಗಳ ಅರ್ಥವನ್ನು ತಂತ್ರದೀಪಿಕೆಯಲ್ಲಿ ಕೊಟ್ಟಂತೆ) ವಿವರಿಸಿದ್ದಾರೆ (೩೬).

"ನತ್ವಾ ಧರ್ಮಂ ವೇದಗಮ್ಯಂ ಜೈಮಿನ್ಯಾದಿಮುನೀನಪಿ ।
ಕರೋಮಿ ಬಾಲಬೋಧಾಯ ಭಟ್ಟೋಕ್ತನ್ಯಾಯಸಂಗ್ರಹಮ್ ॥"

ಈ ರೀತಿಯಾಗಿ ಗುರುಸಾರ್ವಭೌಮರೆಂಬ ಅನ್ವರ್ಥಕನಾಮವುಳ್ಳ ಶ್ರೀರಾಘವೇಂದ್ರ-ತೀರ್ಥರು ಸಮಸ್ತವೇದ, ಉಪನಿಷತ್ತು, ಪೂರ್ವೋತ್ತರ-ಮೀಮಾಂಸಾ ಶಾಸ್ತ್ರಗಳು, ರಾಮಾಯಣ-ಮಹಾಭಾರತಾದಿ ಇತಿಹಾಸಗಳು ಇವೇ ಮೊದಲಾದ ಸಮಗ್ರಶಾಸ್ತ್ರದ ಸಾರವನ್ನು ಮೂಲಕೋಶಗಳಿಗೆ ವ್ಯಾಖ್ಯಾನವನ್ನು ಬರೆದು ಪ್ರಕಾಶಗೊಳಿಸಿದ್ದಾರೆ ಮತ್ತು ಪ್ರಾಚೀನ ಆಚಾರ್ಯರಾದ ಶ್ರೀತ್ರಿವಿಕ್ರಮಪಂಡಿತಾಚಾರ್ಯರು, ಶ್ರೀಪದ್ಮನಾಭತೀರ್ಥರು, ಶ್ರೀಜಯತೀರ್ಥರು, ಶ್ರೀವ್ಯಾಸರಾಜತೀರ್ಥರು, ಶ್ರೀವಿಜಯೀಂದ್ರತೀರ್ಥರು, ಶ್ರೀಸುಧೀಂದ್ರ-ತೀರ್ಥರು ಮೊದಲಾದ ಮಹಾವಿದ್ವಾಂಸರ ಕೃತಿಗಳು ಶ್ರೀಗುರುಸಾರ್ವಭೌಮರ

ಟೀಕೆಟಿಪ್ಪಣಿಗಳಿಂದ ಪಂಡಿತಗೋಷ್ಠಿಯಲ್ಲಿ ಹೆಚ್ಚು ಪ್ರಚಯ ಹೊಂದಿದವೆಂಬುದನ್ನು ಈ ಮೇಲಿನ ಚರ್ಚೆಯಿಂದ ಅರಿತುಕೊಳ್ಳಬಹುದು. ಶ್ರೀಗುರುರಾಜರ ಗ್ರಂಥರಚನಾಶೈಲಿ-ಯನ್ನು ಶ್ರೀವಾದೀಂದ್ರಗುರುಚರಣರು ಬಹು ಕುಶಲತೆಯಿಂದ ಅವರ ಗ್ರಂಥಗಳ ಸೂಕ್ಷ್ಮಪರೀಕ್ಷೆಯಿಂದ ಗೊತ್ತು ಮಾಡಿಕೊಂಡಿದ್ದಾರೆ.

**ಚಿತ್ತೇ ನಾಽಯುಕ್ತಮರ್ಥಂ ಕಲಯತಿ ಸಹಸಾ ನಾಭಿಧತ್ತೇ ನ ಸದ್ಭಿಃ**
**ಸಾಕಂ ಮೀಮಾಂಸತೇ ವಾ ನ ಲಿಖತಿ ವಚಸೋದ್ಘಾಟಯತ್ಯಾಶಯಂ ಸ್ವಮ್ ।**
**ಉಕ್ತಂ ನೋ ವಕ್ತಿ ಭೂಯಃ ಕ್ವಚಿದಪಿ ಲಿಖಿತಂ ನೈವ ನಿರ್ಮಾರ್ಷ್ಟಿ ತಸ್ಮಾ-**
**ದಸ್ಮಾಭಿಸ್ಸತ್ಪ್ರಬಂಧಪ್ರಣಯನವಿಷಯೇ ಸ್ತೂಯತೇ ರಾಘವೇಂದ್ರಃ ॥**

ಗುರುರಾಜರು ಅಸಂಗತವಾದ ಅರ್ಥವನ್ನು ಮನಸ್ಸಿನಲ್ಲಿ ಕೂಡ ತರುವುದಿಲ್ಲ. ಝುಡಿತಿ ತಮ್ಮ ಅರ್ಥವನ್ನು ಹೇಳುವುದಿಲ್ಲ. ಸಜ್ಜನರೊಡನೆ ಆಕ್ಷೇಪಪೂರ್ವಕವಾಗಿ ವಾದ ಹಾಕುವುದಿಲ್ಲ. ತಮ್ಮ ಅಭಿಪ್ರಾಯವನ್ನು ಉತ್ತಾನವಾಗಿ ಹೇಳುವುದಿಲ್ಲ. ಪುನರುಕ್ತಿ ದೋಷವಿಲ್ಲ. ಒಮ್ಮೆ ಬರೆದದ್ದನ್ನು ಅಳಿಸಿ ತಿದ್ದುವವರಲ್ಲ (ಅಷ್ಟು ದೃಢಜ್ಞಾನ ಇವರದು). ಆದ್ದರಿಂದ ನಮಗೆ ಗುರುರಾಜರು ಇಂಥ ಪ್ರಬಂಧರಚನಾ ಕೌಶಲವನ್ನು ಕೊಡಲೆಂದು ಸ್ತುತಿಸುತ್ತೇವೆ.

ಇಂಥ ಮಹಾನುಭಾವರ ಪ್ರಸಾದವಿಲ್ಲದೆ ಮೋಕ್ಷಮಾರ್ಗಗಳಾದ ಕರ್ಮಯೋಗ ಜ್ಞಾನಯೋಗಗಳು ಫಲಕಾರಿಯಾಗಲಾರವೆಂದು ಶ್ರೀವಾದೀಂದ್ರತೀರ್ಥರು ಗುರುಗುಣಸ್ತವನ-ದಲ್ಲಿ ಘಂಟಾಘೋಷವಾಗಿ ಸಾರಿದ್ದಾರೆ.

ಶ್ರೀಗುರುರಾಜರ ತರುವಾಯದಲ್ಲಿ ತತ್ತ್ವಶಾಸ್ತ್ರವು ಬೆಳೆದುಬಂದ ಕ್ರಮವನ್ನು ಸಂಕ್ಷೇಪವಾಗಿ ಇಲ್ಲಿ ವಿವರಿಸುವುದು ಸಂಗತವಾಗಿದೆ. ಅದರಲ್ಲಿ ಎರಡು ಅಥವಾ ಮೂರು ಯುಗಗಳನ್ನು ಕಲ್ಪಿಸಬಹುದು. ೧) ಶ್ರೀಸುಮತೀಂದ್ರತೀರ್ಥ-ಶ್ರೀವಾದೀಂದ್ರತೀರ್ಥರ ಯುಗ, ೨) ಶ್ರೀವರದೇಂದ್ರತೀರ್ಥರು, ಶ್ರೀಧೀರೇಂದ್ರತೀರ್ಥ-ಶ್ರೀಭುವನೇಂದ್ರತೀರ್ಥ-ಶ್ರೀಸುಜನೇಂದ್ರತೀರ್ಥರ ಯುಗ – ಇವೆರಡು ಘಟ್ಟಗಳಲ್ಲಿ ಪಣಬಂಧಪೂರ್ವಕ ವಾದಗಳು ಜರುಗುತ್ತಿದ್ದವು. ಹಿಂದಕ್ಕೆ ಶ್ರೀಮದಾಚಾರ್ಯರ ತರುವಾಯದಲ್ಲಿ ಶ್ರೀಅಕ್ಷೋಭ್ಯತೀರ್ಥ-ಶ್ರೀಜಯತೀರ್ಥರು ಶ್ರೀವಿದ್ಯಾರಣ್ಯ ಮೊದಲಾದ ವಾದಿಗಳನ್ನು ನಿಗ್ರಹಿಸಿದರು. ಶ್ರೀವ್ಯಾಸತೀರ್ಥ-ಶ್ರೀವಿಜಯೀಂದ್ರತೀರ್ಥರು ಗದಾಧರ, ಪಕ್ಷಧರ ಮಿಶ್ರ ಮೊದಲಾದ ತಾರ್ಕಿಕರನ್ನಲ್ಲದೇ, ತತ್ಕಾಲದ ಅದ್ವೈತವಾದಿಗಳನ್ನೂ, ಶ್ರೀಅಪ್ಪಯ್ಯದೀಕ್ಷಿತ ಮೊದಲಾದ ಶೈವಾದ್ವೈತರನ್ನೂ ಖಂಡಿಸಿ ಶ್ರೀಮಧ್ವಸಿದ್ಧಾಂತವನ್ನು ಭದ್ರಾಸನದ ಮೇಲೆ ಸ್ಥಾಪಿಸಿದರು. ಅವರ ತರುವಾಯದಲ್ಲಿ ಶ್ರೀರಾಘವೇಂದ್ರ ಗುರುಗಳು ಪರಪಕ್ಷಖಂಡನೆ-ಯಲ್ಲದೆ ಸ್ವಸಿದ್ಧಾಂತದ ಶಾಸ್ತ್ರೀಯವಾದ ವಿವೇಚನೆಯಿಂದ, ಸಂಗ್ರಹ ಗ್ರಂಥಗಳಿಂದ

ಗುಹ್ಯಪ್ರಮೇಯಗಳನ್ನು ಕ್ರೋಡೀಕರಿಸಿ ಹೇಳಿದರು. ಅವರ ಅಮೋಘವಾದ ಅನುಗ್ರಹದಿಂದ ವಿಶದೀಕರಣ ಕ್ರೋಡೀಕರಣ ಪದ್ಧತಿಯು ಮುಂದಿನ ವಿವೃತಿಕಾರರಲ್ಲಿ ತಲೆದೋರಿತು. ಭಾವರತ್ನಕೋಶ, ಮೀಮಾಂಸಾನಯದರ್ಪಣ, ಮೀಮಾಂಸಾನ್ಯಾಯ-ಅಧಿಕರಣರತ್ನಮಾಲಾ, ಸಿದ್ಧಾಂತನ್ಯಾಯಸಂಗ್ರಹ ಮೊದಲಾದ ಗ್ರಂಥಗಳು, ರಚಿತವಾಗಿ ಸಮಾಸವ್ಯಾಸನ್ಯಾಯದಿಂದ ವಿಷಯಗಳು ಚರ್ಚಿಸಲ್ಪಟ್ಟವು. ಶ್ರೀವ್ಯಾಸತೀರ್ಥ-ಶ್ರೀವಿಜಯೀಂದ್ರತೀರ್ಥರ ಕಾಲದಲ್ಲಿ ಆಚಾರ್ಯರ ದ್ವೈತಸಿದ್ಧಾಂತವು ಉತ್ತರ-ದಕ್ಷಿಣ ಭಾರತಗಳಲ್ಲಿ ಪ್ರಚಾರ ಹೊಂದಿತು. ಬಂಗಾಲದ ಚೈತನ್ಯಪಂಥವು ಮಧ್ವಸಿದ್ಧಾಂತದ ಪ್ರಭಾವವನ್ನು ತೋರಿಸುತ್ತದೆ. ಆ ತರುವಾಯದಲ್ಲಿ ಮಧ್ವಸಿದ್ಧಾಂತದ ಉತ್ತರ ದಿಗ್ವಿಜಯವು ಶ್ರೀವರದೇಂದ್ರತೀರ್ಥರು ಮತ್ತು ಶ್ರೀಧೀರೇಂದ್ರತೀರ್ಥರ ಕಾಲದಲ್ಲಿ ವೈಭವದಿಂದ ಮೆರೆಯಿತು. ಪುಣ್ಯಪತ್ತನದಲ್ಲಿ ಶ್ರೀವರದೇಂದ್ರತೀರ್ಥರ ಅಧಿಷ್ಠಾನವು ಇದಕ್ಕೆ ಸಾಕ್ಷಿಯಾಗಿದೆ.

೪

ಪಣಬಂಧದಿಂದ ವಾದಮಾಡಿ ವಾದಿಗಳನ್ನು ನಿಗ್ರಹಿಸುವ ಯುಗವು ಮುಗಿದು ಹೋಯಿತು. ಈಗ ಪ್ರಮಾಣಪ್ರತಿಷ್ಠೆ ಇಲ್ಲದೆ ಸ್ವೈರಪ್ರತಿಭೆಯಿಂದ ಅತೀಂದ್ರಿಯ ತತ್ತ್ವವಿಚಾರ ಮಾಡುವ ಯುಗವು ಪ್ರಾರಂಭವಾಗಿದೆ. ಮ್ಲೇಂಛರ ಸಮ್ಮಿಶ್ರಜ್ಞಾನದ ಸಾಂಕರ್ಯದಿಂದ ಸಜ್ಜನರ ಬುದ್ಧಿಭೇದವಾಗುವ ಸಮಯವಿದು. ಈಗ ವೇದಪ್ರಣಿಹಿತ-ವಾದ ಧರ್ಮ ಮತ್ತು ತತ್ತ್ವಜ್ಞಾನಗಳನ್ನು ಕಾಯ್ದುಕೊಳ್ಳುವುದು ಪರಕಾಷ್ಠವಾಗಿದೆ. ಅದನ್ನು ರಕ್ಷಿಸುವ ಮಹಾಕಾರ್ಯವನ್ನು ಶ್ರೀಗುರುರಾಜರ ಪೀಠದಲ್ಲಿ ವಿರಾಜಮಾನ-ರಾಗಿದ್ದ ಶ್ರೀಸುಶೀಲೇಂದ್ರತೀರ್ಥರು ಒಳ್ಳೆಯ ಸಮರ್ಥರೀತಿಯಿಂದ ಸಮಯಕ್ಕೆ ತಕ್ಕ ವಿಹಿತೋಪಾಯಗಳಿಂದ ನೆರವೇರಿಸಿದರು. ಶ್ರೀಗುರುಸಾರ್ವಭೌಮರ ಸನ್ನಿಧಿಯು ಅವರ ಕಾರ್ಯಕ್ಷೇತ್ರದ ಕೇಂದ್ರವಾಗಿದ್ದಿತು. ಶ್ರೀಸುಶೀಲೇಂದ್ರತೀರ್ಥರ ಅಭಿವೃದ್ಧಿ ಯೋಜನೆಯು ಶೀಘ್ರದಲ್ಲಿಯೇ ಅದ್ಭುತವಾದ ಯಶಸ್ಸನ್ನು ಪಡೆಯಿತು. ಮಧ್ವಸಿದ್ಧಾಂತ ಪ್ರಚಾರ-ದಾರ್ಢ್ಯಗಳಿಗೆ ಅವರು ಮಾಡಿದ ಕಾರ್ಯಭಾರವು ಅತ್ಯಪೂರ್ವವಾಗಿದೆ. ಅದನ್ನು ಇಲ್ಲಿ ಸಂಕ್ಷೇಪವಾಗಿ ತಿಳಿಸುವೆವು.

೧. ಶ್ರೀಮಧ್ವಸಿದ್ಧಾಂತಾಧ್ಯಯನ ಪ್ರಚಾರಕ್ಕೆ ಶ್ರೀಸಮೀರಸಮಯ ಸಂವರ್ಧಿನೀ ಸಭೆಯನ್ನು ಸ್ಥಾಪಿಸಿದರು. ಇದರ ವಾರ್ಷಿಕ ಅಧಿವೇಶನದಲ್ಲಿ ಶ್ರೀಮಂತ್ರಾಲಯಕ್ಷೇತ್ರ ಮತ್ತಿತರ ಸ್ಥಳಗಳಲ್ಲಿ ವಿದ್ವತ್ಸಭೆ, ವಿದ್ಯಾರ್ಥಿಗಳ ಪರೀಕ್ಷೆ, ವಾಕ್ಯಾರ್ಥ-ವಿಚಾರಗೋಷ್ಠಿಗಳು ನಡೆಯುತ್ತಿದ್ದುದರಿಂದ ಅವರ ನೇತೃತ್ವದಲ್ಲಿ ಸಿದ್ಧಾಂತ ವ್ಯಾಸಂಗವು ನೂರ್ಮಡಿಯಾಗಿ ಬೆಳೆಯಿತು. ಶ್ರೀನ್ಯಾಯಸುಧಾ, ಚಂದ್ರಿಕಾ, ನ್ಯಾಯಾಮೃತ,

ತರ್ಕತಾಂಡವ ಮೊದಲಾದ ಉದ್ಗ್ರಂಥಗಳನ್ನು ಪಠನಪಾಠನ ಮಾಡುವ ವಿದ್ವಾಂಸರ ತಂಡವು ನಿರ್ಮಾಣವಾಯಿತು. ವಿದ್ವಾಂಸರಿಗೂ ವಿದ್ಯಾರ್ಥಿಗಳಿಗೂ ವಿಶಿಷ್ಟ ಉತ್ತೇಜಕ ಸಂಭಾವನೆ ಮರ್ಯಾದೆಗಳನ್ನು ಕೊಟ್ಟು ಶ್ರೀಸುಶೀಲೇಂದ್ರತೀರ್ಥರು ಶ್ರೀಗುರುಸಾರ್ವಭೌಮರ ವಿದ್ಯಾಪೀಠವನ್ನು ಆಚಂದ್ರಾರ್ಕವಾಗಿ ಬೆಳಗುವಂತೆ ಮಾಡಿದರು.

೨. ಶ್ರೀಗುರುಸಾರ್ವಭೌಮರ ವೃಂದಾವನ ಸನ್ನಿಧಿಯಲ್ಲಿ ಮಂತ್ರಾಲಯದಲ್ಲಿ ಆರಾಧನಾಮಹೋತ್ಸವವನ್ನು ಆಗಮೋಕ್ತ ರೀತಿಯಲ್ಲಿ ಜರುಗಿಸಲು ಆರಂಭಿಸಿದರು. ಅನೇಕ ಸಹಸ್ರಸಂಖ್ಯೆಯಲ್ಲಿ ಭಕ್ತರು ಏಕತ್ರ ಸೇರಿ ಸಭಾಕಾರ್ಯಕಲಾಪಗಳ ಸಂಪರ್ಕದಿಂದಲೂ, ತೀರ್ಥಪ್ರಸಾದಸೇವನೆಯಿಂದಲೂ ಧರ್ಮಜಾಗ್ರತಿಯನ್ನು ಪಡೆಯ ಹತ್ತಿದರು.

೩. ಶ್ರೀಸುಶೀಲೇಂದ್ರತೀರ್ಥರು ತೀರ್ಥಕ್ಷೇತ್ರ ಸಂಚಾರಕ್ರಮದಿಂದ ಎಲ್ಲ ಗ್ರಾಮಪಟ್ಟಣಗಳಲ್ಲಿದ್ದ ಭಕ್ತರನ್ನು ಕಂಡು ಸದಾಚಾರಸತ್ಸಿದ್ಧಾಂತಗಳ ಪ್ರವಚನವನ್ನು ಮಾಡಿ-ಮಾಡಿಸುತ್ತಿದ್ದರು. ಇದರಿಂದ ಶೀಘ್ರದಲ್ಲಿ ಧರ್ಮಜಾಗ್ರತಿಯಾಯಿತು. ಇದೇ ಪದ್ಧತಿಯನ್ನು ಅವರ ಶಿಷ್ಯರಾದ ಶ್ರೀಸುವ್ರತೀಂದ್ರತೀರ್ಥ ಶ್ರೀಪಾದಂಗಳು ಅನುಸರಿಸಿದರು. ಅವರು ತ್ರಿಮತಸ್ಥಪಂಡಿತರ ಷಡ್ದರ್ಶಿನೀ ವಿದ್ವತ್ಸಭೆಯನ್ನು ಕುಂಭಕೋಣ, ಮತ್ತಿತರಕಡೆ ಜರುಗಿಸಿ ಸಿದ್ಧಾಂತದ ಭೇರಿಯನ್ನು ಮೊಳಗಿಸಿ ಅಜರಾಮರರಾದರು.

ಶ್ರೀಸುವ್ರತೀಂದ್ರತೀರ್ಥರ ಕರಕಮಲಸಂಜಾತರಾದ "ಶ್ರೀಗುರುರಾಜರ ಉಭಯ-ವಂಶಾಬ್ಧಿಚಂದ್ರಮ"ರಾದ ಶ್ರೀಸುಯಮೀಂದ್ರತೀರ್ಥ ಶ್ರೀಪಾದಂಗಳವರು, ಶ್ರೀಸುಮತೀಂದ್ರ-ತೀರ್ಥರಂತೆಯೇ ೩೩ ವರ್ಷಗಳ (೧೯೩೩ರಿಂದ ೧೯೬೬ ರ ವರೆಗೆ) ಕಾಲ ಅವ್ಯಾಹತವಾಗಿ ವೇದಾಂತಸಾಮ್ರಾಜ್ಯವನ್ನಾಳಿದರು. ಅವರ ಆಳಿಕೆಯಲ್ಲಿ ಶ್ರೀಮಂತ್ರಾಲಯಕ್ಷೇತ್ರವು ಸರ್ವತೋಮುಖ ಅಭಿವೃದ್ಧಿ ಪಡೆದು ಶ್ರೀಗುರುಸಾರ್ವಭೌಮರ ಮಹಾಮಹಿಮೆ ಜಗದ್ವಿಖ್ಯಾತವಾಗಿ ದೇಶದೇಶಗಳಿಂದ ಸಹಸ್ರಾರು ಭಕ್ತಜನರು ಶ್ರೀಗುರುರಾಜರಿಗೆ ಶರಣಾಗತರಾಗಿ ಬಂದು ಅವರ ಪರಮಾನುಗ್ರಹದಿಂದ ವಾಂಛಿತಾರ್ಥಗಳನ್ನೂ ತತ್ತ್ವ-ಧರ್ಮ ಜಾಗ್ರತಿಯನ್ನೂ ಪಡೆಯುವಂತಾಯಿತು. ಮತ್ತು ಈ ಅವಧಿಯಲ್ಲಿ ತತ್ತ್ವಜ್ಞಾನದ ಪ್ರಚಾರವು ದೃಢವಾದ ತಳಹದಿಯ ಮೇಲೆ ನಡೆಸಲ್ಪಟ್ಟಿತು. ಅವರು ಮಾಡಿದ ಕಾರ್ಯವಿಶೇಷಗಳನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುತ್ತೇವೆ.

೧. ಶ್ರೀಗುರುರಾಜರ ಬೃಂದಾವನ ಸನ್ನಿಧಿಯಲ್ಲಿಯೇ ನಿಂತು ವೈದಿಕ-ಲೌಕಿಕ ಆಡಳಿತಕ್ಕೆ ಒಂದು ಕಾರ್ಯಾಲಯವನ್ನು ಆರಂಭಿಸಿ ಶ್ರೀಮಠದ ಕಾರ್ಯವು ಚೊಕ್ಕವಾಗಿ ನಡೆಯುವಂತೆ ಮಾಡಿದರು. ಶ್ರೀರಾಯರ ದರ್ಶನಕ್ಕೆ ಮತ್ತು ಸೇವೆಗೆ ಬರತಕ್ಕ ಸಹಸ್ರಾರು ಜನ ಭಕ್ತರಿಗೆ ವಸತಿ ಮತ್ತು ತೀರ್ಥಪ್ರಸಾದಗಳ ಸೌಕರ್ಯವನ್ನು ಒದಗಿಸಿಕೊಟ್ಟು ನಿರಾಲೋಚನೆಯಿಂದ ಅವರು ಗುರುವರ್ಯರ ಸೇವೆಮಾಡಿ ಐಹಿಕಾಮುಷ್ಮಿಕ ಶ್ರೇಯಸ್ಸ

ಪಡೆಯಲೂ ಜನತೆಯಲ್ಲಿ ಶ್ರೀಹರಿಗುರುಭಕ್ತಿಗಳು ಅಂಕುರಿಸುವಂತೆಯೂ ಮಾಡಿದರು. ಅನೇಕ ಶಿಲಾಮಂಟಪ, ಕಟ್ಟಡಗಳನ್ನು ವಿಸ್ತರಿಸಿದರು.

೨. ಶಾಸ್ತ್ರ ಮತ್ತು ಸಿದ್ಧಾಂತಾಧ್ಯಯನಕ್ಕೆ ವೃಂದಾವನಸನ್ನಿಧಿಯಲ್ಲಿ ಶ್ರೀಗುರುಸಾರ್ವಭೌಮರ ಸಂಸ್ಕೃತಮಹಾಪಾಠಶಾಲೆಯನ್ನು ಸ್ಥಾಪಿಸಿ ಸಮರ್ಥರಾದ ವಿದ್ವಾಂಸರನ್ನು ಅಧ್ಯಾಪಕರನ್ನಾಗಿ ನೇಮಿಸಿ ವಿದ್ಯಾರ್ಥಿಗಳಿಗೆ ಶಿಷ್ಯವೃತ್ತಿಗಳನ್ನು ಕೊಟ್ಟು ವಿದ್ಯಾಪ್ರಸಾರಕ್ಕೆ ವ್ಯವಸ್ಥಿತವಾದ ಯೋಜನೆಯನ್ನು ಹಾಕಿಕೊಂಡು ಅದನ್ನು ಕೃತಿಪಥಕ್ಕೆ ಇಳಿಸಿದರು.

೩. ಶ್ರೀಗುರುರಾಜರ ಆರಾಧನೋತ್ಸವವನ್ನು ಸ್ವಗುರುಗಳ ಆದೇಶದಂತೆ ಸಪ್ತರಾತ್ರೋತ್ಸವವನ್ನಾಗಿ ಮಾಡಿ ಆಗಮೋಕ್ತವಿಧಾನಗಳಿಂದ ಪ್ರತಿನಿತ್ಯ ವಾಹನೋತ್ಸವ ಶಾಸ್ತ್ರಾರ್ಥವಿಚಾರಗಳಿಂದ ನಡೆಸಿದರು.

೪. ದೇಶದ ವಿವಿಧಕೇಂದ್ರಗಳಲ್ಲಿ ಶ್ರೀಗುರುರಾಜರ ಬೃಂದಾವನ ಪ್ರತಿಷ್ಠೆ ಮಾಡಿ ತನ್ಮೂಲಕ ಜನರಲ್ಲಿ ಹರಿಗುರುಭಕ್ತಿ-ಧರ್ಮ ಜಾಗೃತಿಯಾಗುವಂತೆ ಮಾಡಿದರು.

೫. ಎಲ್ಲಕ್ಕೂ ಮಹತ್ವವಾದ ಕಾರ್ಯವೆಂದರೆ ಶ್ರೀಸಮೀರಸಮಯಸಂವರ್ಧಿನೀ ಸಭೆಯನ್ನು ಬಲಪಡಿಸಿ ಪ್ರತಿವರ್ಷ ದೇಶವಿದೇಶಗಳಿಂದ ಪಂಡಿತಪ್ರಕಾಂಡರನ್ನು ಆಹ್ವಾನಿಸಿ ಉದ್ಗ್ರಂಥಗಳಲ್ಲಿ ಪರೀಕ್ಷೆ-ವಾಕ್ಯಾರ್ಥ, ಹಾಗೂ ವಿಚಾರಗೋಷ್ಠಿಗಳಿಂದ ಸಿದ್ಧಾಂತದ ಪ್ರಚಾರಮಾಡುತ್ತ ವಿಶಿಷ್ಟ ಪಂಡಿತರಿಗೆ ಶಹಲು-ಶಕಲಾತಿ, ಸ್ವರ್ಣಾಭರಣಪೂರ್ವಕ ಬಿರುದಾವಲಿ-ಸಂಭಾವನೆಗಳನ್ನು ದಯಪಾಲಿಸಿದರು ಮತ್ತು 'ಚಂದ್ರಿಕಾ ಪಾರಿತೋಷಕ'ವನ್ನು ಪ್ರತಿವರ್ಷ ವಿಚಾರಗೋಷ್ಠಿಯಲ್ಲಿ ಉತ್ತೀರ್ಣರಾದ ವಿದ್ವಾಂಸರಿಗೆ ಕೊಡುತ್ತಿದ್ದರು.

೬. ಅಷ್ಟೇ ಮಹತ್ವದ ಮತ್ತು ಸಮಯಕ್ಕೆ ಅತ್ಯಾವಶ್ಯಕವಾದ ಇನ್ನೊಂದು ಕಾರ್ಯವೆಂದರೆ "ಶ್ರೀಪರಿಮಳಗ್ರಂಥಸಂಗ್ರಹ ಸಂಶೋಧನ-ಪ್ರಕಾಶನಮಂದಿರ"ವನ್ನು ಸ್ಥಾಪಿಸಿದ್ದು ಮತ್ತು ಈ ಸಂಗ್ರಾಹಕ ಸಂಶೋಧನ-ಪ್ರಕಾಶನ ಕಾರ್ಯವನ್ನು ಸಮರ್ಥರಾದ "ವೇದಾಂತರತ್ನಂ" ಡಾ|| ಎಚ್.ಕೆ. ವೇದವ್ಯಾಸಾಚಾರ್ಯ M.A.,Ph.D. (ಹಿಂದಿನ ಶ್ರೀಪಾದಪುತ್ರರು – ಈಗ ದಿವಂಗತರು) ಮತ್ತು "ವಿದ್ಯಾವೈಭವ, ವೇದಾಂತ ಶಿರೋಮಣಿ", ಶ್ರೀ ರಾಜಾ ಎಸ್. ಗುರುರಾಜಾಚಾರ್ಯರಿಗೆ ಒಪ್ಪಿಸಿ ಮಹಾಶೀರ್ವಾದಗಳಿಂದ ಅನುಗ್ರಹಿಸಿದ್ದು. ಶ್ರೀಸುಯಮೀಂದ್ರತೀರ್ಥರ ಮಹಾಪೋಷಣೆಯಲ್ಲಿ ಈ ಸಂಸ್ಥೆಯು ೧೯೪೫ರಲ್ಲಿ ಉದಯ ಹೊಂದಿತು. ಮೊದಲಿನ ೯-೧೦ ವರ್ಷಗಳಲ್ಲಿ ಉಭಯ ಶ್ರೀಪಾದಪುತ್ರರು ಒಳ್ಳೆಯ ಉತ್ಸಾಹದಿಂದ ಶ್ರೀವಿಜಯೀಂದ್ರತೀರ್ಥ-ಶ್ರೀಸುಧೀಂದ್ರತೀರ್ಥ-ಶ್ರೀಸುಮತೀಂದ್ರತೀರ್ಥ-ಶ್ರೀವಾದೀಂದ್ರತೀರ್ಥರ ಮತ್ತು ಇತರ ಪ್ರಾಚೀನಾಚಾರ್ಯರುಗಳ ಅಮೌಲ್ಯವಾದ ಅನುಪಲಬ್ಧ ಅಪ್ರಕಾಶಿತ ಹಸ್ತಲಿಖಿತ ಹಾಗೂ

ತಾಲಾವಾಲಿ ಪ್ರತಿಗಳನ್ನು ಪರಿಶ್ರಮದಿಂದ ಸಂಗ್ರಹಿಸಿ ಸಂಶೋಧಿಸಿ ಪ್ರಕಾಶಿಸುವ ಕಾರ್ಯವನ್ನು ಆರಂಭಿಸಿದರು. ಆದರೆ ದುರ್ದೈವದಿಂದ ೧೯೫೪ ರಲ್ಲಿ ಡಾ|| ವೇದವ್ಯಾಸಾಚಾರ್ಯರು ತೀರಚಿಕ್ಕ ವಯಸ್ಸಿನಲ್ಲಿಯೇ ವೈಕುಂಠವಾಸಿಗಳಾದರು. ಸಂಸ್ಥೆಯ ಎಲ್ಲಾ ಭಾರವು ಒಬ್ಬೊಂಟಿಗರಾದ ಶ್ರೀ ರಾಜಾ ಎಸ್. ಗುರುರಾಜಾಚಾರ್ಯರ ಮೈಮೇಲೆ ಬಿದ್ದಿತು. ಆದರೂ ಆಚಾರ್ಯರು ಧೈರ್ಯಗುಂದದೆ ಹಿಮ್ಮೆಟ್ಟದೆ ಶ್ರೀಗುರುಸಾರ್ವಭೌಮರ ವಿಶೇಷಾನುಗ್ರಹದಿಂದಲೂ, ಶ್ರೀಸುಯಮೀಂದ್ರತೀರ್ಥರ ಅಮೃತಮಯಾಶೀರ್ವಾದ ಪ್ರೋತ್ಸಾಹಗಳ ಬಲದಿಂದಲೂ, ಶ್ರೀಯವರು ತಮಗೊಪ್ಪಿಸಿದ ತಾವು ಕೈಕೊಂಡ ಕಾರ್ಯವನ್ನು ಒಳ್ಳೆಯ ಉತ್ಸಾಹದಿಂದ ನಿರ್ವಹಿಸುತ್ತ ಬಂದಿದ್ದಾರೆ. ಅವರು ಗ್ರಂಥಪ್ರಕಾಶನ, ಸಿದ್ಧಾಂತ ಪ್ರಚಾರದ ಕಾರ್ಯದಲ್ಲಿ ಮಾಡಿರುವ ಸೇವೆಯು ಅಮೋಘವೂ ಅವಿಸ್ಮರಣೀಯವೂ ಆಗಿದೆ. ಶ್ರೀಗುರುರಾಜಾಚಾರ್ಯರು ಏಕಮಾತ್ರ ವ್ಯಕ್ತಿಯಾಗಿದ್ದರೂ ಒಂದು ದೊಡ್ಡ ಸಂಸ್ಥೆಯಂತೆ ಅಚ್ಚುಕಟ್ಟಾಗಿ ಕಾರ್ಯವನ್ನು ಮಾಡುತ್ತ ಬಂದಿದ್ದಾರೆ. ಆಚಾರ್ಯರ ತತ್ವಧರ್ಮಪ್ರಸಾರಬದ್ಧಾದರತೆ-ಸಹೃದಯತೆ ಮುಂತಾದ ಗುಣಗಳಿಂದ ಪ್ರೀತರಾದ ಉಭಯಭಾಷಾವಿಶಾರದರಾದ ಪಂಡಿತರುಗಳು ಈ ಸಂಸ್ಥೆಯ ಎಲ್ಲ ಚಟುವಟಿಕೆಗಳಿಗೂ ತಮ್ಮ ಪ್ರೇಮಪೂರ್ವಕ ಸಹಾಯಸಹಕಾರಗಳಿಂದ ಅವರ ಈ ಉತ್ತಮಕಾರ್ಯವು ಯಶಸ್ವಿಯಾಗಲು ನೆರವು ನೀಡುತ್ತಿದ್ದಾರೆ. ತಮ್ಮ ಕಾರ್ಯವು ಸುಲಭವಾಗಬೇಕೆಂದು ಆಚಾರ್ಯರು ಪ್ರಕಾಶನ ಮಂದಿರಕ್ಕಾಗಿ ಒಂದು ಸ್ವತಂತ್ರ ಮುದ್ರಣಾಲಯವನ್ನೂ ಆರಂಭಿಸಿದ್ದಾರೆ. ಇದರ ಜೊತೆಗೆ ಜನತೆಯಲ್ಲಿ ಸಿದ್ಧಾಂತ ಪ್ರಚಾರ–ಧರ್ಮಜಾಗ್ರತಿಗಾಗಿ "ಪರಿಮಳ" ಎಂಬ ಹೆಸರಿನ ಪ್ರೌಢಮಾಸಪತ್ರಿಕೆಯನ್ನು ೩೫ ವರ್ಷಗಳಿಂದ ನಡೆಸಿಕೊಂಡು ಬಂದಿದ್ದಾರೆ. ಮಾಧ್ವರಿಗೆಲ್ಲ ಇದು ಶಾಸ್ತ್ರಾರ್ಥ ವಿಚಾರಗಳುಳ್ಳ ಪ್ರೌಢಲೇಖನಗಳ ಪ್ರಸಾರಕ್ಕೆ ಉತ್ತಮ ಸಾಧನವಾಗಿದೆ. ಇದರ ಆದರ್ಶದಲ್ಲಿ ಬೇರೆ ಪತ್ರಿಕೆಗಳು ಇತ್ತೀಚೆಗೆ ಹೊರಟಿದ್ದರೂ ಪ್ರೌಢಿಮೆಯಲ್ಲಿ ಇದನ್ನು ಅವು ಸರಿಗಟ್ಟಲಾರವೆಂದು ಧಾರಾಳವಾಗಿ ಹೇಳಬಹುದು. ಈ ರೀತಿಯಾಗಿ ಶ್ರೀಸುಯಮೀಂದ್ರ-ತೀರ್ಥರ ಆಳಿಕೆಯಲ್ಲಿ ಪಾಠಪ್ರವಚನ, ವಾಕ್ಯಾರ್ಥ ವಿಚಾರ, ಗ್ರಂಥಪ್ರಕಾಶನ ತತ್ವಪ್ರಚಾರಗಳು ಶೀಘ್ರಗತಿಯಲ್ಲಿ ಉಚ್ಚಸ್ಥಾನವನ್ನು ಪಡೆದವು.

ಶ್ರೀಸುಯಮೀಂದ್ರತೀರ್ಥ ಶ್ರೀಪಾದಂಗಳವರು ವೃಂದಾವನಸ್ಥರಾದ ಮೇಲೆ ಅವರ ಶಿಷ್ಯರಾದ ಜಗದ್ಗುರು ಸಿಂಹಾಸನದಲ್ಲಿ ಸದ್ಯ ವಿರಾಜಮಾನರಾದ ಶ್ರೀಸುಜಯೀಂದ್ರ-ತೀರ್ಥ ಶ್ರೀಪಾದಂಗಳವರು ತಮ್ಮ ಗುರುಗಳ ಆದೇಶದಂತೆ ಅವರು ಹಾಕಿಕೊಟ್ಟ ಕ್ರಮದಲ್ಲಿ ಜ್ಞಾನಪ್ರಸಾರ, ಅಭಿವೃದ್ಧಿ ಕಾರ್ಯಗಳನ್ನು ಒಳ್ಳೆಯ ಉತ್ಸಾಹದಿಂದ ಮಾಡುತ್ತಿದ್ದಾರೆ. ಗುರುಗಳು ಪ್ರಾರಂಭಿಸಿದ್ದ ಅನೇಕ ಯೋಜನೆಗಳನ್ನು ಕಾರ್ಯರೂಪಕ್ಕೆ ತರುತ್ತಾ ಶ್ರೀಗುರುರಾಜರ ಸೇವೆಯನ್ನು ಅಮೋಘವಾಗಿ ಮಾಡುತ್ತಿದ್ದಾರೆ.

ಪ್ರಕೃತ ಗುರುಗುಣಸ್ತವನದ ಮಹತ್ವವನ್ನು ನಾವು ಮೇಲೆ ಸಂಕ್ಷೇಪವಾಗಿ ತಿಳಿಸಿದ್ದೇವೆ. ಅದಕ್ಕೆ ಶ್ರೀವಾದೀಂದ್ರತೀರ್ಥರ ಪೂರ್ವಾಶ್ರಮದ ಮಕ್ಕಳಾದ ಶ್ರೀಜಯರಾಮಾಚಾರ್ಯರು (ಶ್ರೀಧೀರೇಂದ್ರತೀರ್ಥರು) ಮತ್ತು ಶ್ರೀವಾದೀಂದ್ರತೀರ್ಥರ ಶಿಷ್ಯರಾದ ಶ್ರೀವಸುಧೇಂದ್ರತೀರ್ಥರು ಉತ್ತಮವಾದ ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ಅವುಗಳನ್ನು ಆಲೋಡನೆಮಾಡಿ ವಿಶೇಷವಾಗಿ ಶ್ರೀಧೀರೇಂದ್ರತೀರ್ಥರ ವ್ಯಾಖ್ಯಾನವನ್ನನುಸರಿಸಿ ಶ್ರೀಪಾದಪುತ್ರ ರಾಜಾ ಎಸ್. ಗುರುರಾಜಾಚಾರ್ಯರು ಗುರುಗುಣಸ್ತವನವನ್ನು ಕನ್ನಡದಲ್ಲಿ ಅನುವಾದಮಾಡಿ ಎಲ್ಲ ಗುರುರಾಜರ ಭಕ್ತರಿಗೆ ಪರಮೋಪಕಾರ ಮಾಡಿದ್ದಾರೆ. ಇದು ಕೇವಲ ಅನುವಾದವಾಗಿರದೆ ಅಧ್ಯಯನ ಮಾಡತಕ್ಕ ವಿದ್ಯಾರ್ಥಿಗಳಿಗೆ ಉಪಕಾರವಾಗುವಂತೆ ಅನ್ವಯಾರ್ಥ, ತಾತ್ಪರ್ಯ, ವಿಗ್ರಹವಾಕ್ಯ, ಅಲಂಕಾರ, ವೃತ್ತ ಇತ್ಯಾದಿ ವ್ಯುತ್ಪಾದಕ ವಿವರಣೆಗಳಿಂದ ಯುಕ್ತವಾಗಿದೆ. ಇದರಿಂದ ಪಠನ ಪಾಠನಕ್ಕೆ ಇದು ಅತ್ಯುಪಯುಕ್ತವಾಗಿದೆ. ಆಚಾರ್ಯರು ಅನೇಕ ಸಂಸ್ಕೃತ ಕನ್ನಡ ಗ್ರಂಥಗಳನ್ನೂ, ಪದಪದ್ಯಗಳನ್ನೂ ಕಾವ್ಯಗಳನ್ನೂ ರಚಿಸಿ ಸಾಹಿತ್ಯ ಪ್ರಪಂಚದಲ್ಲಿ ಲಬ್ಧಪ್ರತಿಷ್ಠರಾಗಿದ್ದಾರೆ. ಅದರಂತೆ ನುರಿತ ವೇದಾಂತಿಗಳೂ, ತಾರ್ಕಿಕರೂ ಆಗಿದ್ದಾರೆ. ಇಂಥ ವಿದ್ವಾಂಸರ ಹಸ್ತದಿಂದ ಹೊರಬಿದ್ದ 'ಗುರುಗುಣಸ್ತವನ'ದ ಅನುವಾದವು ಸರ್ವಮಾನ್ಯವೂ ವಿದ್ವದ್ವಿದ್ಯಾರ್ಥಿಗಳಿಗೆ ಉಪಾದೇಯವೂ ಆಗುವದೆಂಬಲ್ಲಿ ಸಂದೇಹವಿಲ್ಲ. ಆಚಾರ್ಯರು ಇದರಂತೆಯೇ ಇನ್ನೂ ಅನೇಕ ಉತ್ತಮ ಗ್ರಂಥಗಳನ್ನು ಬರೆದು ಶ್ರೀಗುರುರಾಜರ ಶ್ರೀಮದಾಚಾರ್ಯರ ಸೇವೆಮಾಡುವಂತೆ ಅನುಗ್ರಹಿಸಬೇಕೆಂದು ಶ್ರೀಗುರುರಾಜಾಂತರ್ಗತ ಶ್ರೀಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಹರಿಪರಮಾತ್ಮನನ್ನು ಪ್ರಾರ್ಥಿಸುತ್ತೇವೆ.

ಶ್ರೀಪರಿಮಳಸಂಶೋಧನ–ಪ್ರಕಾಶನ ಮಂದಿರದ ಆಶ್ರಯದಲ್ಲಿ ಅದರ ಪ್ರವರ್ತಕರೂ ಒಡೆಯರೂ ಆದ ವಿದ್ಯಾವೈಭವ ವೇದಾಂತ ಶಿರೋಮಣಿ ಶ್ರೀರಾಜಾ. ಎಸ್. ಗುರುರಾಜಾಚಾರ್ಯರು ಅನೇಕ ಅಪ್ರಕಾಶಿತ ವೇದಾಂತಾದಿ ಸಂಸ್ಕೃತ ಗ್ರಂಥಗಳನ್ನು ಪ್ರಕಾಶಗೊಳಿಸಿದ್ದಾರೆ. ಸತ್ಸಿದ್ಧಾಂತವನ್ನು ಪೋಷಿಸುವ ಭಾರತ ಭಾಗವತಗ್ರಂಥಗಳ ಆಧಾರದ ಮೇಲೆ ವಿಶಿಷ್ಟ ಪ್ರಬಂಧಗಳನ್ನು ಪ್ರಕಾಶಿಸಿ ಜನಸಾಮಾನ್ಯರಿಗೆ ಅತ್ಯಂತ ಉಪಕಾರ ಮಾಡಿದ್ದಾರೆ. ಈಗ 'ಗುರುಗುಣಸ್ತವನ'ದ ಕನ್ನಡಾನುವಾದವನ್ನು ಮಾಡಿ ಶ್ರೀಗುರುರಾಜರ ಭಕ್ತರಿಗೆ ವೇದಾಂತ ಶಾಸ್ತ್ರದಲ್ಲಿ ಅಭಿರುಚಿ ಹುಟ್ಟುವಂತೆ ಮಾಡಿದ್ದಾರೆ. ಇವರು ಮಾಡಿದ ಮತ್ತು ಮಾಡುತ್ತಿರುವ ಕಾರ್ಯವನ್ನು ವಸ್ತುಸ್ಥಿತಿಯಾಗಿ ತಿಳಿಸಿದ್ದೇವೆಯಲ್ಲದೆ ವಾಸ್ತವಿಕತೆಯಿಲ್ಲದ ಪ್ರಶಂಸೆಯಲ್ಲ.

ಶ್ರೀಗುರುರಾಜರ ಮತ್ತು ಗುರುವರೇಣ್ಯರಾದ ಕೀರ್ತಿಶೇಷರಾದ ಸಂಸ್ಮರಣೀಯ ಶ್ರೀಸುಯಮೀಂದ್ರತೀರ್ಥರ ಅನುಗ್ರಹವನ್ನಪೇಕ್ಷಿಸಿ ಈ ಮುನ್ನುಡಿಯನ್ನು ಸೇವಾರೂಪವಾಗಿ ಬರೆದಿದ್ದೇವೆ. ಸಜ್ಜನರು ಹಂಸಕ್ಷೀರನ್ಯಾಯದಿಂದ ಇದನ್ನು ಸ್ವೀಕರಿಸುವರೆಂದು ನಂಬಿದ್ದೇವೆ.

ಕೀಲಕ, ಕಾರ್ತಿಕವದ್ಯ ೪
ಶನಿವಾರ, ಸಿದ್ಧಿಯೋಗ,
೯-೧೦-೧೯೬೮
ಶ್ರೀವರದೇಂದ್ರಸ್ವಾಮಿಗಳ
ಬೃಂದಾವನ ಸನ್ನಿಧಿ,
೫೫೫, ಸದಾಶಿವಪೇಠ,
ಲಕ್ಷ್ಮೀರೋಡ, ಪುಣೆ-೨

ಇತಿ
ಸಜ್ಜನ ವಿಧೇಯ
ವಿದ್ಯಾರತ್ನ, ವಿದ್ಯಾಭೂಷಣ
ರಾಘವೇಂದ್ರಾಚಾರ್ಯ ಪಂಚಮುಖಿ
(ಧಾರವಾಡ ಕನ್ನಡ ಸಂಶೋಧನಾ ವಿಭಾಗದ
ನಿವೃತ್ತ ಡೈರೆಕ್ಟರರು)

(ಶ್ರೀಪಾದಪುತ್ರ ಶ್ರೀ ರಾಜಾ ಶ್ರೀ ಗುರುರಾಜಾಚಾರ್ಯರು ಪ್ರಕಟಿಸಿದ
ಗುರುಗುಣಸ್ತವನಕ್ಕಾಗಿ ಬರೆದ ಮುನ್ನುಡಿ)

# ಶ್ರೀರಾಘವೇಂದ್ರ ಗುರುಗುಣಸ್ತವನ

ಕಲ್ಪತರು ಕಾಮಧೇನುವೆನಿಸಿದ ಶ್ರೀರಾಘವೇಂದ್ರ ಸ್ವಾಮಿಗಳಿಗೆ ಅತ್ಯಂತ ಪ್ರೀತಿಕರವಾದ ಸಂಸ್ಕೃತ ಸ್ತೋತ್ರಗಳೆಂದರೆ, ಶ್ರೀಮದಪ್ಪಣ್ಣಾಚಾರ್ಯ ವಿರಚಿತ **"ಶ್ರೀಪೂರ್ಣಬೋಧಗುರುತೀರ್ಥಪಯೋಬ್ಧಿಪಾರಾ"** – ಎಂದು ಪ್ರಾರಂಭವಾಗುವ 'ಶ್ರೀರಾಘವೇಂದ್ರ ಸ್ತೋತ್ರ' ಮತ್ತು 'ಉಭಯವಂಶಾಬ್ಧಿ ಚಂದ್ರಮ'ರೆನಿಸಿದ ಶ್ರೀವಾದೀಂದ್ರಕೃತ **"ಗುರುಗುಣಸ್ತವನ"**. ಅಪ್ಪಣ್ಣಾಚಾರ್ಯ ವಿರಚಿತ ರಾಘವೇಂದ್ರ ಸ್ತೋತ್ರ ಸಮಾಪ್ತಿಯಲ್ಲಿ **'ಸಾಕ್ಷೀ ಹಯಾಸ್ಯೋತ್ರಹಿ'** – ಎಂದು ರಾಘವೇಂದ್ರ ಸ್ವಾಮಿಗಳೇ ಅಂಗೀಕಾರ ಮುದ್ರೆಯನ್ನು ಹಾಕಿದ್ದಾರೆ. ವಾದೀಂದ್ರರ "ಗುರುಗುಣಸ್ತವನ"ವನ್ನು ಕೇಳಿ ಬೃಂದಾವನಾಂತರ್ಗತ ಶ್ರೀರಾಯರು ಸ್ವಯಂ ತಲೆ ತೂಗುತ್ತಿದ್ದರೆಂದು ಪ್ರತೀತಿಯಿದೆ. ಈ ರೀತಿ ಭಕ್ತರ ಸ್ತೋತ್ರಕ್ಕೆ ಮೆಚ್ಚಿ ಶಿರಃ ಕಂಪನ ಮಾಡುವುದು ಮಂತ್ರಾಲಯರಾಯರಿಗೆ ಹೊಸದೇನು ಅಲ್ಲ. ಏಕೆಂದರೆ ಪ್ರಹ್ಲಾದಾವತಾರಿಯಾದ ಇವರೇ, ಹಿಂದೆ ಶ್ರೀ ವ್ಯಾಸರಾಜರಾಗಿ ಅವತರಿಸಿದ್ದಾಗ ಕವಿ ಸೋಮನಾಥನ "ಶ್ರೀವ್ಯಾಸಯೋಗಿ ಚರಿತ"ವೆಂಬ ಚಂಪೂಕಾವ್ಯವನ್ನು ಸಾಕ್ಷಾತ್ ಶ್ರವಣ ಮಾಡಿ ಶಿರಸಾ ಶ್ಲಾಘಾಕಂಪನವನ್ನು ವ್ಯಕ್ತಪಡಿಸಿದ್ದರಂತೆ. ಈ ಸಂಗತಿಯನ್ನು ಸೋಮನಾಥ ಕವಿಯೇ ತನ್ನ ಗ್ರಂಥದಲ್ಲಿ – **"ಶ್ಲಾಘಾಕಂಪನಮೇಕಮೇವ ಶಿರಸಃ ಶ್ರೀವ್ಯಾಸಯೋಗೀಶಿತುಃ । ಮೇರೂಣಾಂ ಶತಮರ್ಹತಿ ಕ್ಷಿತಿತಲೇ ವಿದ್ಯಾಸು ವಿದ್ಯಾವತಾಮ್ ।।"** – ಎಂದು ಉಲ್ಲೇಖಿಸಿದ್ದಾನೆ.

ಶ್ರೀವಾದೀಂದ್ರರ "ಗುರುಗುಣಸ್ತವನ"ವು 'ಸ್ರಗ್ಧರಾ' ವೃತ್ತದಲ್ಲಿ ರಚಿಸಲ್ಪಟ್ಟು ೩೭ ಶ್ಲೋಕಗಳನ್ನು ಒಳಗೊಂಡಿದೆ. ಸ್ರಗ್ಧರಾ ವೃತ್ತದ ಶೈಲಿಯು "ಶ್ರೀಹರಿವಾಯುಸ್ತುತಿ"ಯಂತೆ ಪ್ರೌಢವಾಗಿದೆ. ಇದಕ್ಕೆ ಧೀರೇಂದ್ರರು ವಸುಧೇಂದ್ರರು ಮೊದಲಾದವರು ವ್ಯಾಖ್ಯಾನವನ್ನು ರಚಿಸಿದ್ದಾರೆ. ಗ್ರಂಥಕರ್ತರು ಮೊದಲಿಗೆ ಶ್ರೀಪತಿ ಹಾಗೂ ವಾಯುದೇವರ ಹನುಮ-ಭೀಮ-ಮಧ್ವರೂಪಗಳನ್ನು ವಂದಿಸಿ, ಕ್ರಮವಾಗಿ ಶ್ರೀಟೀಕಾರಾಯರು, ವಿಬುಧೇಂದ್ರರು, ಶ್ರೀವ್ಯಾಸರಾಯರು, ವಿಜಯೀಂದ್ರರು-ಸುಧೀಂದ್ರರು-ರಾಘವೇಂದ್ರರು, ಆಶ್ರಮ ಗುರುಗಳಾದ ಉಪೇಂದ್ರತೀರ್ಥರನ್ನು ಅಭಿನಮಿಸಿ, ಶ್ರೀರಾಘವೇಂದ್ರ ಗುರುಗಳ "ಗುಣಸ್ತವನ"ವನ್ನು ಉಪಕ್ರಮಿಸುತ್ತಾರೆ.

ಜ್ಞಾನಯೋಗ-ಕರ್ಮಯೋಗಗಳ ಸಿದ್ಧಿಯನ್ನು ಸಂಪಾದಿಸುವ ಸಾಮರ್ಥ್ಯ ರಹಿತನಾದಾಗ್ಯೂ, ಮೋಕ್ಷ ಫಲಸಿದ್ಧಿಗೋಸ್ಕರ ಅವಶ್ಯಕವಾದ ಗುರುಪ್ರಸಾದಕ್ಕೋಸ್ಕರ,

ರಾಘವೇಂದ್ರ ಯತೀಂದ್ರರ ಸ್ತೋತ್ರವನ್ನು ಮಾಡುವುದಾಗಿ ಪ್ರತಿಜ್ಞೆ ಮಾಡಿದ್ದಾರೆ. ಶ್ರೀರಾಘವೇಂದ್ರ ಯತಿವರಚರಿತ್ರೆಯು ಮಹಾಸಮುದ್ರದಂತಿದೆ. ತನ್ನ ಜ್ಞಾನಸಾಮರ್ಥ್ಯ-ವಾದರೂ ಮಿಣಕು ಹುಳದ ಅಲ್ಪ ಪ್ರಕಾಶದಂತಿದೆ. ಆ ಕಾರಣ, ಗುರುಗಳ ಸಮಗ್ರ ಚರಿತ್ರೆಯನ್ನು ಹೇಳಿ ಮುಗಿಸುತ್ತೇನೆಂದರೆ ಅದು ಕೇವಲ ವಂಧ್ಯಾಪ್ರತಿಜ್ಞೆಯೇ ಸರಿ. ಹಾಗಿದ್ದಾಗ್ಯೂ ತನ್ನ ಇಚ್ಛೆಯು 'ಉದಧಿಸ್ನಾನ ಸಂಕಲ್ಪ'ದಂತೆ ಸಾರ್ಥಕವೆಂದು ವರ್ಣಿಸಿದ್ದಾರೆ. ಈ ಭಾವನೆಯು – **ಕ್ವ ಸೂರ್ಯಪ್ರಭವೋ ವಂಶಃ ಕ್ವ ಚಾಲ್ಪವಿಷಯಾ ಮತಿಃ । ತಿತೀರ್ಷುರ್ದುಸ್ತರಂ ಮೋಹಾತ್, ಉಡುಪೇನಾಸ್ಮಿ ಸಾಗರಮ್ ॥** (ರಘುವಂಶ ಸರ್ಗ ೧ - ಶ್ಲೋಕ ೨) ಎಂಬ ಕಾಳಿದಾಸನ ವಚನವನ್ನು ಜ್ಞಾಪಕಕ್ಕೆ ತಂದು ಕೊಡುತ್ತದೆ.

ಶ್ರೀರಾಘವೇಂದ್ರ ಸ್ವಾಮಿಗಳು 'ಪ್ರಹ್ಲಾದ'ನ ಅವತಾರರಾದುದರಿಂದ '**ವಾಯುನಾ ಚ ಸಮಾವಿಷ್ಟಃ**' – '**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ**' – ಎಂಬ ಪ್ರಮಾಣಗಳಿಂದ ಶ್ರೀಹರಿವಾಯುಗಳ ವಿಶೇಷ ಸನ್ನಿಧಾನ ಪಾತ್ರರಾದ್ದರಿಂದ ಇವರ ಹೃದಯಾಕಾಶದಿಂದ ಹೊರಹೊಮ್ಮುವ ಜ್ಞಾನಪ್ರಕಾಶದ ಮುಂದೆ ಆಕಾಶದಲ್ಲಿರುವ ಸೂರ್ಯ ಚಂದ್ರಾದಿ ಜ್ಯೋತಿರ್ಮಂಡಲದ ಇಡೀ ಪ್ರಕಾಶ ಸಮುದಾಯವು, ಕೇವಲ ಖದ್ಯೋತ ಪ್ರಕಾಶತುಲ್ಯವಾಗುತ್ತದೆ ಎಂದಿದ್ದಾರೆ.

ಶ್ರೀಮಂತ್ರಾಲಯ ಪ್ರಭುಗಳ ಲೇಖನ ಶೈಲಿಯನ್ನು ಕುರಿತು ವಾದೀಂದ್ರರು ಹೀಗೆನ್ನುತ್ತಾರೆ — ಶ್ರೀರಾಯರು ತಮ್ಮ ಮನಸ್ಸಿನಲ್ಲಿ ಅಯುಕ್ತವಾದ ಅರ್ಥವನ್ನು ಚಿಂತಿಸುವುದೇ ಇಲ್ಲ. ಹಠಾತ್ತನೆ ಏನೊಂದನ್ನೂ ಹೇಳುವುದಿಲ್ಲ. ಸಜ್ಜನರೊಂದಿಗೆ ವಾದಿಸುವುದಿಲ್ಲ. ಪ್ರಾಚೀನರಾದ ಭಾಷ್ಯ–ಟೀಕಾಕಾರರ ಅಭಿಪ್ರಾಯವನ್ನು ಸಂಗ್ರಹಿಸು-ತ್ತಾರೆಯೇ ಹೊರತು, ಇದು ನನ್ನ ಅಭಿಪ್ರಾಯವೆಂದು ಬಲಾತ್ಕಾರವಾಗಿ ಹೇರುವುದಿಲ್ಲ. ಹೇಳಿದ್ದನ್ನೇ ಪುನಃ ಪುನಃ ಹೇಳುವುದಿಲ್ಲ. ಬರೆದಿದ್ದನ್ನು ಅಳಿಸುವುದಿಲ್ಲ. ಆ ಕಾರಣ ಒಳ್ಳೆಯ ಪ್ರಬಂಧ ರಚನೆಯ ಪ್ರಾರಂಭದಲ್ಲಿ, ಅವರ ಅನುಗ್ರಹಕ್ಕೋಸ್ಕರ ಅವರನ್ನು ಸ್ತೋತ್ರ ಮಾಡಬೇಕು.

ಚಾರಿತ್ರಿಕ ದೃಷ್ಟಿಯಿಂದ, ರಾಘವೇಂದ್ರ ಸ್ವಾಮಿಗಳು ಕ್ರಿ.ಶ. ೧೬೨೩ ರಲ್ಲಿ ಆಶ್ರಮಕ್ಕೆ ಬಂದು ಕ್ರಿ.ಶ. ೧೬೭೧ ರ ಪರ್ಯಂತ, ಅಂದರೆ ಸುಮಾರು ೪೮ ವರ್ಷಗಳ ಕಾಲ, ವೇದಾಂತ ಪೀಠವನ್ನು ಅಲಂಕರಿಸಿದ್ದರು. ಅಷ್ಟು ವರ್ಷಗಳ ಸಂಖ್ಯೆಗೆ ತಕ್ಕಂತೆಯೇ, ೪೮ ಗ್ರಂಥಗಳಿಗೆ ಕಮ್ಮಿಯಿಲ್ಲದೇ ಗ್ರಂಥಗಳನ್ನು ರಚಿಸಿದ್ದಾರೆ. ಇವರಿಗೆ "ಟಿಪ್ಪಣ್ಯಾಚಾರ್ಯ ಚಕ್ರವರ್ತಿ" ಎಂಬ ಬಿರುದು ಸಹ ಪ್ರಚಲಿತವಾಗಿದೆ. ಪ್ರಾಯಶಃ ಶ್ರೀಟೀಕಾರಾಯರ ಎಲ್ಲಾ ಟೀಕಾಗ್ರಂಥಗಳಿಗೂ ಶ್ರೀವ್ಯಾಸರಾಯರ ಕೃತಿಗಳಿಗೂ, ಟಿಪ್ಪಣಿಯನ್ನು ಬರೆದುದಲ್ಲದೆ ಕೆಲವು ಸಂಗ್ರಹ ಗ್ರಂಥಗಳನ್ನೂ, ಸ್ವತಂತ್ರಕೃತಿಗಳನ್ನೂ

ರಚಿಸಿದ್ದಾರೆ. ಅದರಲ್ಲಿ ಪ್ರಸಿದ್ಧವಾದ ಗ್ರಂಥಗಳೆಲ್ಲವನ್ನೂ ಉಲ್ಲೇಖಿಸುತ್ತಾ ತತ್ಕರ್ತೃತ್ವೇನ ಶ್ರೀರಾಯರನ್ನು ವಾದೀಂದ್ರರು "ಗುರುಗುಣಸ್ತವನ"ದಲ್ಲಿ ಸ್ತೋತ್ರಗೈದಿದ್ದಾರೆ.

ಗುರುಗಳ ಗುಣವನ್ನು ಸ್ತುತಿಸುತ್ತೇನೆಂದು ಪ್ರತಿಜ್ಞೆ ಮಾಡಿ, ಅವರಿಂದ ರಚಿತವಾದ ಗ್ರಂಥಗಳನ್ನು ವರ್ಣಿಸಿದರೆ, ಅದು "ಗುರುಗುಣಸ್ತವನ" ಹೇಗಾದೀತು, ಎಂದು ಪ್ರಶ್ನಿಸಬಹುದು. ಅದಕ್ಕೆ ಉತ್ತರವೇಂದರೆ 'ಸುಮಧ್ವ ವಿಜಯ'ದಲ್ಲಿ ಶ್ರೀಮದಾಚಾರ್ಯರ ಭಾಷ್ಯಾದಿ ಗ್ರಂಥಗಳನ್ನು ವರ್ಣಿಸುತ್ತಾ, ಪಂಡಿತಾಚಾರ್ಯರು " 'ರೂಪಮನ್ಯದಿವ ಧನ್ಯಮಾತ್ಮನಃ' – ಶ್ರೀಮದಾಚಾರ್ಯರ ಭಾಷ್ಯಾದಿ ಗ್ರಂಥಗಳು, ಅವರದೇ ಇನ್ನೊಂದು ಪ್ರತಿರೂಪದಂತಿದೆ. ಆಚಾರ್ಯರಲ್ಲಿರುವ ಸಲ್ಲಕ್ಷಣಗಳೆಲ್ಲವೂ ಅವರ ಗ್ರಂಥಗಳಲ್ಲಿಯೂ ಇವೆ" ಎಂಬ ಮಾತನ್ನು ಹೇಳಿದ್ದಾರೆ. ಈ ನ್ಯಾಯವನ್ನೇ ಅತಿದೇಶ ಮಾಡಿಕೊಂಡಲ್ಲಿ ರಾಯರ ಗ್ರಂಥಗಳನ್ನು ಪ್ರಶಂಸೆ ಮಾಡಿದರೂ, ಅದು ರಾಯರ ವ್ಯಕ್ತಿತ್ವ ಪ್ರಶಂಸೆಯೇ ಆಗುವುದರಲ್ಲಿ ಸಂದೇಹವಿಲ್ಲ. ವಾದೀಂದ್ರರು ವರ್ಣಿಸಿರುವ ರಾಯರ ಕೆಲವು ಗ್ರಂಥಗಳ (ಅರ್ಥಾತ್ ಶ್ರೀರಾಯರ) ಮಹಿಮೆಯನ್ನು ಸಂಗ್ರಹವಾಗಿ ಹೀಗೆ ಪರಿಚಯಿಸಿ-ಕೊಳ್ಳಬಹುದು.

**ಅಣುಮಧ್ವವಿಜಯ ವ್ಯಾಖ್ಯಾ (ಗೂಢಭಾವ ಪ್ರಕಾಶಿಕಾ) :** ಶ್ರೀರಾಯರು ಇದನ್ನು ತಮ್ಮ ಪೂರ್ವಾಶ್ರಮದಲ್ಲೇ ಬರೆದಿದ್ದರು. ಅದರ ಪುಣ್ಯಪ್ರಭಾವದಿಂದಾಗಿ, ಸಂತುಷ್ಟರಾದ ದಶಪ್ರಮತಿಗಳು (ಶ್ರೀಮಧ್ವಾಚಾರ್ಯರು), ತಮ್ಮ ಪೀಳಿಗೆಯಲ್ಲೇ ಶ್ರೀರಾಯರು ಬರುವಂತೆ ಶ್ರೀಸುಧೀಂದ್ರತೀರ್ಥರಿಗೆ ಪ್ರೇರಣೆ ಮಾಡಿ, ಅವರಿಂದ ರಾಯರಿಗೆ 'ವೇದಾಂತ ಸಾಮ್ರಾಜ್ಯ'ದಲ್ಲಿ ಅಭಿಷಿಕ್ತರನ್ನಾಗಿಸಿದರು. ಇದನ್ನು ನೋಡಿ ವಾಯುದೇವರ ಪತ್ನಿ ವಿದ್ಯಾಭಿಮಾನಿನಿ ಭಾರತೀದೇವಿಯು ತನ್ನ ಪತಿಗೆ ಅನುರೂಪ ವ್ಯಾಪಾರ ಮಾಡಲೋಸುಗ, ತಾನೂ ರಾಯರನ್ನು 'ಸಾರಸ್ವತ ಸಾಮ್ರಾಜ್ಯ'ದಲ್ಲಿ ಮೂರ್ಧಾಭಿಷಿಕ್ತರನ್ನಾಗಿ ಮಾಡಿದಳು ಎಂದು ವಾದೀಂದ್ರರು ವರ್ಣಿಸಿದ್ದಾರೆ. ಇದರಿಂದ ಶ್ರೀರಾಯರು ಭಾರತೀ ಮತ್ತು ಭಾರತೀಶರ ಅನುಗ್ರಹಕ್ಕೆ ಎಷ್ಟು ಪಾತ್ರರೆಂದು ಹೇಳುವುದರ ಜೊತೆಗೆ 'ಅಣುಮಧ್ವವಿಜಯ' ಗ್ರಂಥದ ಮಹಿಮೆಯೂ ಎಷ್ಟೆಂದು ಲೋಕಕ್ಕೆ ತೋರಿಸಿದಂತಾಯಿತು.

**ವಾದಾವಲೀವ್ಯಾಖ್ಯಾ :** ಶ್ರೀಜಯತೀರ್ಥರು ಬರೆದ 'ವಾದಾವಲೀ' ನಾಮಕ ಗ್ರಂಥವು, ದುರ್ಮತಾರಣ್ಯ ದಾಹ ವಿಷಯದಲ್ಲಿ 'ದಾವಾವಲಿ'ಯಾಗಿ ಪರ್ಯವಸಿತು. ಅದಕ್ಕೆ ರಾಯರು ಬರೆದ 'ಭಾವದೀಪಿಕಾ' ಎಂಬ ಟಿಪ್ಪಣಿಯು ಉತ್ತೇಜನಕರವಾಗಿ ಆ 'ದಾವಾವಲಿ'ಯನ್ನು ಜಾಜ್ವಲ್ಯಮಾನವನ್ನಾಗಿ ಮಾಡಿತು.

**ತಾತ್ಪರ್ಯ ಚಂದ್ರಿಕಾ ಪ್ರಕಾಶ :** ಶ್ರೀವ್ಯಾಸರಾಜರಿಂದ ವಿರಚಿತವಾದ, ಚಂದ್ರಿಕಾ ಸದೃಶ 'ಚಂದ್ರಿಕಾ' ಗ್ರಂಥಕ್ಕೂ 'ಪ್ರಕಾಶ' ಯಾರಿಂದ ಉಂಟಾಯಿತೋ, ಅಂತಹ 'ಪ್ರಕಾಶ' ಗ್ರಂಥಕರ್ತೃಗಳಾದ ರಾಯರ ಜ್ಞಾನ ತೇಜಸ್ಸನ್ನು ಏನೆಂದು ವರ್ಣಿಸೋಣ.

**ನ್ಯಾಯಸುಧಾಪರಿಮಳ :** 'ಪರಿಮಳಾಚಾರ್ಯ'ರೆಂದೇ ವಿಖ್ಯಾತರಾದ ರಾಯರ ಜಿಹ್ವೆಯೆಂಬ ರಂಗಮಂಟಪದಲ್ಲಿ ನಿಂತು ನರ್ತನ ಮಾಡುವಾಗ ವಾಗ್ದೇವಿಯ ಹೂಮುಡಿಯಿಂದ ಉದರಿದ ಪುಷ್ಪಗಳೇ 'ಪರಿಮಳ' ಗ್ರಂಥದ ವಾಕ್ಯಗಳು ಎಂಬ ವರ್ಣನೆಯೂ ಸ್ವಾರಸ್ಯವಾಗಿದೆ. ಅಂತಹ ಪರಿಮಳಯುತ ಪುಷ್ಪ ಸದೃಶ ವಾಕ್ಯಗಳಿಂದ ಮಿಶ್ರಿತವಾದ, ಟೀಕಾಕೃತ್ಪಾದಕೃತ 'ನ್ಯಾಯಸುಧೆ'ಯು, ಈಗ ರಾಯರಿಂದ ಕೇವಲ ಸುರರಿಗೆ ಮಾತ್ರವಲ್ಲ, ಭೂಸುರರಿಗೂ ಲಭ್ಯವಾಗಿ ಜನಮನೋಹರವಾಯಿತು.

**ತತ್ವಪ್ರಕಾಶಿಕಾ ಭಾವದೀಪ :** ಜಯತೀರ್ಥ ವಿರಚಿತ 'ತತ್ವಪ್ರಕಾಶಿಕಾ' ಎಂಬ ಯುವತಿಯು, ಈವರೆಗೂ (ವಿಸ್ತೃತ ವ್ಯಾಖ್ಯಾ) ಎಂಬ ಶ್ರೇಷ್ಠವಸನ ವಿಹೀನಳಾದ ಕಾರಣ, ವಿದ್ವತ್ಸಭಾ ಪ್ರವೇಶಕ್ಕೆ ನಾಚುತ್ತಿದ್ದಳು. ಈಗಲಾದರೋ ರಾಯರು ತಮ್ಮ 'ಭಾವದೀಪ'ವೆಂಬ ಪ್ರೌಢವ್ಯಾಖ್ಯಾನರೂಪ ಪೀತಾಂಬರವನ್ನು ಉಡಿಸಿದ್ದರಿಂದ, ಆ ಯುವತಿಯು ಧೈರ್ಯವಾಗಿ ವಿದ್ವಜ್ಜನರ ಎದುರಿಗೆ ಓಡಾಡಲು ಅವಕಾಶವಾಯಿತು.

**ನ್ಯಾಯಮುಕ್ತಾವಲೀ :** ಮುಕ್ತಾಹಾರದಲ್ಲಿರುವ ಮುತ್ತಿನ ಮಣಿಗಳು ಸಮುದ್ರದಿಂದ ಸಂಗ್ರಹಿಸಲ್ಪಟ್ಟು, ತಂತು ಪ್ರೋತವಾಗಿ ಹಾರವೆನಿಸಿಕೊಂಡು ಕಂಠದಲ್ಲಿ ಧರಿಸಲ್ಪಡುತ್ತದೆ, ಹೇಗೋ ಅದರಂತೆ, ಬ್ರಹ್ಮಸೂತ್ರೋಪನ್ಯಾಸರೂಪ "ನ್ಯಾಯಮುಕ್ತಾವಲಿ"ಯು, ಮಧ್ವಸಿದ್ಧಾಂತವೆಂಬ ಸಮುದ್ರದಿಂದ ಉದ್ಧರಿಸಲ್ಪಟ್ಟು, ಧ್ಯಾನ (ವಿಚಾರ-ಮನನ)ವೆಂಬ ತಂತುವಿನಿಂದ ಪೋಣಿಸಲ್ಪಟ್ಟು, ಶ್ರೀರಾಯರ ಗುಣಗಾನಮಾಡುವ ವಿದ್ವಜ್ಜನರ ಕಂಠದಲ್ಲಿ ರಾಯರಿಂದ ಸ್ನೇಹ-ಬಹುಮಾನ ಪುರಸ್ಸರವಾಗಿ ಹಾಕಲ್ಪಟ್ಟಂತೆ ಭಾಸಮಾನವಾಗುತ್ತದೆ.

**ಅಣುಭಾಷ್ಯ–ತತ್ವಮಂಜರೀ :** ಶ್ರೀಮದಾಚಾರ್ಯಕೃತ ಅಣುಭಾಷ್ಯದಲ್ಲಿ ಅನಂತ ವೇದಾಂತಾರ್ಥಗಳು ಅಡಗಿವೆ, ನಿಜ. ಆದರೆ ಅದು ತಿಳಿಯಬೇಕಾದರೆ, ರಾಯರ 'ತತ್ವಮಂಜರೀ' ಎಂಬ ವ್ಯಾಖ್ಯಾನದಿಂದ ಮಾತ್ರ ಸಾಧ್ಯ. ಹೇಗೆಂದರೆ ಬಾಲರೂಪಿ ಕೃಷ್ಣನ ಪುಟ್ಟ ಬಾಯಿಯಲ್ಲಿ ಇಡೀ ಬ್ರಹ್ಮಾಂಡವು ಅಡಗಿದೆ ಎಂಬ ರಹಸ್ಯ ಲೋಕಕ್ಕೆ ತಿಳಿದಿದ್ದು ಯಶೋದಾದೇವಿಯ ವಚನದಿಂದಷ್ಟೇ.

**"ಅನಂತೋಽರ್ಥಃ ಪ್ರಕಟಿತಃ ತ್ವಯಾಣೌ ಭಾಷ್ಯಸಂಗ್ರಹೇ । ಅಹೋ ಆತ್ಮಪರಿಜ್ಞಪ್ತ್ಯೈ, ಕೃಷ್ಣೇನೇವಾನನಾಂತರೇ ॥"** ಎಂಬ ಸುಮಧ್ವವಿಜಯ (ಸರ್ಗ ೧೫ ಶ್ಲೋ. ೮೨) ಶ್ಲೋಕವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

**ತಂತ್ರದೀಪಿಕಾ :** ಶ್ರೀಮದಾಚಾರ್ಯರಿಂದ ಪ್ರೋಕ್ತವಾದ ಭಾಷ್ಯ ಅನುವ್ಯಾಖ್ಯಾನ ನ್ಯಾಯವಿವರಣಾದಿ ಪ್ರಕರಣಗಳಿಂದ ಪ್ರಶಸ್ತಬುದ್ಧಿಪೂರ್ವಕವಾಗಿ ಸಂಗ್ರಹಿಸಲ್ಪಟ್ಟು

ವಿವಿಧವಾದ ಅರ್ಥಗಳು ಬ್ರಹ್ಮಸೂತ್ರಕ್ಕೆ ಯೋಜಿಸಲ್ಪಟ್ಟ ಗ್ರಂಥವೇ ರಾಯರ "ತಂತ್ರದೀಪಿಕಾ". ಇದರಿಂದ ವಿದ್ವಜ್ಜನರಿಗಾದ ಆನಂದ ಅಪಾರ.

**ಗೀತಾವಿವೃತಿ :** 'ಭಾಷ್ಯಾದ್ಯುಕ್ತಾರ್ಥಸಂಗ್ರಹಂ' – ಎಂದು ರಾಯರೇ ಹೇಳುವಂತೆ, ಗೀತಾ ಭಾಷ್ಯ–ಗೀತಾ ತಾತ್ಪರ್ಯ–ಪ್ರಮೇಯ ದೀಪಿಕಾ–ನ್ಯಾಯದೀಪಿಕಾ ಈ ನಾಲ್ಕು ಗ್ರಂಥಗಳ ಅರ್ಥಸಂಗ್ರಹವೇ 'ಗೀತಾವಿವೃತಿ'.

ಇದು ವಿದ್ಯಾರ್ಥಿಗಳಿಗೂ, ಪಂಡಿತರಿಗೂ ಗೀತೆಯ ಕೈಪಿಡಿ. ಹಿಂದೆ 'ಚಂದ್ರವಂಶ' ಪ್ರಸೂತನಾದ ಗೀತಾಚಾರ್ಯ ಶ್ರೀಕೃಷ್ಣನು, ಗೀತೆಯನ್ನು ಉಪದೇಶಿಸಲು, ಚಂದ್ರವಂಶದವರೆಲ್ಲರಿಗೂ ಶುಭಲಾಭವಾಯಿತು. ಈಗಲಾದರೋ, 'ಪರಮಹಂಸ ವಂಶ'(ಸೂರ್ಯವಂಶವೆಂಬ ಧ್ವನಿಯೂ ಇದೆ)ದಲ್ಲಿ ಪ್ರಾಪ್ತವಾದ ರಾಯರು 'ಗೀತಾ ವಿವೃತಿ'ಯನ್ನು ಮಾಡಲು, ಪರಮಹಂಸರೆಲ್ಲರಿಗೂ (ಅರ್ಥಾತ್ ಸರ್ವಜ್ಞಾನಿಗಳಿಗೂ – ಸೂರ್ಯವಂಶದವರಿಗೂ ಎಂಬ ಧ್ವನಿ), ನಿಯಮೇನ ಶುಭ ಪ್ರಾಪ್ತಿಯಾಯಿತು.

**ಪ್ರಮೇಯದೀಪಿಕಾಭಾವದೀಪ ಮತ್ತು ನ್ಯಾಯದೀಪಿಕಾಭಾವದೀಪ :** 'ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃತ್' – ಎಂಬ ಆರ್ಯೋಕ್ತಿಯಲ್ಲಿ ಶ್ರೀರಾಯರಿಗೆ ದೃಢನಿಶ್ಚಯ-ವಿದೆ. ಆ ಕಾರಣದಿಂದಲೇ ರಾಯರು 'ಗೀತಾವಿವೃತಿ' ಎಂಬ ಹೃದ್ಯ ವ್ಯಾಖ್ಯಾನವನ್ನು ರಚಿಸಿದ್ದರೂ, ಶ್ರೀಟೀಕಾಕೃತ್ಪಾದರ 'ಪ್ರಮೇಯ ದೀಪಿಕಾ' – 'ನ್ಯಾಯದೀಪಿಕಾ' ಎಂಬ ೨ ಟೀಕಾ ಗ್ರಂಥಗಳಿಗೂ, ಕ್ರಮವಾಗಿ 'ಪ್ರಮೇಯದೀಪಿಕಾಭಾವದೀಪ – ನ್ಯಾಯದೀಪಿಕಾ-ಭಾವದೀಪ'ವೆಂಬ ವಿದ್ವಜ್ಜನೋಪಕಾರಕ ೨ ಟಿಪ್ಪಣಿಗಳನ್ನೂ ರಚಿಸಿರುವರು.

**ಋಗರ್ಥಮಂಜರೀ :** ರಾಯರು ತಮ್ಮ ಏಕಮಾತ್ರ ಪುತ್ರ ಲಕ್ಷ್ಮೀನಾರಾಯಣಾ-ಚಾರ್ಯರಿಗೆ 'ಋಗ್ಭಾಷ್ಯಟೀಕಾ'ವನ್ನು ಪಾಠ ಹೇಳಿದ್ದರು. ಅದನ್ನೇ ಅನುಸರಿಸಿ ಲಕ್ಷ್ಮೀನಾರಾಯಣಾಚಾರ್ಯರು 'ಋಗರ್ಥಮಂಜರೀ' ಎಂಬ ಟಿಪ್ಪಣಿಯನ್ನು ಬರೆದರು. ತಮಗಿರುವ ಪುತ್ರವಾತ್ಸಲ್ಯದಿಂದ, ವಿದ್ವಜ್ಜನಸ್ತೋಮದಲ್ಲಿ, ಆ ಗ್ರಂಥವನ್ನೇ ರಾಯರು ಪ್ರಸಿದ್ಧಿಪಡಿಸಿದರು.

**ದಶೋಪನಿಷತ್ ಖಂಡಾರ್ಥಗಳು :** ಶ್ರೀಮದಾಚಾರ್ಯಕೃತದಶೋಪನಿಷದ್ಭಾಷ್ಯಾನುಸಾರ, ೧೦ ಉಪನಿಷತ್ತುಗಳಿಗೂ ಪ್ರತಿಪದಾರ್ಥರೂಪ 'ಖಂಡಾರ್ಥ'ಗಳನ್ನು ರಾಯರು ಬರೆದಿರುವರು. ಈ ಗ್ರಂಥಗಳು ಎಷ್ಟು ಉಪಕಾರಕವಾಗಿವೆಯೆಂದರೆ, ಸಮಸ್ತ ವೇದಗಳನ್ನು ವ್ಯಾಖ್ಯಾನ ಮಾಡಿದರೂ ಆಗದಿರುವಷ್ಟು – ಎಂದು ವಾದೀಂದ್ರರು ಹೇಳಿದ್ದಾರೆ. ಇದೂ ಒಂದು ರೀತಿ ಸರಿಯೆನ್ನುತ್ತಾರೆ. ಲೋಕದ ಜನಗಳು ಪೂರ್ಣಚಂದ್ರನನ್ನು ಬಿಟ್ಟು ಬಿದಿಗೆ ಚಂದ್ರನ ಕಲೆಗಷ್ಟೇ ನಮಸ್ಕರಿಸುವುದು.

**ದಶಪ್ರಕರಣ ಟೀಕಾ ವ್ಯಾಖ್ಯಾನಗಳು : "ಶ್ರುತಿರ್ಲಿಂಗಂ ಸಮಾಖ್ಯಾಚ ವಾಕ್ಯಂ ಪ್ರಕರಣಂ ತಥಾ । ಪೂರ್ವಪೂರ್ವಂ ಬಲೀಯಃ ಸ್ಯಾತ್"** – ಎಂಬ ನ್ಯಾಯಾನುಸಾರ, ಸಾಮಾನ್ಯ ನಿಯಮವೇನೆಂದರೆ 'ಪ್ರಕರಣ'ಕ್ಕಿಂತಲೂ 'ವಾಕ್ಯಗಳು' ಪ್ರಬಲ. ಹಾಗಿದ್ದರೂ ಶ್ರೀರಾಯರ ವಾಕ್ಯಗಳು ಆಚಾರ್ಯರ 'ಪ್ರಕರಣ' ಗ್ರಂಥಗಳನ್ನು ಅನುಸರಿಸಿರುವುದು ಆಶ್ಚರ್ಯ.

**ತರ್ಕತಾಂಡವ ಭಾವದೀಪ :** ಚಂದ್ರಿಕಾಚಾರ್ಯರು ರಚಿಸಿರುವ 'ತರ್ಕತಾಂಡವ'ವನ್ನು ರಾಯರು ತಮ್ಮ 'ಭಾವದೀಪ'ವೆಂಬ ಟಿಪ್ಪಣೀ ವಾಕ್ಯಗಳಿಂದ ಸಂಯೋಜನೆಮಾಡಲು, ಗಂಗೇಶೋಪಾಧ್ಯಾಯನೆಂಬ ತಾರ್ಕಿಕನ 'ಚಿಂತಾಮಣಿ' ಎಂಬ ಗ್ರಂಥವೂ ತಿರಸ್ಕೃತ ಪ್ರಕಾಶವಾಯಿತು. ಹೀಗೆ 'ಚಿಂತಾಮಣಿ'ಯನ್ನೂ ಧಿಕ್ಕರಿಸಿದ ಪದಾರ್ಥವನ್ನು ದಾನ ಮಾಡಿದ್ದರಿಂದ ರಾಯರಿಗೆ ಸಮನಾದ ದಾನ ಶೌಂಡಸ್ಯಾರು ?

**ನ್ಯಾಯಾಮೃತ ಟಿಪ್ಪಣ್ಯಕರಣ :** ವ್ಯಾಸರಾಯರ ನ್ಯಾಯಾಮೃತಕ್ಕೆ ರಾಯರ ಪರಮಗುರುಗಳಾದ ವಿಜಯೀಂದ್ರರೇ "ಆಮೋದತ್ರಯ"ವೆಂಬ ಟಿಪ್ಪಣಿಯನ್ನು ರಚಿಸಿದ್ದರಿಂದ ರಾಯರು ಪುನಃ ಟಿಪ್ಪಣಿಯನ್ನು ರಚನೆ ಮಾಡದೇ, "ಆಮೋದ"ವನ್ನೇ ಪಾಠ ಹೇಳುತ್ತಿದ್ದರು. ಇದರಿಂದ ಅವರ ಕೀರ್ತಿಗೇನು ಕುಂದಿಲ್ಲ. ಏಕೆಂದರೆ ಗುರು (ಪಿತೃ) ವಾಕ್ಯ ಪರಿಪಾಲನೆಯಿಂದ, ಶ್ರೀರಾಮನ ಕೀರ್ತಿ ಇನ್ನೂ ಇಮ್ಮಡಿಸಿದಂತೆಯೇ.

**ರಾಮಚಾರಿತ್ರ್ಯ – ಕೃಷ್ಣಚಾರಿತ್ರ್ಯ ಮಂಜರೀ :** ಇಡೀ ರಾಮಚಾರಿತ್ರ್ಯವನ್ನು ೧೧ ಶ್ಲೋಕಗಳಲ್ಲಿ, ಇಡೀ ಕೃಷ್ಣಚಾರಿತ್ರ್ಯವನ್ನು ಸುಮಾರು ೨೮ ಪದ್ಯಗಳಲ್ಲಿ ಮುಖ್ಯಾಂಶಗಳನ್ನು ಒಂದೂ ಬಿಡದೆ ಸಂಗ್ರಹಿಸಿರುವುದು ರಾಯರ ಅದ್ಭುತ ಚಮತ್ಕಾರ ನಿಜ. ಆದರೆ ಮಹಾತ್ಮರಿಗೆ ಯಾವುದು ತಾನೇ ಅಸಾಧ್ಯ ? ಹಿಂದೆ ಅಗಸ್ತ್ಯರು ಸಮುದ್ರವನ್ನು ಆಪೋಷಣೋದಕಷ್ಟು ಮಾಡಲಿಲ್ಲವೇ ? ಈ ಸಂದರ್ಭದಲ್ಲಿ ಒಂದು ಸ್ವಾರಸ್ಯಪೂರ್ಣ ಸುಭಾಷಿತ ಪದ್ಯವೂ ಇದೆ.

**ವೈದೇಹಿ ಯಾಹಿ ಕಲಶೋದ್ಭವ ಧರ್ಮಪತ್ನೀಂ ಆಚಕ್ಷ್ವ ರಾವಣವಧಾದಿ ಕಥಾಸ್ಸಮಸ್ತಾಃ । ಪೃಷ್ಟಾಪಿ ಮಾ ವದ ಪಯೋನಿಧಿಬಂಧನಂ ಮೇ ಸಾ ಹಿ ಸ್ವಯಂ ಚುಲಕಿತಾಂಬುನಿಧೇಃ ಕಲತ್ರಮ್ ॥**

**ಭಾಟ್ಟ ಸಂಗ್ರಹ :** ರಾಯರು ರಚಿಸಿರುವ ಪೂರ್ವಮೀಮಾಂಸಾ ದರ್ಶನಕ್ಕೆ ಕೊಡುಗೆಯಾಗಿರುವ 'ಭಾಟ್ಟ ಸಂಗ್ರಹ'ವನ್ನು ಪರಕೀಯ ವಿದ್ವಾಂಸರೂ ಓದುತ್ತಾರೆ.

ರಾಯರ ಕಾಲದಲ್ಲೇ ಮಧುರೆಯ ಮಂತ್ರಿಯಾಗಿದ್ದ ನೀಲಕಂಠ ದೀಕ್ಷಿತನು ಈ ಗ್ರಂಥವನ್ನು ಆನೆಯ ಮೇಲಿಟ್ಟು ಮೆರೆಸಿದನು. ಇದರಿಂದ ಅವರ ಕೀರ್ತಿಯು ೮

ದಿಕ್ಕುಗಳಲ್ಲಿಯೂ ಶೀಘ್ರವಾಗಿ ಹರಡಿತು. ಸಾಧಾರಣವಾದ ಆನೆಯ ಮೇಲೆ ಮೆರವಣಿಗೆಗಿಂತ, ಅಷ್ಟದಿಗ್ಗಜಗಳನ್ನು ಏರಿ ಮೆರೆಯೋಣವೆಂಬ ಕಾರಣ, ರಾಯರ ಕೀರ್ತಿಯು ಶೀಘ್ರವಾಗಿ ಅಷ್ಟದಿಕ್ಕುಗಳಿಗೂ ಧಾವಿಸಿತೆಂಬ ವಾದೀಂದ್ರರ ಉತ್ಪ್ರೇಕ್ಷಾಲಂಕಾರವೂ ಕೂಡ, ಸಹಜವಾಗಿಯೇ ಇದೆ.

ವ್ಯಾಸೇನ ವ್ಯುಪ್ತಬೀಜ : ಈ ಶ್ಲೋಕವು ಸರ್ವತ್ರ ಪ್ರಸಿದ್ಧವಾಗಿದೆ. ಮಧ್ವಸಿದ್ಧಾಂತವೆಂಬ ಕಲ್ಪವೃಕ್ಷದ ಬೆಳವಣಿಗೆಯನ್ನು ವಾದೀಂದ್ರರು ವರ್ಣಿಸಿದ್ದಾರೆ. ಈ ಕಲ್ಪವೃಕ್ಷದ ಬೀಜವನ್ನು ಶ್ರುತಿ ಭೂಮಿಯಲ್ಲಿ ಬಿತ್ತಿದವರು, ಬ್ರಹ್ಮಸೂತ್ರ ಮಹಾಭಾರತ–ಭಾಗವತಾದಿಗಳನ್ನು ರಚಿಸಿದ ವೇದವ್ಯಾಸದೇವರು. ಆನಂದತೀರ್ಥ ಭಗವತ್ಪಾದರಿಂದ ಅದು ಅಂಕುರಿಸಿತು. ಪ್ರಾಚೀನ ಟೀಕಾಕಾರರೆನಿಸಿದ ಪದ್ಮನಾಭತೀರ್ಥ ಪ್ರಭೃತಿಗಳಿಂದ ಅದು ಸ್ವಲ್ಪ ಮೇಲಕ್ಕೆ ಎದ್ದಿತು. ನಂತರ ಟೀಕಾಕೃತ್ಪಾದರಿಂದ ಚೆನ್ನಾಗಿ ಕೊಂಬೆಗಳಾಯಿತು. ವ್ಯಾಸರಾಜರಿಂದ ಚಿಗುರಿತು. ವಿಜಯೀಂದ್ರರಿಂದ ಪುಷ್ಪಿತವಾಗಿ, ಅಂತಿಮ ಘಟ್ಟದಲ್ಲಿ ಶ್ರೀಮಂತ್ರಾಲಯ ಪ್ರಭುಗಳಿಂದ ಸಂಜಾತ ಫಲವುಳ್ಳದ್ದಾಯಿತು. ಬಹುಶಃ ವಾದೀಂದ್ರರ ಈ ಉಪಮಾನ ಪರಂಪರೆಯು, ಶ್ರೀಪುರಂದರದಾಸರ – "ನಾರಾಯಣ ಎಂಬ ನಾಮದ ಬೀಜವ ನಾರದ ಬಿತ್ತಿದ ಧರೆಯೊಳಗೆ" – ಎಂಬ ಪದಪದ್ಯದಿಂದ ಪ್ರಭಾವಿತವಾಗಿರಬಹುದು.

ಇಂತಹ ಪ್ರಹ್ಲಾದಾವತಾರೀ ಶ್ರೀರಾಘವೇಂದ್ರಸ್ವಾಮಿಗಳು, ಸರ್ವಸಜ್ಜನರಿಗೂ ತಮ್ಮ ಟಿಪ್ಪಣೀ ಗ್ರಂಥಗಳ ಜ್ಞಾನವನ್ನು ಕರುಣಿಸಲಿ. "**ತವ ಸಂಕೀರ್ತನಂ ವೇದಶಾಸ್ತ್ರಾರ್ಥಜ್ಞಾನಸಿದ್ಧಯೇ ||**"

**— ಎ. ಸತ್ಯೇಶಾಚಾರ್ಯ**

ತತ್ತ್ವವಾದ ಸಂಚಿಕೆ - ೮
ಆಗಸ್ಟ ೧೯೯೫

# ಗುರುಗುಣಸ್ತವನ

ಕಾವ್ಯಪ್ರಪಂಚಕ್ಕೆ ವಾದೀಂದ್ರತೀರ್ಥರ ಕೊಡುಗೆ ಚಿರಸ್ಮರಣೀಯ. 'ಗುರುಗುಣಸ್ತವನ' ಇವರ ರಚನೆ. ವ್ಯಕ್ತಿಯಲ್ಲಿನ ಶೌರ್ಯ ಔದಾರ್ಯಾದಿ ಗುಣಗಳನ್ನು ಬಣ್ಣಿಸುವ ಕಾವ್ಯಗಳು ಬಹಳಷ್ಟಿವೆ. ವ್ಯಕ್ತಿ ರಚಿಸಿದ ಗ್ರಂಥಗಳನ್ನು ಪರಿಚಯಿಸುವ ಮೂಲಕ ವ್ಯಕ್ತಿಯನ್ನು ಚಿತ್ರಿಸುವ ಕಾವ್ಯಗಳು ವಿರಳ. ಗುರುಗುಣಸ್ತವನವು ಶ್ರೀ ರಾಘವೇಂದ್ರರು ರಚಿಸಿದ ಗ್ರಂಥಗಳ ಪರಿಚಯವನ್ನು ನೀಡುವ ಖಂಡಕಾವ್ಯ.

ಸುಮಧ್ವವಿಜಯವು ಕಾವ್ಯವಾದರೂ ಆಚಾರ್ಯರ ಸಮಗ್ರಜೀವನವನ್ನು ಪರಿಚಯಿಸುವ ಐತಿಹಾಸಿಕ ಕೃತಿ. ೧೫ನೆಯ ಸರ್ಗದಲ್ಲೂ ಮತ್ತು ಬೇರೆ ಕೆಲವು ಸರ್ಗಗಳಲ್ಲೂ ಅವರು ರಚಿಸಿದ ಗ್ರಂಥಗಳ ಉಲ್ಲೇಖವಿದೆ. ವ್ಯಾಸರಾಜರು ರಚಿಸಿದ 'ಗ್ರಂಥಮಾಲಿಕಾ ಸ್ತೋತ್ರ'ವು ಗ್ರಂಥಗಳ ಪಟ್ಟಿಯನ್ನು ನೀಡುವ ಸ್ತೋತ್ರಗ್ರಂಥ. ಆದರೆ 'ಗುರುಗುಣಸ್ತವನ'ವು ಶೃಂಗಾರಾದಿರಸ, ಮಾಧುರ್ಯಾದಿಗುಣಗಳು ಶಬ್ದಾಲಂಕಾರ, ಅರ್ಥಾಲಂಕಾರ ಇತ್ಯಾದಿ ಕಾವ್ಯಧರ್ಮಗಳಿಂದ ಶೋಭಿಸುತ್ತಾ ವನಿಪು ವೈಯ್ಯಾರಗಳಿಂದ ರಸಿಕರ ಮನಕ್ಕೆ ಮುದ ನೀಡುವ ಕೃತಿ. ಈ ನಿಟ್ಟಿನಿಂದ ಇದು ಕಾವ್ಯ ಪ್ರಪಂಚದಲ್ಲಿ ತನ್ನದೇ ಆದ ಸ್ಥಾನಮಾನವನ್ನು ಹೊಂದಿದೆ.

ಇದನ್ನು ರಚಿಸಿದ ವಾದೀಂದ್ರತೀರ್ಥರು ಶ್ರೀರಾಘವೇಂದ್ರರಿಗೆ ಪೂರ್ವಾಶ್ರಮದಲ್ಲಿ ಹಾಗೂ ಉತ್ತರಾಶ್ರಮದಲ್ಲಿಯೂ ಬಂಧುಗಳು. ಶ್ರೀರಾಘವೇಂದ್ರರ ಪೂರ್ವಾಶ್ರಮದ ಮಕ್ಕಳು ಲಕ್ಷ್ಮೀನಾರಾಯಣಾಚಾರ್ಯರು. ಅವರ ಮಗ ಪುರುಷೋತ್ತಮಾಚಾರ್ಯರು. ಅವರ ಪುತ್ರರೇ ಶ್ರೀನಿವಾಸಾಚಾರ್ಯರು. ಅವರೇ ಮುಂದೆ ವಾದೀಂದ್ರತೀರ್ಥರೆಂಬ ಸಾರ್ಥಕ ನಾಮದಿಂದ ಲೋಕಪೂಜಿತರಾದರು.

ಪ್ರಪಂಚಪ್ರಸಿದ್ಧ ಪ್ರಬಂಧವನ್ನು ರಚಿಸುವುದರಲ್ಲಿ ನನಗಿಂತ ಮಿಗಿಲಾದವರಿಲ್ಲ (ಪ್ರಪಂಚಪ್ರಸಿದ್ಧಪ್ರಬಂಧಂ ವಿಧಾತುಂ ವಿರಿಂಚಿಪ್ರಪಂಚೇ ಮದನ್ಯಃ ಕವಿಃ ಕಃ) ಎಂದು ಘಂಟಾಘೋಷವಾಗಿ ಸಾರಿದ ಸುಮತೀಂದ್ರರ ಶಿಷ್ಯರು ವಾದೀಂದ್ರತೀರ್ಥರು. ಇವರಿಗಿರುವ ಕವಿತಾಶಕ್ತಿ ಗುರುಗಳ ವರ. ಆನಂದತೀರ್ಥರ ಭಾಷ್ಯದ ಹಿರಿಮೆ ಗರಿಮೆಯನ್ನು ಸಾರುವ ಕೃತಿಯನ್ನು ಇವರು ಪೂರ್ವಾಶ್ರಮದಲ್ಲಿಯೇ ರಚಿಸಿದ್ದರು. ಅದೇ 'ಸವ್ಯದುರುಕ್ತಿಶಿಕ್ಷಾ'. ಇದಲ್ಲದೇ ಇನ್ನೂ ಹತ್ತಾರು ಗ್ರಂಥಗಳ ರಚನೆಯಿಂದ ವಾಙ್ಮಯ ಪ್ರಪಂಚವನ್ನು ಸಂಪದ್ಭರಿತವನ್ನಾಗಿಸಿದ್ದಾರೆ.

'ರಾಘವೇಂದ್ರವಿಜಯ'ವು ರಾಯರ ಸಮಗ್ರ ಜೀವನವನ್ನು ಚಿತ್ರಿಸುವ ಕಾವ್ಯ. ರಾಘವೇಂದ್ರರು ರಚಿಸಿದ ಕೆಲವೊಂದು ಗ್ರಂಥಗಳ ಮಾಹಿತಿಯೂ ಇಲ್ಲಿ ದೊರೆಯುತ್ತದೆ.

'ಗುರುಗುಣಸ್ತವನ' ಗುರುಗಳ ಗುಣವನ್ನು ಸ್ತುತಿಸುವ ಸ್ತೋತ್ರ ಕಾವ್ಯ. ಜ್ಞಾನವೇ ಶ್ರೇಷ್ಠವಾದ ಗುಣ. (ನ ಹಿ ಜ್ಞಾನೇನ ಸದೃಶಂ) ಈ ಗುಣವೊಂದು ಇದ್ದಲ್ಲಿ ಇತರ ಸದ್ಗುಣಗಳೂ ಇದರ ಹಿಂದೆ ಬಂದು ನೆಲಸುತ್ತವೆ. ಜ್ಞಾನಿಗಳೇ ಭಗವಂತನಿಗೆ ಪ್ರೀತಿಪಾತ್ರರು (ಜ್ಞಾನೀ ಪ್ರಿಯತಮೋಽತೋ ಮೇ). ಎಲ್ಲ ಶಾಸ್ತ್ರಗಳನ್ನು ಓದಿದ ಶ್ರೇಷ್ಠ ಜ್ಞಾನಿಗಳು ಶ್ರೀರಾಘವೇಂದ್ರರು (ಸರ್ವತಂತ್ರಸ್ವತಂತ್ರೋಽಸೌ) ಭಗವಂತನಿಗೆ ಅತ್ಯಂತ ಪ್ರೀತಿಪಾತ್ರರಾದವರು. ಆದರಿಂದಲೇ ಅಪರೋಕ್ಷೀಕೃತಶ್ರೀಶರು. ವಿದ್ವಾಂಸರಿಂದಲೂ ಮಾನ್ಯವಾದ ಅಸಾಧಾರಣಗುಣಗಳ ಖನಿ ಇವರು (ವಿದ್ವತ್ಪರಿಜ್ಞೇಯಮಹಾವಿಶೇಷಃ). ಅವರದು ಬಹುಮುಖ ವ್ಯಕ್ತಿತ್ವ. ಅವರು ವಿದ್ವತ್ ಪ್ರಪಂಚಕ್ಕೆ ನೀಡಿದ ಕೊಡುಗೆಯ ಜ್ಞಾನಮುಖದ ವ್ಯಕ್ತಿತ್ವವನ್ನು ಪರಿಚಯಿಸುವ ಮೂಲಕ ಅವರ ಗುಣಗಾನವನ್ನು ಮಾಡುವ ಕೃತಿ ಈ 'ಗುರುಗುಣಸ್ತವನ'. ಶ್ರೀವಾದೀಂದ್ರರು ಶ್ರೀರಾಘವೇಂದ್ರರ ಗ್ರಂಥರಚನಾ ಕೌಶಲ್ಯವನ್ನು ವರ್ಣಿಸುವ ಮೊದಲು ಅವರ ಪ್ರಾಚೀನ ಪರಂಪರೆಯ ಪರಿಚಯವನ್ನು ನೀಡುತ್ತಾರೆ. ಭಗವಂತನಿಗೆ ಹಾಗೂ ತಮ್ಮಿಂದ ಹಿರಿಯರಾದ ಜ್ಞಾನಿವರೇಣ್ಯರಿಗೆ ವಂದನೆಯನ್ನು ಸಲ್ಲಿಸುತ್ತಾರೆ.

ಮಂಗಳಾಚರಣೆಯ ಶ್ಲೋಕ :

**ಉನ್ಮೀಲನ್ನೀಲನೀರೇರುಹನಿವಹಮಹಃಪುಷ್ಪಿಮುಷ್ಟಿಂಧಯಿಶ್ರೀಃ**
**ಶ್ರೀಭೂದುರ್ಗಾದೃಗಂತಪ್ರಚಯಪರಿಚಯೋದಾರಕಿರ್ಮೀರಭಾವಃ ।**
**ಸ್ವೈರಕ್ಷೀರೋದನಿರ್ಯಚ್ಛಶಿರುಚಿನಿಚಯಾಽಖರ್ವಗರ್ವಾಪನೋದೀ**
**ಪಾತು ಶ್ರೀನೇತುರಸ್ಮಾನ್ ಸಪದಿ ಬುಧಜನತ್ರಾಣದಕ್ಷಃ ಕಟಾಕ್ಷಃ ॥ ೧ ॥**

ಭಗವಂತನ ಕೃಪಾಕಟಾಕ್ಷವನ್ನು ಬಣ್ಣಿಸುವ ಶ್ಲೋಕವಿದು. ಶ್ರೀ ಭೂ ದುರ್ಗಾದೇವಿಯರು ಸರ್ವದಾ ಭಗವಂತನ ಕಟಾಕ್ಷವನ್ನು ವೀಕ್ಷಿಸುತ್ತಾರೆ. ಆ ದೇವಿಯರ ಕಣ್ಣಕಾಂತಿಯಿಂದ ಕೂಡಿ ಭಗವಂತನ ಕಟಾಕ್ಷವು ಚಿತ್ರವರ್ಣವನ್ನು ಪಡೆದಿದೆ. ಅರಳುತ್ತಿರುವ ಕಮಲದ ಕಾಂತಿಯನ್ನೆಲ್ಲ ಬೊಗಸೆಯಿಂದಲೇ ಏಕಾಪೋಶನವಾಗಿ ಹೀರುತ್ತಿರುವಂತಿದೆ ಆ ಕಟಾಕ್ಷ. ಕ್ಷೀರ ಸಾಗರದಿಂದ ಉದಿಸಿದ ಬೆಳದಿಂಗಳನ್ನು ನೀಡುವ ಚಂದ್ರನ ಕಾಂತಿಯ ಗರ್ವವನ್ನು ನಿವಾರಿಸುವ ನಾರಾಯಣನ ಕಟಾಕ್ಷವು ನಮ್ಮನ್ನು ರಕ್ಷಿಸಲಿ.

**ಏಷ ಶ್ರೀರಾಘವೇಂದ್ರಪ್ರತಿವರಚರಿತಾಂಭೋನಿಧಿಃ ಕ್ವಾತಿವೇಲಃ**
**ಕ್ವಾಸೌ ಖದ್ಯೋತಪೋತಪ್ರಮುಷಿತವಿಭವಶ್ಚೇತಸೋ ನಃ ಪ್ರಕಾಶಃ ।**
**ವಂಧ್ಯೈವಾತಃ ಪ್ರತಿಜ್ಞಾ ತದತುಲನಿಖಿಲಾಶ್ಚರ್ಯಚರ್ಯಾಭಿಧಾನೇ**
**ಸ್ಥಾನೇಥಾಪಿ ಕ್ವಚಿತ್ಸ್ಯಾದಿಹ ಪುನರುದಧಿಸ್ನಾನಸಂಕಲ್ಪವತ್ಸಾ ॥ ೧೩ ॥**

ಶ್ರೀರಾಘವೇಂದ್ರರ ಚರಿತೆ ಸಮುದ್ರದಂತೆ ಅಗಾಧವೂ ಅಪಾರವೂ ಆಗಿದೆ. ಆದರೆ ಅದನ್ನು ವರ್ಣಿಸಲು ಪ್ರವೃತ್ತನಾಗಿರುವ ನನ್ನ ಪ್ರತಿಭೆ ಮಿಣುಕುಹುಳದ ಬೆಳಕಿನಂತೆ ಅತ್ಯಲ್ಪ. ಆದ್ದರಿಂದ ಅವರ ಆ ಅಪ್ರತಿಮ ಮಹಿಮೆಯನ್ನು ಸಾರುವೆವೆನ್ನುವ ಮಾತೇ ಅರ್ಥಹೀನ (ಸುಳ್ಳು). ಆದರೂ ಸಮುದ್ರದ ಒಂದು ಮೂಲೆಯಲ್ಲಿ ಮುಳುಗಿ ಸ್ನಾನ ಮಾಡುವವನ ಸಮುದ್ರಸ್ನಾನ ಸಂಕಲ್ಪದಂತೆ ನನ್ನ ಮಾತು ಸಾರ್ಥಕವೆನಿಸೀತು.

**ಧೀರಶ್ರೀರಾಘವೇಂದ್ರ ತ್ವದತುಲರಸನಾರಂಗನೃತ್ಯತ್ಸ್ವಯಂಭೂ-**
**ಯೋಷಾಧಮ್ಮಿಲ್ಲಭಾರಶ್ಲಥಕುಸುಮತತೀಸ್ತ್ವದ್ಗಿರಸ್ಸಂಗಿರಾಮಃ ।**
**ಯಾಭಿಸ್ಸಂಮಿಶ್ರಿತಾಭಿರ್ನಿರವಧಿವಸುಧಾ ವಿಶ್ರುತಾ ಸಾ ಸುಧಾಪಿ**
**ಕ್ಷೋಣೀಗೀರ್ವಾಣಗಮ್ಯಂ ಪರಿಮಲಮತುಲಂ ಸಾಂಪ್ರತಂ ಸಂಪ್ರಪೇದೇ ॥ ೧೯ ॥**

ಜಯತೀರ್ಥರು ರಚಿಸಿರುವ ಅನುವ್ಯಾಖ್ಯಾನ ಟೀಕೆ ನ್ಯಾಯಸುಧಾ. ಅವರ ಮೇಲಿನ ರಾಯರ ಟಿಪ್ಪಣಿ ಪರಿಮಳ. ಪರಿಮಳ ಗ್ರಂಥದ ಕೊನೆಯಲ್ಲಿನ **ಯೇ ತು ನ್ಯಾಯಸುಧಾಪಾನಕಾಮುಕಾ ರಸಿಕಾ ಬುಧಾಃ । ಆಘ್ರಾಯೇಮಂ ಪರಿಮಳಂ ಸೇವಂತಾಂ ತೇ ಸುಧಾಮಿಮಾಮ್ ॥** ಎಂಬ ಶ್ಲೋಕದಲ್ಲಿ ನ್ಯಾಯಸುಧಾವನ್ನು ಓದಲು ಉತ್ಸುಕರಾದ ರಸಿಕರು ಈ ಪರಿಮಳವನ್ನು ಆಘ್ರಾಣಿಸಿ ಸುಧೆಯನ್ನು ಸೇವಿಸಲಿ ಎಂದಿದ್ದಾರೆ ರಾಯರು. ವಾದೀಂದ್ರರು ಈ ರೀತಿ ವರ್ಣಿಸಿದ್ದಾರೆ –

ಶ್ರೀರಾಘವೇಂದ್ರತೀರ್ಥರೇ ! ನಿಮ್ಮ ನಾಲಿಗೆ ರಂಗಭೂಮಿ, ಬ್ರಹ್ಮದೇವರ ಪತ್ನಿ ಸರಸ್ವತಿಯು ಮೈ ಮರೆತು ಅಲ್ಲಿ ನಲಿಯುತ್ತಿರುವಾಗ ಕೇಶಪಾಶದಿಂದ ಉದುರಿದ ಪುಷ್ಪಗಳೇ ನಿಮ್ಮ ವಾಕ್ಯಗಳು. ದೇವಲೋಕದಲ್ಲಿನ ಅಮೃತವು ತನ್ನ ಸೌಗಂಧ್ಯದಿಂದ ಎಲ್ಲ ದೇವತೆಗಳಿಗೂ ಸೇವನಾರ್ಹವಾಗಿದೆ. ಅದರಂತೆ ನಿಮ್ಮ ಪರಿಮಳ ಟಿಪ್ಪಣಿ-ಯಿಂದಾಗಿ ನ್ಯಾಯಸುಧಾ ಗ್ರಂಥವೂ ಸಹ ಎಲ್ಲ ಭೂಸುರರೂ ಓದಿ ಅರ್ಥ ಅರಿಯಲು ಅನುಕೂಲವಾಗಿದೆ.

ಆಚಾರ್ಯರ ಸೂತ್ರಭಾಷ್ಯದ ಮೇಲಿನ ಜಯತೀರ್ಥರ ಟೀಕೆ "ತತ್ವಪ್ರಕಾಶಿಕಾ" ಅದರ ಮೇಲಿನ ರಾಯರ ಟಿಪ್ಪಣಿ ಭಾವದೀಪ ಇದು ಸಾರ್ಥಕ ನಾಮವುಳ್ಳ ಕೃತಿ. ಅದನ್ನು ವರ್ಣಿಸುವ ಬಗೆ ಈ ರೀತಿ ಇದೆ.

**ಪ್ರಾಯಃ ಪ್ರಾಗನ್ಯದೀಯಾತನುತರವಿವೃತಿಗ್ರಂಥವಾಸೋವಿಹೀನಾ**
**ಹ್ರೀಣಾ ನಾದರ್ಶಿ ಧೀರೈರಪಿ ಕಿಲ ಯುವತಿರ್ಭಾಷ್ಯಟೀಕಾಭಿಧಾನಾ ।**
**ಅದ್ಯ ಶ್ರೀರಾಘವೇಂದ್ರವ್ರತಿಕೃತವಿವೃತಿಪ್ರೌಢಕೌಶೇಯರತ್ನಂ**
**ಸ್ನೇಹಾಯುಕ್ತಂ ವಸಾನಾ ವಿಹರತಿ ಸುಧಿಯಾಮಗ್ರತಃ ಸ್ವೈರಿಣೀವ ॥ ೨೦ ॥**

ತತ್ತ್ವಪ್ರಕಾಶಿಕಾ ಎಂಬ ತರುಣಿಗೆ ಪೂರ್ಣ ಮೈ ಮುಚ್ಚುವ ವಸ್ತ್ರ ಈವರೆಗೂ ದೊರೆತಿರಲಿಲ್ಲ. ಆದರಿಂದ ವಿದ್ವಸ್ಮಂಡಲಿಯ ಮುಂದೆ ತನ್ನ ಭಾವಭಂಗಿಯನ್ನು ತೋರದೆ ನಾಚಿಕೆಯಿಂದ ಗುಪ್ತಳಾಗಿದ್ದಳು. ಶ್ರೀರಾಘವೇಂದ್ರರು ಈ ತರುಣಿಗೆ ಭಾವದೀಪವೆಂಬ ಅಮೂಲ್ಯ ಹಾಗೂ ಉತ್ಕೃಷ್ಟವಾದ ರೇಶ್ಮೆ ವಸ್ತ್ರವನ್ನು ತೊಡಿಸಿದರು. ಇದರಿಂದ ಈಗ ಈ ತತ್ತ್ವಪ್ರಕಾಶಿಕಾ ಯುವತಿ, ನಿಸ್ಸಂಕೋಚವಾಗಿ ಪಂಡಿತಮಂಡಲಿಯಲ್ಲಿ ತನ್ನ ಹಾವಭಾವಗಳನ್ನು ತೋರಿಸುತ್ತಾ ನರ್ತಿಸುತ್ತಿರುವಳು.

ರಾಘವೇಂದ್ರರು ರಚಿಸಿದ ಭಾವದೀಪ ಟಿಪ್ಪಣಿಯಿಂದ ಬುಧಜನರು ತತ್ತ್ವಪ್ರಕಾಶಿಕಾದ ಅಭಿಪ್ರಾಯವನ್ನು ಅರಿಯುವಂತಾಯಿತು. ಹೀಗೆ ಅವರ ಭಾವದೀಪ ಟಿಪ್ಪಣಿಯ ಅವಶ್ಯಕತೆ ಮತ್ತು ಆದರಿಂದಾದ ಪ್ರಯೋಜನವನ್ನು ಹೃದಯಂಗಮವಾಗಿ ವರ್ಣಿಸಿದ್ದಾರೆ.

"ಟಿಪ್ಪಣ್ಯಾಚಾರ್ಯ ಚಕ್ರವರ್ತಿ" ಎಂದು ಇವರು ಮಾನ್ಯತೆಯನ್ನು ಪಡೆದಿದ್ದಾರೆ. ಆದಕ್ಕೆ ಇವರ ಟಿಪ್ಪಣಿಗಳ ವೈಶಿಷ್ಟ್ಯವೇ ಕಾರಣ. ಅವರ ಗ್ರಂಥ ರಚನಾ ಚಾತುರ್ಯವನ್ನು ವರ್ಣಿಸುವ ಶ್ಲೋಕವಿದು –

**ಚಿತ್ತೇ ನಾಯುಕ್ತಮರ್ಥಂ ಕಲಯತಿ ಸಹಸಾ ನಾಭಿಧತ್ತೇ ನ ಸದ್ಭಿ-**
**ಸ್ಸಾಕಂ ಮೀಮಾಂಸತೇ ವಾ ನ ಲಿಖತಿ ವಚಸೋದ್ಘಾಟಯತ್ಯಾಶಯಂ ಸ್ವಂ ।**
**ಉಕ್ತಂ ನೋ ವಕ್ತಿ ಭೂಯಃ ಕ್ವಚಿದಪಿ ಲಿಖಿತಂ ನೈವ ನಿರ್ಮಾರ್ಷ್ಟಿ ತಸ್ಮಾ-**
**ದಸ್ಮಾಭಿಸ್ಸತ್ಪ್ರಬಂಧಪ್ರಣಯನವಿಷಯೇ ಸ್ತೂಯತೇ ರಾಘವೇಂದ್ರಃ ॥ ೧೫ ॥**

ಶ್ರೀರಾಘವೇಂದ್ರರು ಎಂದಿಗೂ ಅಸಂಗತವಾದ ಅನುಚಿತವಾದ ವಿಷಯದ ಆಲೋಚನೆ ಮಾಡುವವರಲ್ಲ. ಸಜ್ಜನರೊಂದಿಗೆ ವ್ಯರ್ಥ ಕೋಲಾಹಲವನ್ನು ಮಾಡುವವರಲ್ಲ. ಅಯುಕ್ತವಾದ ಅರ್ಥವನ್ನು ಎಂದಿಗೂ ಬರೆಯುವುದಿಲ್ಲ. ದುಡುಕಿ ಮಾತನಾಡುವವರಲ್ಲ. ಒಮ್ಮೆ ಹೇಳಿದ ವಿಷಯವನ್ನು ಮತ್ತೊಮ್ಮೆ ಹೇಳುವುದಿಲ್ಲ. ಒಮ್ಮೆ ಬರೆದುದನ್ನು ಎಂದಿಗೂ ಅಳಿಸುವುದಿಲ್ಲ. ತಪ್ಪು ಚಿಂತನೆ ಬುದ್ಧಿಯಲ್ಲಿ ಬಂದರೆ ಅದು ಗ್ರಂಥದಲ್ಲಿ ಮೂಡೀತು. ಆದರೆ ತಪ್ಪಾದ ಚಿಂತನೆ ಅವರ ಬುದ್ಧಿಗೆ ಎಂದೂ ಬರುವುದಿಲ್ಲ. ಈ ಎಲ್ಲ ಕಾರಣಗಳಿಂದ ಉತ್ತಮ ಪ್ರಬಂಧ ರಚನೆಯಲ್ಲಿ ಶ್ರೀರಾಘವೇಂದ್ರರು ವಿದ್ವತ್ ಸಮಾಜದಿಂದ ಸ್ತುತ್ಯರಾಗಿದ್ದಾರೆ.

'ಗುರುಗುಣಸ್ತವನ'ದಲ್ಲಿ ಸುಮಾರು ೩೮ ಶ್ಲೋಕಗಳಿವೆ. ಅವುಗಳ ಒಂದು ಸ್ಥೂಲ ಚಿತ್ರಣ :

(ಶ್ಲೋಕ ಸಂಖ್ಯೆಯನ್ನು ಕಂಸಿನಲ್ಲಿ ಕಾಣಿಸಿದೆ.)

ಮಂಗಳಾಚರಣೆ ಭಗವಂತನಲ್ಲಿ ಪ್ರಾರ್ಥನೆ (೧), ಲಕ್ಷ್ಮೀದೇವಿಯ ಪ್ರಾರ್ಥನೆ (೨), ಮುಖ್ಯಪ್ರಾಣದೇವರ ಪ್ರಾರ್ಥನೆ (೩), ಶ್ರೀಮದಾಚಾರ್ಯರ ಪ್ರಾರ್ಥನೆ (೪), ಶ್ರೀಜಯತೀರ್ಥರ ಸ್ತುತಿ (೫), ವಿಬುಧೇಂದ್ರತೀರ್ಥರ ಗುಣಗಾನ (೬), ವ್ಯಾಸರಾಜರ ಪ್ರಾರ್ಥನೆ (೭), ವಿಜಯೀಂದ್ರತೀರ್ಥರ ಪ್ರಾರ್ಥನೆ (೮), ಸುಧೀಂದ್ರತೀರ್ಥರ ಪ್ರಾರ್ಥನೆ (೯), ಶ್ರೀರಾಘವೇಂದ್ರತೀರ್ಥರ ಪ್ರಾರ್ಥನೆ (೧೦), ಆಶ್ರಮ ಗುರುಗಳೂ ವಿದ್ಯಾಗುರು-ಗಳೂ ಆದ ಉಪೇಂದ್ರತೀರ್ಥರ ಸ್ತುತಿ. (೧೧), ಗುರುಗಳ ಗುಣಸ್ತವನದ ಅವಶ್ಯಕತೆ (೧೨), ಶ್ರೀರಾಘವೇಂದ್ರರ ಮಹಿಮೆ ಸಮುದ್ರದಂತೆ ಅಪಾರ (೧೩), ಶ್ರೀರಾಘವೇಂದ್ರರ ಹೃದಯಾಕಾಶದಿಂದ ಹೊರಹೊಮ್ಮುವ ತೇಜಸ್ಸು (೧೪), ಶ್ರೀರಾಘವೇಂದ್ರರ ಗ್ರಂಥರಚನಾ ಚಾತುರ್ಯ (೧೫), ಅಣುಮಧ್ವವಿಜಯ (ಪ್ರಮೇಯನವಮಾಲಿಕಾ) ವ್ಯಾಖ್ಯಾನ (೧೬), ವಾದಾವಲೀ ಗ್ರಂಥದ ಟಿಪ್ಪಣಿ. ವಾದಾವಲೀ ಹಿಂದುಮುಂದಾಗಿ ದಾವಾವಲಿ ಆಯಿತು. (೧೭), ಚಂದ್ರಿಕಾ ಪ್ರಕಾಶ (೧೮), ನ್ಯಾಯಸುಧಾ ಪರಿಮಳ (೧೯), ತತ್ವಪ್ರಕಾಶಿಕಾ ಭಾವದೀಪ (೨೦), ನ್ಯಾಯಮುಕ್ತಾವಲೀ (೨೧), ಅಣುಭಾಷ್ಯ ತತ್ವಮಂಜರೀ (೨೨), ತಂತ್ರದೀಪಿಕಾ (೨೩), ಮಂತ್ರಾರ್ಥ ಮಂಜರೀ (೨೪), ಗೀತಾರ್ಥಸಂಗ್ರಹ (ಗೀತಾವಿವೃತ್ತಿ) (೨೫), ಗೀತಾಭಾಷ್ಯಪ್ರಮೇಯದೀಪಿಕಾ ಟಿಪ್ಪಣೀ (೨೬), ಗೀತಾ ತಾತ್ಪರ್ಯ ಟೀಕಾ ಟಿಪ್ಪಣೀ (೨೭), ರಾಯರ ಪೂರ್ವಾಶ್ರಮದ ಮಕ್ಕಳಾದ ಲಕ್ಷ್ಮೀನಾರಾಯಣಾಚಾರ್ಯರು ರಚಿಸಿದ ಋಗ್ಭಾಷ್ಯ ಟೀಕಾವಿವೃತಿ (೨೮), ಪುರುಷ ಸೂಕ್ತವೇ ಮೊದಲಾದ ಪಂಚಸೂಕ್ತವ್ಯಾಖ್ಯಾನ (೨೯), ಉಪನಿಷತ್ ಖಂಡಾರ್ಥ (೩೦), ಋಕ್‌ಯಜುಸ್ ಸಾಮವೇದಗಳ ವ್ಯಾಖ್ಯಾನ (೩೧), ದಶಪ್ರಕರಣಗಳ ಟಿಪ್ಪಣಿ (೩೨), ತರ್ಕತಾಂಡವ ವ್ಯಾಖ್ಯಾನ (೩೩), ನ್ಯಾಯಾಮೃತಕ್ಕೆ ಟಿಪ್ಪಣಿ ಬರೆಯದಿರುವುದರಿಂದ ಅಪಕೀರ್ತಿ ಇಲ್ಲ (೩೪), ರಾಮ ಚಾರಿತ್ರ ಮಂಜರೀ, ಕೃಷ್ಣ ಚಾರಿತ್ರ ಮಂಜರೀ (೩೫), ಭಾಟ್ಟ ಸಂಗ್ರಹ (೩೬), ಮಧ್ವ ಸಿದ್ಧಾಂತವೆಂಬ ಕಲ್ಪವೃಕ್ಷ ಫಲಿಸಿತು (೩೭), ಉಪಸಂಹಾರ (೩೮).

ವಾಙ್ಮಯ ಪ್ರಪಂಚಕ್ಕೆ ಇಷ್ಟು ಬೃಹತ್ತಾದ ಕೊಡುಗೆಗೆ ಕಾರಣ ಅವರ ವ್ಯಾಪಕವಾದ ಹಾಗೂ ಆಳವಾದ ಅಧ್ಯಯನ (**ವೇತ್ತಿ ವರ್ಣನಿಚಯಂ ಸಮಯಾನಾಂ ಸಂಖ್ಯಯಾ ಸಹ ಧಿಯೈಷ ಸಹಾರ್ಥೈಃ ||**). ಓದಲು ಉಚಿತವಾದುದನ್ನೆಲ್ಲ ಓದುತ್ತಿದ್ದರು (**ಯದ್ಯದ್ ವೇದ್ಯಂ ತತ್ತದಭ್ಯಸ್ಯತಿ ಸ್ಮ**). ಅಧ್ಯಯನ–ಅಧ್ಯಾಪನ, ಗ್ರಂಥ ರಚನೆ-ಗಾಗಿಯೇ ತಮ್ಮ ಜೀವನವನ್ನು ಮುಡುಪಾಗಿಟ್ಟಿದ್ದರು. ಇಂತಹ ಮಹಾನುಭಾವರಿಂದ ಮಧ್ವ ಸಿದ್ಧಾಂತವೆಂಬ ಕಲ್ಪವೃಕ್ಷ ಫಲಿಸಿತು ಎಂಬ ವಾದೀಂದ್ರರ ಮಾತು ಬಹಳಷ್ಟು ಅರ್ಥಗರ್ಭಿತ.

**ವ್ಯಾಸೇನ ವ್ಯುಪ್ತಬೀಜಃ ಶ್ರುತಿಭುವಿ ಭಗವತ್ಪಾದಲಬ್ಧಾಂಕುರಶ್ರೀಃ**
**ಪ್ರತ್ನೈರೀಷತ್ಪ್ರಭಿನ್ನೋಽಜನಿ ಜಯಮುನಿನಾ ಸಮ್ಯಗುದ್ಭಿನ್ನಶಾಖಃ |**

ಮೌನೀಶವ್ಯಾಸರಾಜಾದುದಿತಕಿಸಲಯಃ ಪುಷ್ಪಿತೋಽಯಂ ಜಯೀಂದ್ರಾತ್
ಅದ್ಯ ಶ್ರೀರಾಘವೇಂದ್ರಾದ್ವಿಲಸತಿ ಫಲಿತೋ ಮಧ್ವಸಿದ್ಧಾಂತಶಾಖೀ ॥ ೩೭ ॥

ವೇದಾರ್ಥ ನಿರ್ಣಯಕ್ಕಾಗಿ ವೇದವ್ಯಾಸರು ಬ್ರಹ್ಮಸೂತ್ರಗಳನ್ನು ರಚಿಸಿದರು. ವೇದವಾಙ್ಮಯವೆಂಬ ಫಲವತ್ತಾದ ಭೂಮಿಯಲ್ಲಿ ಬ್ರಹ್ಮಸೂತ್ರವೆಂಬ ಬೀಜವನ್ನು ಬಿತ್ತಿದರು. ಆಚಾರ್ಯರಿಂದ ಭಾಷ್ಯವೆಂಬ ಅಂಕುರ ಮೂಡಿತು. ತ್ರಿವಿಕ್ರಮ ಪಂಡಿತರೇ ಮೊದಲಾದವರ ವ್ಯಾಖ್ಯಾನಗಳೆಂಬ ಚಿಗುರು ಕಾಣಿಸಿತು. ಅನಂತರ ಶ್ರೀಜಯತೀರ್ಥರ ನ್ಯಾಯಸುಧಾದಿ ಟೊಂಗೆಗಳು ಬೆಳೆದವು. ವ್ಯಾಸರಾಜರಿಂದ ನ್ಯಾಯಾಮೃತವೇ ಮೊದಲಾದ ಅಸದೃಶಗ್ರಂಥಗಳೆಂಬ ಚಿಗುರೆಲೆಗಳು ಬಿಟ್ಟವು. ವಿಜಯೀಂದ್ರತೀರ್ಥರ ನೂರನಾಲ್ಕು (೧೦೪) ಗ್ರಂಥಗಳೆಂಬ ಹೂಗಳು ಅರಳಿದವು. ಈಗ ರಾಘವೇಂದ್ರತೀರ್ಥರ ಪರಿಮಳ, ಭಾವದೀಪ, ನ್ಯಾಯದೀಪ, ಪ್ರಕಾಶ ಇತ್ಯಾದಿ ರೂಪದಲ್ಲಿ ಹಣ್ಣುಗಳು ಪ್ರಕಟಗೊಂಡವು. ಹೀಗೆ ಮಧ್ವಸಿದ್ಧಾಂತವೆಂಬ ಕಲ್ಪವೃಕ್ಷವು ಹೆಮ್ಮರವಾಗಿ ಬೆಳೆದು ಫಲ ನೀಡುತ್ತಿದೆ. ರಾಘವೇಂದ್ರರ ಟಿಪ್ಪಣಿಗಳ ಅಧ್ಯಯನದಿಂದ ಓದುಗನಿಗೆ ಆ ಕಲ್ಪವೃಕ್ಷವು ಮೋಕ್ಷ ಎಂಬ ಪುರುಷಾರ್ಥವನ್ನೇ ನೀಡುತ್ತದೆ.

ಈ ಒಂದು ರೂಪಕ ಸಹೃದಯರ.ಮನಸ್ಸನ್ನು ಸೂರೆಗೊಳಿಸುತ್ತದೆ.

ಈ ಸುಂದರವಾದ 'ಗುರುಗುಣಸ್ತವನ'ವನ್ನು ವಾದೀಂದ್ರತೀರ್ಥರು ಶ್ರೀರಾಘವೇಂದ್ರ ವೃಂದಾವನದ ಮುಂದೆ ಹಾಡಿದಾಗ ರಾಯರೇ ಮೆಚ್ಚಿ ತಲೆದೂಗಿದರಂತೆ.

— ವಿದ್ವಾನ್ ಸಿ.ಹೆಚ್.ಬದರೀನಾಥ ಎಂ.ಎ.

("ಶ್ರೀರಾಘವೇಂದ್ರಗುರುಸಾರ್ವಭೌಮರ ಕೃತಿಗಳ ಪರಿಚಯಾತ್ಮಕ ಪ್ರಬಂಧಗಳು"
ಪ್ರಕಾಶನ – ಶ್ರೀವಿಶ್ವೇಶತೀರ್ಥ ಪ್ರತಿಷ್ಠಾನ, ಮೈಸೂರು)

# *"Gurugunastavana"*

## FOREWARD

The *Raghavendra-Vijaya* of Narayanacharya and the *Gurugunastavana* of Sri Vadindra Tirtha (1728-43) are the two main sources of authentic information regarding the life and works of Sri Raghavendra Swami (1623-71) the former is by the sister's son of Sri Raghavendra and is therefore a contemporary biography of the illustrious Saint of Mantralaya. The latter, tho' going by name of a "Stotra", is much more than a panegyric. The historical value of both these works is indisputable. The author of the *Gurugunastavanam* was the great-grandson of Sri Raghavendra and had the honour of succeeding to his Pitha in course of time.

Both the above-mentioned authors had excellent poetic gifts and were masters of the art of Kavya. As a matter of fact we find a succession of distinguished writers with marked poetic abilities from Vijayindra Tirtha downwards in the history of this Mutt. They stood high in the estimation of contemporary literary circles. It may be stated that this was due to no small measure to the prevailing spirit of the times and the renaissance of Sanskrit literature during the golden age of the Vijayanagar and Nayak Rulers in S. India, in the 16th and 17th centuries. After the fall of the Vijayanagar Empire in 1567, the cultural capital of the Empire moved down to the Cholamandala and further south where the Nayaks of Tanjore and Madurai played a notable part in fostering the cultural heritage of the Hindu Empire with devotion and zest. A great deal of this credit for the preservation and advancement of the cultural legacy of the Vijayanagar Empire in the fields of art, literature, dance, drama, music, Veda and Vedanta shastras in the Post-Vijayanagar period must be given to the rulers of the great Nayak dynasties of Tanjore and Madurai. The Maratha Rulers of Tanjore who succeeded the Nayaks inherited the sumptuous legacy left by the Nayaks and followed their

example in maintaining the high standards set by the Nayaks. If the achievements of the Nayaks do not stand out today before historians, it is due simply to the blurring of historical memories.

The age of Raghavendra Tirtha represents the concluding part of the glorious age of the Nayakas of Tanjore, in S. Indian history. The *Gurugunastavana* seeks to recreate the image of the glorious part played by the three great predecessors of Raghavendra viz., Sri Vyasaraya, Sri Vijayindra and Sri Sudhindra and of Sri Raghavendra himself in the literary, cultural and philosophical life of their times. It is a thrilling experience to contemplate the pen-pictures of these great men that Vadindra has placed before us in the moving words of his poem.

For the *Gurugunastavana* is nothing short of a Kavya in the best sense of the term, short, sweet and lingering in the sheer felicity of its sound-effects, its powerful imagery and beautiful poetic concsits. The Sragdhara as handled by him has a distinctive ring of its own like the Mandakranta of Kalidasa. His fondness for the use of recondice expressions such as *mushthimdhaya, pathoruhalih, parivrdha, rolamba, dhammilla, patirasara, mrgamada etc.,* symptomatic of the age of Sahrdayas which produced stalwarts like Nilakantha, Dikshita, Rangarajadhavari, Rajachudamani, Dikshita and others, in S. Indian history.

Vadindra's daring simile in comparing Vyasaraya's trinity of works, with grim humor, to the three eyes of the Man-lion of Madhva-Siddhanta (Ver.6), his gorgeous use of Samasokti and Rupaka alamkaras in ver. 19, his dexterous play on the name "Vadavali" by transposition of the syllables in the opening word (Ver. 17) and last, but not the least, his beautiful metaphor of the mighty tree of Madhva Siddhanta grown out of the seed planted by Vedavyasa on Vedic soil, in the concluding verse of the *Gurugunastavana*, are sufficient testimony to the poetic excellences of the work.

Apart from its literary merits, the work gives detailed information about the winsome personality of Sri Raghavendra, the central figure of his poem, his literary output, and the varied excellences and special features of his

works both individually and collectively (ver. 15) Vadindra gives most valuable historical information as to how Sri Raghavendra's work on Purva-Mimamsa entitled *Bhatta-Samngraha* was given public recognition by his illustrious contemporary Nilakantha Diksita the minister of Tirumala Nayaka (1623-59) of Madurai :

"ಮಂತ್ರಿಶ್ರೀನೀಲಕಂಠಾಭಿಧಮಖಿಮಣಿನಾ ಭಟ್ಟತಂತ್ರಾನುಬಂಧೇ.... ॥"

The work thus serves as a companion volume to the *Raghavendra Vijaya* and fills a gap in the original biography by giving ample details regarding the literary output of Sri Raghavendra and the special place and importance of each of his works. For a complete picture of the life career and personality of Sri Raghavendra these two works are therefore to read together. It is the realization of this truth that has inspired my esteemed friend Raja Gururajacharya, himself a scion of the family of Sri Raghavendra, to bring out an edition of the *Gurugunastavana* also now, after his earlier edition of the *Raghavendra Vijaya.*

In the present edition, Sri Gururajacharya has first given the gist of each verse of the original in Kannada with brief introductory remarks wherever necessary. This is followed by the *anvayartha* of the verses. Then follow special commentary notes and exposition of the *alamkaras* to be found in verses. In giving the definition of the various *alamkaras* he has done a very useful service to the cause of Dvaita Literature by setting forth the definitions and examples of the relevant *alamkaras* from Sri Sudhindra Tirtha's *Alamkara Manjari.* This is a work which deserves to be published and brought to the notice of all Alamkarikas. For purpose of his Kannada translation and notes on the Alamkaras Sri Gururajacharya has drawn upon two important commentaries on the *Gurugunastavana* the first one by Sri Vasudhendra Tirtha (1743-61) and second by Sri Dhirendra Tirtha. There are important differences in the readings of some of verses between these two commentators. While noting these, Sri Gururajacharya has chosen to follow the readings of the latter. The commentary of Dhirendra seems to have been written in his *Purvashrama* when he

was known as Jayaramacharya and when he was still a student under Vadindra Tirtha.

With one single exception in the case of verse 36, Dhirendra's readings seem to be preferable (see Verses 4, 5 and 20). But in Verse 36, the phrase "*Makhi Manina*" describing Nilakantha Dikshita renders the reading "Tantra Sri" at beginning superfluous. For "Makhimani" is capable of suggesting special erudition in Purva Mimamsa Sastra required for being a great sacrificer. In view of this the reading "*Mantri Sri Nilakanthabhidha-Makhimanina*" found in Vasudhendra's reading and appearing in the next printed in the Stotra-*Mahodadhi,* years ago, from Belgaum, seems to be the more acceptable reading.

The commentary of Sri Dhirendra has one additional verse (No. 2) and in a different metre. It has also a major variant reading for two quarters in verse 11. These points have been duly noted by Sri Gururajacharya. He has given us a most thoughtful and illuminating note of his own on Verse 28 on the significance of the expression "*Pratitavrata*" (pp. 74-78). The good work that Sri Gururajacharya has himself been doing all these years in bringing to light the works of Sri Vijayindra and other Matesrs and his present edition itself go to corroborate what Sri Gururajacharya has said about the overtones of the expression "*Pratitavrata*" used by Vadeendra, in describing Sri Raghavendra.

I would only suggest to my esteemed friend Sri Gururajacharya that he should also give us a Devanagari edition of the *Gurugunastavana* with the commentaries of Vasudhendra and Dhirendra in the original, to benefit a wider circle of readers, both inside and outside the Vaishnava community. For many non-Madhvas too would like to sing the praises of Sri Raghavendra- the friend who helps all those who call for his help.

*Vidyabhusana, Shastranidhi, Dvaitavedanta Rasajna*
**Dr. B.N.K. Sharma** M.A., Ph.D., D.Litt.
Ruparel College, Bombay-16

(ಶ್ರೀಪಾದಪುತ್ರ ಶ್ರೀ ರಾಜಾ ಶ್ರೀ ಗುರುರಾಜಾಚಾರ್ಯರು ಪ್ರಕಟಿಸಿದ ಗುರುಗುಣಸ್ತವನಕ್ಕಾಗಿ ಬರೆದ ಮುನ್ನುಡಿ)

# ಅವಶ್ಯ ಸಂಗ್ರಹಣೀಯ ಅನುವಾದಿತ ಗ್ರಂಥಗಳು

## ಸಂಪಾದಕ ಹಾಗೂ ಅನುವಾದಕ ಆ.ರಾ. ಪಂಚಮುಖಿ

(ಮೂಲ ಹಾಗೂ ಕನ್ನಡಾನುವಾದ)

1) ಚೈತ್ರಮಾಸ ಮಹಾತ್ಮೆ
★ 2) ವೈಶಾಖಮಾಸ ಮಹಾತ್ಮೆ
★ 3) ಜ್ಯೇಷ್ಠಮಾಸ ಮಹಾತ್ಮೆ
4) ಆಷಾಢಮಾಸ ಮಹಾತ್ಮೆ
★ 5) ಶ್ರಾವಣಮಾಸ ಮಹಾತ್ಮೆ
6) ಭಾದ್ರಪದಮಾಸ ಮಹಾತ್ಮೆ
★ 7) ಆಶ್ವೀನಮಾಸ ಮಹಾತ್ಮೆ
8) ಕಾರ್ತೀಕಮಾಸ ಮಹಾತ್ಮೆ
★ 9) ಮಾರ್ಗಶೀರ್ಷಮಾಸ ಮಹಾತ್ಮೆ
★ 10) ಪುಷ್ಯಮಾಸ ಮಹಾತ್ಮೆ
11) ಮಾಘಮಾಸ ಮಹಾತ್ಮೆ
12) ಫಾಲ್ಗುಣಮಾಸ ಮಹಾತ್ಮೆ
13) ಚಾತುರ್ಮಾಸ್ಯ ಮಹಾತ್ಮೆ
14) 26 ಏಕಾದಶೀ ಮಹಾತ್ಮೆ
15) ಧನುರ್ಮಾಸ ಮಹಾತ್ಮೆ
16) ಗಯಾ ಮಹಾತ್ಮೆ
17) ಶ್ರೀರಾಘವೇಂದ್ರವಿಜಯ
★ 18) ಭಗದ್ಗೀತಾ ಸಾರೋದ್ಧಾರ
★ 19) ಸುಂದರಕಾಂಡ ರಾಮಾಯಣ
★ 20) ವಿಷ್ಣುಸ್ತುತಿ ವ್ಯಾಖ್ಯಾನ
21) ಶ್ರೀ ಬದರೀ ಕ್ಷೇತ್ರ ಮಹಾತ್ಮೆ
★ 22) ಶ್ರೀ ಮಧ್ವಗುರು ವೈಭವ

★ ದ್ವಿತೀಯಾವೃತ್ತಿ ಅಚ್ಚಿನಲ್ಲಿ

---

**ಗುರುಗುಣಸ್ತವನಮ್** ಬೆಲೆ : ರೂ 80/-